# ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ (ದೌರ್ಜನ್ಯ ತಡೆ) ಕಾಯ್ದೆ-1989

## 20 ವರ್ಷಗಳ ಅನುಷ್ಠಾನ

# ರಾಷ್ಟ್ರೀಯ ವರದಿ

ಪ.ಜಾತಿ/ಪಂಗಡ (ದೌರ್ಜನ್ಯ ತಡೆ) ಕಾಯ್ದೆ-1989
ಮೇಲ್ವಿಚಾರಣಾ ಮತ್ತು ಬಲವರ್ಧನಾ ಸಮಿತಿ

*"For a successful revolution it is not enough that there is discontent. What is required is a profound and thorough conviction of the justice, necessity and importance of political and social rights."*

**Dr. B.R. Ambedkar**



*Preparation of the Report Card:* Aloysius Irudayam SJ & Jayshree Mangubhai

*Assisted by:* Eugine Rosario SJ, Abhay Kumar, Abirami Jotheeswaran, Amit Kr. Nayak, Ashim Boral, Ashutosh Kr. Vishal, Iram Siddiqui, Jesintha Mary, Kamal Kispotta, Keshav Jailiya, Rahul Singh, J. Selvi, Sindhu K., Umesh Babu, Vineet Jingala

**Initiating Organisations:**

Adharshila, Alternative Forum for Dalit Liberation, AP Dalit Bahujan Shramik Union, All India Dalit Mahila Adhikar Manch, Alliance for Dalit Rights, Ambedkar Lohiya Vichar Manch, Anhad, CBCI Commission for SC/ST/BC, Centre for Dalit Rights, Centre for Social Equity and Inclusion, Centre for Mountain Dalit Rights Himachal Pradesh, Centre for Social Justice, Centre for Social Justice & Development, CSRD-People Monitoring Committee, Cornerstone, Dalit Aarthik Adhikar Aandolan, Dalit Action Group, Dalit Dasta Virodhi Manch, Dalit Foundation, Dalit Movement for Human Rights and Dignity, Dalit Nyay Andolan, Dalit Samanway, Development Initiative, Dr. Ambedkar Agriculture Development and Research Institution, Dr. Ambedkar Excellence Education and Public Welfare Institution Samiti, Dynamic Action Group, Evidence, Human Rights Alert, Human Rights Forum for Dalit Liberation - Karnataka, Human Rights Forum for Dalit Liberation - TN, Human Rights Foundation, Human Rights Law Network, Indian Alliance for Child Rights, Indian Institute of Dalit Studies, Indraprastha Public Affairs Centre, Insaaf Dilao Committee, Jana Vikas – Orissa, Jan Sahas, Janvikas – Gujarat, Jeevika, Karnataka Dalit Mahila Vedike, MANUSKI, Manviya Haque Abhiyan, Multiple Action Research Group, NCCI Commission on Dalits, Narigunjan, National Action Forum for Social Justice, National Campaign on Dalit Human Rights, National Confederation of Dalit Organizations, National Council of Dalit Christians, National Dalit Election Watch, National Dalit Forum, National Dalit Movement for Justice, National Federation for Dalit Land Rights Movement, National Federation for Dalit Women, Navsarjan Trust, [illegible] Rights, People's Action for Rural Awakening, People's Watch, P[illegible] (AP Bhawan), Safai Karmachari Andolan, SAKSHI – Human [illegible] SICHREM, VICALP, WGHR, YUVA.

**Supported by:**






# ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ (ದೌರ್ಜನ್ಯ ತಡೆ) ಕಾಯ್ದೆ-1989

## 20 ವರ್ಷಗಳ ಅನುಷ್ಠಾನ

## ರಾಷ್ಟ್ರೀಯ ವರದಿ



ಪ್ರಕಾಶಕರು

ಪ.ಜಾತಿ/ಪಂಗಡ (ದೌರ್ಜನ್ಯ ತಡೆ) ಕಾಯ್ದೆ-1989
ಮೇಲ್ವಿಚಾರಣಾ ಮತ್ತು ಬಲವರ್ಧನಾ ಸಮಿತಿ
125/1, 15ನೇ ಕ್ರಾಸ್, 5ನೇ ಮೇನ್, ಆರ್.ಟಿ. ನಗರ, 2ನೇ ಬ್ಲಾಕ್, ಬೆಂಗಳೂರು-560032
(ಮೊಬೈಲ್: 92421-39948/98455-87502)

**ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ (ದೌರ್ಜನ್ಯ ತಡೆ) ಕಾಯ್ದೆ–1989**
**20 ವರ್ಷಗಳ ಅನುಷ್ಠಾನ–ರಾಷ್ಟ್ರೀಯ ವರದಿ ಹಾಗೂ ತಿದ್ದುಪಡಿಗೆ ಪ್ರಸ್ತಾವನೆಗಳು**

ದೌರ್ಜನ್ಯ ತಡೆ ಕಾಯ್ದೆ, ರಾಷ್ಟ್ರೀಯ ಒಕ್ಕೂಟದ ಮೂಲವರದಿ–ಭಾಷಾಂತರ

**ಪ್ರಕಾಶಕರು**
**ಪ.ಜಾತಿ/ಪಂಗಡ (ದೌರ್ಜನ್ಯ ತಡೆ) ಕಾಯ್ದೆ–1989, ಮೇಲ್ವಿಚಾರಣಾ ಮತ್ತು ಬಲವರ್ಧನಾ ಸಮಿತಿ**
125/1, 15ನೇ ಕ್ರಾಸ್, 5ನೇ ಮೇನ್, ಆರ್.ಟಿ. ನಗರ, 2ನೇ ಬ್ಲಾಕ್, ಬೆಂಗಳೂರು–560032
ಇಮೇಲ್: scstcmask@gmail.com
(ಮೊಬೈಲ್: 92421–39948/98455–87502)

ಪುಟಗಳು: = x +94 = 104
ಮೊದಲ ಮುದ್ರಣ: ಏಪ್ರಿಲ್ 2011
ಪ್ರತಿಗಳು: 1000


ಮುಖಪುಟ ವಿನ್ಯಾಸ : ನಾಗರಾಜ್

**ಮುದ್ರಕರು**
ರವಿ ಗ್ರಾಫಿಕ್ಸ್
ಬೆಂಗಳೂರು.

# ಭಾರತ ರಾಷ್ಟ್ರೀಯ ಜುಡಿಷಿಯಲ್ ಅಕಾಡೆಮಿ

**ಪ್ರೊ. (ಡಾ) ಜಿ. ಮೋಹನ್ ಗೋಪಾಲ್**

ನಿರ್ದೇಶಕರು

# ಮುನ್ನುಡಿ

ಪರಿಶಿಷ್ಟರ ಮೇಲೆ ಮುಂದುವರೆದಿರುವ ದೌರ್ಜನ್ಯ, ಅದರ ಸ್ವರೂಪ ಮತ್ತು ಇದಕ್ಕೆ ಕಾನೂನು ವ್ಯವಸ್ಥೆಯ ಸ್ಪಂದನೆ(ಅಥವಾ ನಿಷ್ಕ್ರಿಯತೆ) ಸಮಾಜದಲ್ಲಿ ಆಳವಾಗಿ ಬೇರೂರಿರುವ ದೋಷಗಳನ್ನು ಸೂಚಿಸುತ್ತದೆ. ಈ ದೋಷಗಳನ್ನು ಸರಿಪಡಿಸಲು ದೇಶದ ದಶದಿಕ್ಕುಗಳಿಂದಲೂ ಪ್ರಯತ್ನಗಳಾಗಬೇಕಿದೆ. ದೌರ್ಜನ್ಯ ತಡೆ ಕಾಯ್ದೆಯ ಬಲವರ್ಧನೆಗೆ ರಾಷ್ಟ್ರೀಯ ಒಕ್ಕೂಟ ಹೊರತಂದಿರುವ ಈ ಬಹುಮುಖ್ಯ ವರದಿ ನನ್ನ ಚೈತನ್ಯವನ್ನು ನೂರ್ಮಡಿಗೊಳಿಸಿದೆ.

ದುರ್ಬಲರು ಮತ್ತು ಶೋಷಿತರನ್ನು ರಕ್ಷಿಸಲು ಸಾಮಾನ್ಯ ಕಾಯ್ದೆಗಳಿಂದ ಸಾಧ್ಯವಾಗಿಲ್ಲ ಎನ್ನುವುದನ್ನು ಪ.ಜಾತಿ/ಪಂಗಡಗಳ (ದೌರ್ಜನ್ಯ ತಡೆ) ಕಾಯ್ದೆ–1989 ಅಸ್ತಿತ್ವವೇ ತಿಳಿಸುತ್ತದೆ. ಈ ಕಾಯ್ದೆ ಜಾರಿಯಾಗಿ 20 ವರ್ಷಗಳು ಕಳೆದಿರುವ ಹಿನ್ನೆಲೆಯಲ್ಲಿ ಹೊರಬಂದಿರುವ ಈ ವರದಿಯ ಅಂಕಿ ಅಂಶಗಳನ್ನು ಗಮನಿಸಿದರೆ ಕಾಯ್ದೆಯ ಘನ ಉದ್ದೇಶಗಳು ಈಡೇರದಂತೆ ತಡೆಯಲು ನಮ್ಮ ಸಿದ್ಧಾಂತ, ಸಾಮಾಜಿಕ ವ್ಯವಸ್ಥೆ, ಆಚರಣೆಗಳು ಎಷ್ಟು ಪ್ರಬಲವಾಗಿ ಪ್ರಯತ್ನಿಸಿವೆಯೆಂದು ಅರಿವಾಗುತ್ತದೆ. ದೇಶದ ಕಾನೂನು ವ್ಯವಸ್ಥೆ ಈ ಕಾಯ್ದೆಯಡಿ ಪ್ರಕರಣಗಳನ್ನು ದಾಖಲೆ ಮಾಡಲು ನಿರಾಕರಿಸುತ್ತಿರುವುದು ಮೇಲ್ನೋಟಕ್ಕೇ ಗೋಚರಿಸುತ್ತದೆ. 1995–2007(ವರದಿಯಲ್ಲಿ ವಿಶ್ಲೇಷಿಸಿರುವಂತೆ) ಅವಧಿಗೆ ಕೋರ್ಟು ಮೆಟ್ಟಿಲು ಏರಿದ ದೌರ್ಜನ್ಯ ಪ್ರಕರಣಗಳಲ್ಲಿ ಆರೋಪಿಗಳಿಗೆ ಶಿಕ್ಷೆಯಾಗಿರುವುದು ಕೇವಲ 4.6% ಎಂದೂ, ಪ್ರತಿದಿನ ಸರಾಸರಿ 93 ಅಪರಾಧ ಪ್ರಕರಣಗಳು ದಾಖಲಾಗುತ್ತಿವೆ, ಎಂದು ಅಂಕಿ ಅಂಶಗಳು ತಿಳಿಸುತ್ತವೆ(2007). ನಿಜಜೀವನದಲ್ಲಿ ಪರಿಶಿಷ್ಟರ ಮೇಲೆ ನಡೆಯುತ್ತಿರುವ ದೌರ್ಜನ್ಯ ಪ್ರಕರಣಗಳನ್ನು ದಾಖಲಾಗುತ್ತಿರುವ ಪ್ರಕರಣಗಳಿಗೆ ಹೋಲಿಸಿದರೆ ಇದರ ಪ್ರಮಾಣ ಮರಳಿನ ಗುಡ್ಡೆಯಲ್ಲಿ ಒಂದು ಮರಳ ಕಣ ಎಂಬುದು ಮಾತ್ರ ಸ್ಪಷ್ಟ. ಮಹಿಳೆಯರ ಬೆತ್ತಲೆ ಮೆರವಣಿಗೆ; ಅಂತರ್ಜಾತಿ ಸಂಬಂಧಗಳಿಗೆ ಕೊಲೆ; ಹಾಗೂ ಪ್ರತಿಭಟಿಸಿದರೆ, ಜಾತಿಯ ಮತ್ತು ಸಾಮಾಜಿಕ ನಿಯಮ ಮೀರಿದರೆ ಸಾಮಾಜಿಕ ಮತ್ತು ಆರ್ಥಿಕ ಬಹಿಷ್ಕಾರಗಳು ದೌರ್ಜನ್ಯ–ಸ್ವರೂಪದ ಒಂದೆರಡು ಉದಾಹರಣೆಗಳು. ಒಬ್ಬರ ತಪ್ಪಿಗೆ ಇಡೀ ಸಮುದಾಯಕ್ಕೆ ಶಿಕ್ಷೆ; ಈ ಸಮುದಾಯದ ಮೇಲೆ ಕಾನೂನು ಕಾಯುವ ಅಧಿಕಾರಿಗಳಿಂದಲೇ ಅಪರಾಧ; ಅಸಡ್ಡೆ ಮತ್ತು ದುಷ್ಕರ್ಮಿಗಳ ಜೊತೆ ಷಾಮೀಲು ನಮ್ಮ ಸಮಾಜದಲ್ಲಿ ಜಾತಿ ವ್ಯವಸ್ಥೆ ಹೇಗೆ ಕೆಲಸ ಮಾಡುತ್ತದೆ ಹಾಗೂ ಪ್ರಜಾಪ್ರಭುತ್ವ ಮತ್ತು ಆಡಳಿತ ವ್ಯವಸ್ಥೆಯನ್ನು ಹೇಗೆ ತನ್ನ ಕಪಿಮುಷ್ಟಿಯಲ್ಲಿ ಹಿಡಿದಿದೆ ಎಂಬುದನ್ನು ತೋರಿಸುತ್ತದೆ.

ಈ ವರದಿ, ಕಾಯ್ದೆಯ ವಿವಿಧ ನಿಬಂಧನೆಗಳ ಸಮಗ್ರ ಅನುಷ್ಠಾನದ ಅಗತ್ಯತೆಗೆ ಹೆಚ್ಚು ಒತ್ತು ನೀಡಿದೆ. ಕಾಯ್ದೆಯ ಪರಿಣಾಮಕಾರಿ ಅನುಷ್ಠಾನಕ್ಕೆ ಕೈಗೊಳ್ಳಬೇಕಿರುವ ಕ್ರಮ–ಅನುಷ್ಠಾನಗೊಳಿಸುವ ವಿವಿಧ ಆಡಳಿತ ವ್ಯವಸ್ಥೆಯ ಕಾರ್ಯಸಾಧನೆ, ರಕ್ಷಣೆಯ ವಾತಾವರಣದ ಸೃಷ್ಟಿ, ಅಪರಾಧಗಳನ್ನು ಕುಗ್ಗಿಸಲು ವ್ಯವಸ್ಥೆ ಮತ್ತು ದುರ್ಬಲರಲ್ಲಿ ವಿಶ್ವಾಸ ನಿರ್ಮಾಣ, ದೌರ್ಜನ್ಯಕ್ಕೊಳಗಾದವರು ಮತ್ತವರ ಕುಟುಂಬದವರು ನ್ಯಾಯಕ್ಕಾಗಿ ನಡೆಸುವ ಹೋರಾಟದಲ್ಲಿ ನೆರವಾಗಲು ತ್ವರಿತ ಪರಿಹಾರ ಕ್ರಮಗಳನ್ನು ಸ್ಪಷ್ಟವಾಗಿ ಈ ವರದಿ ಸಾದರಪಡಿಸುತ್ತದೆ. ಕಾಯ್ದೆಯ ಅನುಷ್ಠಾನದಲ್ಲಿರುವ ಲೋಪದೋಷಗಳನ್ನು ತಿಳಿಸುತ್ತಾ, ಅವುಗಳಿಗೆ ಆಧಾರ ಒದಗಿಸುವುದರೊಟ್ಟಿಗೆ ಮುಂದಿನ ದಾರಿಗೆ ಬೇಕಿರುವ ಶಿಫಾರಸ್ಸುಗಳನ್ನು ತಿಳಿಸುವುದರಿಂದ ಈ ವರದಿಯ ಮೌಲ್ಯ ಮತ್ತಷ್ಟು ಹೆಚ್ಚುತ್ತದೆ.

"ರಾಷ್ಟ್ರ ಪ್ರಗತಿ ಸಾಧಿಸಿದೆಯಾದರೆ, ಪ್ರಗತಿಯ ಏಣಿಯಲ್ಲಿ ಕಡೆಯ ಮೆಟ್ಟಿಲಿನಲ್ಲಿ ನಿಂತಿರುವವರನ್ನು ಅಭಿವೃದ್ಧಿ ಗುರುತಿಸಬೇಕು; ರಾಷ್ಟ್ರಕ್ಕೆ ಪೂರ್ಣ ರಕ್ಷಣೆ ದೊರೆತಿದೆ ಎಂದು ಹೇಳುವುದಾದರೆ, ದೇಶದ ಕಡೆಯ ನಾಗರಿಕನಿಗೆ ಭದ್ರತೆ ಸಿಗಬೇಕು", ಎಂದು ಈ ವರದಿ ತಿಳಿಸುತ್ತದೆ. ಈ ಸಂದೇಶ ಸ್ವಾತಂತ್ರಕ್ಕೆ ಹೋರಾಡಿದ ಮತ್ತು ಸಂವಿಧಾನ ರಚಿಸಿದ ನಮ್ಮ ಧೀಮಂತ ನಾಯಕರ ಚಿತ್ರ ಕಣ್ಮುಂದೆ ಸುಳಿಯುವಂತೆ ಮಾಡುತ್ತದೆ. ಎಷ್ಟೇ ಆದರು ರಾಷ್ಟ್ರ ಕಟ್ಟಿರುವುದು ಜನರೇ ಹೊರತು, ನೆಲಜಲ ಮತ್ತು ಆಸ್ತಿಗಳಲ್ಲ.

ಒಕ್ಕೂಟಕ್ಕೆ ಅನೇಕ ಸಂಘಸಂಸ್ಥೆಗಳು ಒಟ್ಟಾಗಿ ಕೈಜೋಡಿಸಿರುವ ವಿಚಾರವೇ ನನ್ನ ಉತ್ಸಾಹ ಹೆಚ್ಚಿಸಿದೆ ಹಾಗೂ ಗಣರಾಜ್ಯವು ಈ ಕಾಯ್ದೆಗೆ ಸುಧಾರಣೆ ತರುವಂತೆ ಮಾಡುವವರೆಗೂ ಅವಿರತ ಶ್ರಮಿಸುತ್ತೀರೆಂಬುದು ನನ್ನ ಅದಮ್ಯ ನಂಬಿಕೆ. ಹಾಗೆಯೇ ಈ ಪ್ರಕ್ರಿಯೆಯಲ್ಲಿ ಮುಂದುವರಿಸುವಾಗ ಜಾತಿ, ಮತ, ಬಡತನ, ಅಧಿಕಾರರಹಿತ ಸ್ಥಿತಿಯಿಂದ ಚೂರುಚೂರಾಗಿರುವ ನಾವೆಲ್ಲರೂ ಒಂದು ರಾಷ್ಟ್ರವಾಗಿ ಮುನ್ನಡೆಯುತ್ತೇವೆ ಎಂದೂ ನಂಬಿದ್ದೇನೆ.

ಸಹಿ

**(ಜಿ. ಮೋಹನ್ ಗೋಪಾಲ್)**

# ಒಂದೆರಡು ಮಾತುಗಳು

ಜಾತಿಪದ್ಧತಿ ಅತಿ ದೊಡ್ಡ ಕಳಂಕ, ತಾರತಮ್ಯವೇ ಮೂಲಾಧಾರವಾಗಿರುವ ಈ ಪದ್ಧತಿಯ ವಿರುದ್ಧ ಶತಮಾನಗಳ ಹಿಂದಿನಿಂದಲೂ ಗಟ್ಟಿ ದನಿ ಕೇಳಿ ಬಂದಿದೆ. ಸುಮಾರು 2500 ವರ್ಷಗಳ ಹಿಂದೆ ಈ ದುಷ್ಟ ಪದ್ಧತಿಯ ವಿರುದ್ಧ ಧ್ವನಿ ಎತ್ತಿದ್ದು ಮಹಾತ್ಮಾ ಬುದ್ಧ. 12ನೇ ಶತಮಾನದಲ್ಲಿ ಕನ್ನಡ ನಾಡಿನಲ್ಲೇ ಬಸವಣ್ಣ ಈ ಅಮಾನವೀಯ ಪದ್ಧತಿಗೆ ಸೆಡ್ಡು ಹೊಡೆದು ನಿಂತ. ಭಾರತದಾದ್ಯಂತ ಸಾಧು-ಸಂತ-ಭಕ್ತ ಕವಿಗಳಲ್ಲದೆ ಛತ್ರಪತಿ ಶಾಹು ಮಹಾರಾಜ್, ಮೈಸೂರಿನ ನಾಲ್ವಡಿ ಕೃಷ್ಣರಾಜ ಒಡೆಯರ್, ಮಾಹಾತ್ಮಾ ಜ್ಯೋತಿಬಾ ಫುಲೆ, ಸಾವಿತ್ರಿಬಾಯಿ ಫುಲೆ, ನಾರಾಯಣ ಗುರು, ಪೆರಿಯಾರ್ ಮುಂತಾದವರೂ ಜಾತಿಪದ್ಧತಿಯನ್ನು ಖಂಡಿಸಿ, ಜಾತಿಪದ್ಧತಿಗೆ ಬಲಿಯಾಗಿರುವವರಲ್ಲಿ ಸ್ವಾಭಿಮಾನ, ಒಗ್ಗಟ್ಟು ಮೂಡಿಸಿ, ಅವರಿಗೆ ಸಾಮಾಜಿಕ, ಆರ್ಥಿಕ, ರಾಜಕೀಯ ಸ್ಥಾನಮಾನವನ್ನು ಒದಗಿಸುವ ದಿಕ್ಕಿನಲ್ಲಿ ತಮ್ಮ ಜೀವವನ್ನೇ ಮುಡಿಪಾಗಿಟ್ಟರು.

ಭಾರತದಲ್ಲಿ ಬ್ರಿಟಿಷರು ಆಡಳಿತ ನಡೆಸುತ್ತಿದ್ದಾಗ ದೇಶಕ್ಕೆ ಸ್ವಾತಂತ್ರ ಬೇಕೆಂದು ಒತ್ತಾಯಿಸುತ್ತಲೇ, ಇಲ್ಲಿನ ಸಾಮಾಜಿಕ ತಾರತಮ್ಯ ವ್ಯವಸ್ಥೆಯನ್ನು ಧೂಳೀಪಟ ಮಾಡುವಲ್ಲಿ ನೈಜ ಇಚ್ಛಾಶಕ್ತಿಯನ್ನು ತೋರಬೇಕೆಂದು ಸೈಮನ್ ಆಯೋಗಕ್ಕೆ 1928ರಲ್ಲಿ ಹಕ್ಕೊತ್ತಾಯ ಪತ್ರವನ್ನು ನೀಡಿದ್ದು ಡಾ. ಬಿ. ಆರ್. ಅಂಬೇಡ್ಕರ್ ಅವರು. ಈ ವಿಷಯದಲ್ಲಿ ಜೀವಮಾನದಲ್ಲಿ ಎಂದೂ ರಾಜಿ ಮಾಡಿಕೊಳ್ಳದ ಅವರು ಸ್ವತಂತ್ರ ಭಾರತಕ್ಕೆ ಸಂವಿಧಾನವನ್ನು ಸಿದ್ಧಪಡಿಸಿ ಕೊಡುವ ಅವಕಾಶ ದೊರೆತಾಗ ಈ ಕುರಿತು ಸಂದಿಗ್ಧಕ್ಕೆ ಅನುವು ಕೊಡದಂಥ ಅನುಚ್ಛೇದಗಳನ್ನು ಸಂವಿಧಾನದಲ್ಲಿ ಅಳವಡಿಸಿದರು. ನಾಗರಿಕ ಹಕ್ಕುಗಳ ರಕ್ಷಣಾ (ಪ್ರೊಟೆಕ್ಷನ್ ಆಫ್ ಸಿವಿಲ್ ರೈಟ್ಸ್) ಕಾಯ್ದೆ 1950 ಜಾರಿಗೆ ಬಂತು.

ಸ್ವತಂತ್ರ ಭಾರತದಲ್ಲಿ ಸಂವಿಧಾನ ಜಾರಿಗೊಂಡರೂ ಪರಿಶಿಷ್ಟರನ್ನು ಅಸ್ಪೃಶ್ಯತೆಗೆ, ದೌರ್ಜನ್ಯಕ್ಕೆ ಗುರಿಪಡಿಸುವ ಪ್ರಕರಣಗಳು ಕಡಿಮೆಯಾಗಲಿಲ್ಲ; ಪರಿಶಿಷ್ಟರು ಸ್ವಾಬಿಮಾನವನ್ನು ಮೆರೆದಾಗ, ಶಿಕ್ಷಣ ಪಡೆದು ತಮ್ಮ ಸಂವಿಧಾನಬದ್ಧ ಹಕ್ಕುಗಳನ್ನು ಪಡೆದುಕೊಂಡು ಅವುಗಳನ್ನು ಚಲಾಯಿಸಲು ಮುಂದಾದಾಗ ದೌರ್ಜನ್ಯ ಪ್ರಕರಣಗಳು ಹೆಚ್ಚಿದವು.

ಸಮಾಜದಲ್ಲಿ ಸಾಮಾಜಿಕ ನ್ಯಾಯಪರ ಶಕ್ತಿಗಳ ದನಿ ತೀವ್ರಗೊಂಡಾಗ, ಸಂಸತ್ತು ಮತ್ತು ವಿಧಾನಸಭೆಗಳಿಗೆ ಚುನಾಯಿತರಾಗಿ ಹೋದ ಪರಿಶಿಷ್ಟರ ಪ್ರತಿನಿಧಿಗಳು ಹಕ್ಕೊತ್ತಾಯ ಮಾಡಿದಾಗ ಸರ್ಕಾರಗಳು ಪರಿಶಿಷ್ಟರ ನಾಗರಿಕ ಹಕ್ಕುಗಳನ್ನು ರಕ್ಷಿಸಲು ಇನ್ನೂ ಕಠಿಣ ಕಾಯ್ದೆಯನ್ನು ಮಾಡುವ ಬಗ್ಗೆ ಚಿಂತನೆ ನಡೆಯಿತು. 1955ರ ಕಾಯ್ದೆ ಸಾಲದು ಎನಿಸಿದಾಗ ಕೇಂದ್ರ ಸರ್ಕಾರವು ಪರಿಶಿಷ್ಟ ಜಾತಿ ಮತ್ತು ಪಂಗಡಗಳ (ದೌರ್ಜನ್ಯ ತಡೆ) ಕಾಯ್ದೆ 1989 (ಷಡ್ಯೂಲ್ ಕಾಸ್ಟ್ಸ್/ಷಡ್ಯೂಲ್ ಟ್ರೈಬ್ಸ್ (ಪ್ರಿವೆಂಷನ್ ಆಫ್ ಅಟ್ರಾಸಿಟೀಸ್) ಆಕ್ಟ್-1989) ಜಾರಿ ಮಾಡಬೇಕಾಯಿತು. ಇದಕ್ಕೆ 1995ರಲ್ಲಿ ನಿಯಮಗಳನ್ನು ರಚಿಸಿತು.

ಪರಿಶಿಷ್ಟ ಜಾತಿ ಮತ್ತು ಪಂಗಡಗಳ (ದೌರ್ಜನ್ಯ ತಡೆ) ಕಾಯ್ದೆ 1989 ಎಷ್ಟರ ಮಟ್ಟಿಗೆ ಕರ್ನಾಟಕ ರಾಜ್ಯದಲ್ಲಿ ಅನ್ವಯಗೊಂಡಿದೆ ಎಂಬ ಬಗ್ಗೆ ಈಗಾಗಲೇ ಕಾಯ್ದೆಯ ಮೇಲ್ವಿಚಾರಣೆ ಮತ್ತು ಬಲವರ್ಧನೆ ಸಮಿತಿ ನವೆಂಬರ್ 2010ರಲ್ಲಿ ವರದಿ ಬಿಡುಗಡೆ ಮಾಡಿದೆ.

ಕಾಯ್ದೆಗಳೇನೋ ಕಠಿಣವಾಗಿವೆ; ಆದರೆ ಅವುಗಳು ಪರಿಣಾಮಕಾರಿಯಾಗಿ ಅನುಷ್ಠಾನಗೊಂಡಿಲ್ಲ! ಈ ಬಗ್ಗೆ ಪರಿಶಿಷ್ಟ ಜಾತಿ/ಪಂಗಡಗಳ ರಾಷ್ಟ್ರೀಯ ಆಯೋಗ ಅನೇಕ ಬಾರಿ ತನ್ನ ಸಲಹೆ, ಶಿಫಾರಸ್ಸುಗಳನ್ನು ಕೇಂದ್ರ ಮತ್ತು ರಾಜ್ಯ ಸರ್ಕಾರಗಳಿಗೆ ನೀಡಿದೆ. ಆದರೂ ಎಲ್ಲವೂ ಕಾಗದದ ಮೇಲೆ ಉಳಿದಿವೆ. ದೇಶದಲ್ಲಿ ಆಡಳಿತ ನಡೆಸುತ್ತಿರುವವರ ಚರ್ಮ ಅಷ್ಟೊಂದು ದಪ್ಪಗಿದೆ. ಸಂವಿಧಾನಬದ್ಧವಾಗಿ ರಚನೆಗೊಂಡಿರುವ, ಸಂವಿಧಾನ ನಿರ್ದೇಶಿತವಾಗಿರುವ ಆಯೋಗದ ಶಿಫಾರಸ್ಸುಗಳಿಗೆ ಬೆಲೆ ಇಲ್ಲವಾಗಿದೆ.

ಹೀಗಿದ್ದರೂ, ಪ್ರಜಾಪ್ರಭುತ್ವದಲ್ಲಿ ನಾಗರಿಕ ಗುಂಪುಗಳು ತಮ್ಮ ಸಂವಿಧಾನಬದ್ಧ ಹಕ್ಕುಗಳಿಗಾಗಿ ಒತ್ತಯಿಸುವ ದಾರಿಯನ್ನು ಬಿಡಲಾಗದು. ಜನರಲ್ಲಿ ಜಾಗೃತಿಯನ್ನು ಮೂಡಿಸಿ, ತಮ್ಮ ಹಕ್ಕುಗಳನ್ನು ಪಡೆದುಕೊಳ್ಳುವಂತೆ ಜನರನ್ನು ಸಂಘಟಿಸುವುದು ಇಂದಿನ ತುರ್ತಾಗಿದೆ.

ಈ ವರದಿಯ ಹಿನ್ನೆಲೆಯನ್ನು ಮೊದಲ ಅಧ್ಯಾಯದಲ್ಲಿ ಸಂಕ್ಷಿಪ್ತವಾಗಿ ವಿವರಿಸಲಾಗಿದೆ ಹಾಗೂ ಭವಿಷ್ಯದಲ್ಲಿ ಈ ಕಾಯ್ದೆಯ ಸಮಗ್ರ ಅನುಷ್ಠಾನಕ್ಕೆ ಅಗತ್ಯವಿರುವ ತಿದ್ದುಪಡಿಗಳನ್ನು ಹಲವು ಸಂಘಸಂಸ್ಥೆಗಳೊಂದಿಗೆ ಮತ್ತು ಆಸಕ್ತ ವ್ಯಕ್ತಿಗಳೊಂದಿಗೆ ಸಮಾಲೋಚಿಸಿ, ಸವಿವರವಾದ ತಿದ್ದುಪಡಿಯನ್ನು 10ನೇ ಅಧ್ಯಾಯದಲ್ಲಿ ನೀಡಿದ್ದೇವೆ.

ಪ್ರಜಾಪ್ರಭುತ್ವದಲ್ಲಿ ಸಂಖ್ಯೆಗೆ ಹೆಚ್ಚಿನ ಮಹತ್ವ ಇದೆ. ಸರ್ಕಾರದ ಧ್ಯೇಯ ಧೋರಣೆಯ ಮೇಲೆ ನಾವು ಸಂಖ್ಯಾಬಲದಿಂದಲೇ ಪ್ರಭಾವ ಬೀರಬೇಕಿದೆ. ಸರ್ಕಾರದ ಕಾರ್ಯಾನುಷ್ಠಾನವನ್ನೂ ನಾವು ನಿಯಂತ್ರಿಸಬೇಕಿದೆ. ಇದಕ್ಕಾಗಿ ಸಮಸ್ತ ಶೋಷಿತ ಸಮುದಾಯಗಳಲ್ಲಿ ಜಾಗೃತಿಯನ್ನು ಮೂಡಿಸಬೇಕಿದೆ. ಅಹಿಂಸಾತ್ಮಕ ಕ್ರಾಂತಿಯನ್ನು ಸಾಧ್ಯವಾಗಿಸಲೆಂದೇ ಬಾಬಾಸಾಹೇಬ್ ಅಂಬೇಡ್ಕರ್ ಸಂವಿಧಾನ ಸಿದ್ಧಪಡಿಸಿ ನೀಡಿರುವುದರಿಂದ ಕಾನೂನಿನ ಚೌಕಟ್ಟಿನಲ್ಲಿ ಕಾರ್ಯ ನಿರ್ವಹಿಸುವಂತೆ ಸರ್ಕಾರವನ್ನು ಮತ್ತು ಆಡಳಿತ ಯಂತ್ರವನ್ನು ಎಚ್ಚರಿಸಬೇಕಿದೆ. ಕಾನೂನು ಉಲ್ಲಂಘಿಸುವವರಿಗೆ ಛೀಮಾರಿ, ದಂಡ, ಶಿಕ್ಷೆ ಆಗುವಂತೆ ಹಾಗೂ ಅಂಥವರು ಅಧಿಕಾರಸ್ಥಾನದಿಂದ ವಜಾ ಆಗುವಂತೆ ನಾವು ನೋಡಿಕೊಳ್ಳಬೇಕಿದೆ.

ದಲಿತ ಚಳವಳಿಯ ಸಮಸ್ತ ಮುಖಂಡರು ಮತ್ತು ಸಕ್ರಿಯ ಕಾರ್ಯಕರ್ತರು ಮನಸ್ಸು ಮಾಡಿದರೆ ಇದೇನೂ ಅಸಾಧ್ಯವಲ್ಲ ಎಂಬ ಭರವಸೆ ನಮಗಿದೆ. ಈ ವರದಿಯನ್ನು ಇನ್ನೂ ಸಮಗ್ರಗೊಳಿಸಲು, ದೀರ್ಘವಾಗಿಸಲು ಹಾಗೂ ಪರಿಣಾಮಕಾರಿಯಾಗಿಸಲು ದಲಿತ ಚಳವಳಿಯ ಮುಖಂಡರನ್ನು, ಸಕ್ರಿಯ ಕಾರ್ಯಕರ್ತರನ್ನು, ಬುದ್ಧಿಜೀವಿಗಳನ್ನು ಮತ್ತು ಎಲ್ಲಾ ಪ್ರಜ್ಞಾವಂತರನ್ನು ನಾವು ಕೋರುತ್ತೇವೆ.

ಕರ್ನಾಟಕದಲ್ಲಿ ಕಾರ್ಯನಿರ್ವಹಿಸುತ್ತಿರುವ ಸ್ವಯಂ ಸೇವಾ ಸಂಘಟನೆಗಳು ಮತ್ತು ಆಸಕ್ತ ವ್ಯಕ್ತಿಗಳು ರಚಿಸಿಕೊಂಡಿರುವ ಪ.ಜಾತಿ/ಪ.ಪಂಗಡಗಳ (ದೌರ್ಜನ್ಯ ತಡೆ) ಕಾಯ್ದೆ 1989 – ಮೇಲ್ವಿಚಾರಣಾ ಮತ್ತು ಬಲವರ್ಧನಾ ಸಮಿತಿ, ಕರ್ನಾಟಕ" (ಕಮಿಟಿ ಫಾರ್ ಮಾನಿಟರಿಂಗ್ ಅಂಡ್ ಸ್ಟ್ರೆಂದನಿಂಗ್ ಎಸ್‌ಸಿ/ಎಸ್‌ಟಿ (ಪಿಒಎ)ಆಕ್ಟ್ 1989–ಕರ್ನಾಟಕ) ಈ ವರದಿಯನ್ನು ಕನ್ನಡಕ್ಕೆ ಭಾಷಾಂತರಿಸಿದೆ.

ಪ.ಜಾತಿ/ಪ.ಪಂಗಡ (ದೌರ್ಜನ್ಯ ತಡೆ) ಕಾಯ್ದೆ 1989–ಮೇಲ್ವಿಚಾರಣಾ ಮತ್ತು ಬಲವರ್ಧನಾ ಸಮಿತಿಯನ್ನು ಸಕ್ರಿಯಗೊಳಿಸಲು, ಇದರಲ್ಲಿ ಭಾಗಿಯಾಗಲು ಹಾಗೂ ತಮ್ಮ ಸಂವಿಧಾನಬದ್ಧ ಹಕ್ಕುಗಳನ್ನು ಸಂರಕ್ಷಿಸಿಕೊಳ್ಳುವಂತೆ ದಲಿತರನ್ನು ಸಂಘಟಿಸಲು ಬದ್ಧತೆ ಮತ್ತು ಆಸಕ್ತಿ ಹೊಂದಿರುವ ಎಲ್ಲರಿಗೂ ಸಮಿತಿಯ ಮುಂದಿನ ಕಾರ್ಯಯೋಜನೆಗಳನ್ನು ರೂಪಿಸಲು ಹಾಗೂ ಅವುಗಳನ್ನು ಜಾರಿಗೊಳಿಸಲು ಮುಕ್ತ ಅವಕಾಶವಿದೆ.

**ಮಂಗ್ಳೂರ ವಿಜಯ**
ಸಮಿತಿಯ ಪರವಾಗಿ

# ಸ್ಮರಣೆ

ಈ ವರದಿಯನ್ನು ದಲಿತ ಮಕ್ಕಳು, ಮಹಿಳೆಯರು ಮತ್ತು ಪುರುಷರು, ಕಾರ್ಯಕರ್ತರು, ನಾಯಕರು ಮತ್ತು ಸಂಸ್ಥೆಗಳಿಗೆ ಅರ್ಪಿಸುತ್ತೇವೆ. ಪಕ್ಷಪಾತ ಮತ್ತು ಹಿಂಸೆಯ ವಿರುದ್ಧ, ಸಂವಿಧಾನದ ಕಾನೂನು ವ್ಯವಸ್ಥೆಯ ಉತ್ತಮ ಅನುಷ್ಠಾನ ಮತ್ತು ದಲಿತ ಮಾನವ ಹಕ್ಕುಗಳು ಸಾಕಾರಗೊಳ್ಳುವಂತೆ ಮಾಡುವಲ್ಲಿ ಇವರೆಲ್ಲರ ಅವಿರತ ಶ್ರಮ ಸ್ಮರಣೀಯ.

ಈ ವರದಿ ತಯಾರಾಗುವಲ್ಲಿ ಒಗ್ಗಟ್ಟಿನಿಂದ ಕೊಡುಗೆ ನೀಡಿರುವ ಎಲ್ಲಾ ಸಂಸ್ಥೆಗಳು, ಆಂದೋಲನಗಳು, ಕಾರ್ಯಕರ್ತರು ಹಾಗೂ ಸ್ನೇಹಿತರಿಗೆ ನಮ್ಮ ಧನ್ಯವಾದ.

ವಂ.ಗುರುಗಳಾದ ಅಲಾಸಿಯಸ್ ಇರುದಯಮ್ ಮತ್ತು ಶ್ರೀಮತಿ ಜಯಶ್ರೀ ಮಂಗೂಭಾಯಿಯವರಿಗೆ ನಮ್ಮ ವಿಶೇಷ ಧನ್ಯವಾದಗಳು. ಈ ವರದಿ ತಯಾರಿಸುವಾಗ ಸಲಹೆಗಳನ್ನು ನೀಡಿ, ಕರಡು ತಯಾರಿಸಿ, ಸಂಪಾದಿಸಿ ಮುದ್ರಿಸಿ ಬಿಡುಗಡೆ ಮಾಡುವವರೆಗೂ ನಮ್ಮೊಟ್ಟಿಗೇ ಇದ್ದರು. ಅವರ ಅವಿರತ ಶ್ರಮ ಮತ್ತು ಬದ್ಧತೆ ಇಲ್ಲದಿದ್ದಲ್ಲಿ ಈ ವರದಿ ಪೂರ್ಣಗೊಳಿಸಲು ಆಗುತ್ತಿರಲಿಲ್ಲ. ವರದಿಗೆ ಕೊಡುಗೆ ನೀಡಿರುವ ಯೂಜೀನ್ ರೋಸಾರಿಯೋ ಮತ್ತು ಆನೀ ನಮಲ ಇಬ್ಬರಿಗೂ ನಮ್ಮ ಧನ್ಯವಾದಗಳು.

ಈ ವರದಿಗೆ ಕೊಡುಗೆ ನೀಡಿ ಮಾರ್ಗದರ್ಶನ ನೀಡಿರುವ ಕೋರ್ ಕಮಿಟಿ ಸದಸ್ಯರುಗಳಿಗೆ ಮತ್ತು ಸಲಹೆಗಾರರಾದ ಶ್ರೀ. ಪಿ.ಎಸ್. ಕ್ರಿಷ್ಣನ್, ನಿವೃತ್ತ ಐ.ಎ.ಎಸ್. ಅಧಿಕಾರಿಯವರಿಗೆ ನಮ್ಮ ಧನ್ಯವಾದಗಳು. ಸಿಸಿಎಫ್‌ಡಿ ಹಾಗೂ ಕಾರ್ಡೈಡ್ ನೀಡಿರುವ ನೆರವಿಗೆ ನಮ್ಮ ಧನ್ಯವಾದಗಳು

ಅಭಯ್, ಅಭಿರಾಮಿ, ಅಮಿತ್, ಅಶುತೋಷ್, ಆಶಿಮ್, ಇರಾಮ್, ಜೇಸಿ, ಕೆ.ಕಮಾಲ್, ಕೇಶವ್, ರಾಹುಲ್, ಸೆಲ್ವಿ, ಸಿಂಧು ಮತ್ತು ಉಮೇಶ್ ಇವರೆಲ್ಲರಿಗೂ ಧನ್ಯವಾದಗಳು. ಸರ್ಕಾರ ಮತ್ತು ಸಂಘ ಸಂಸ್ಥೆಗಳ ಹಲವಾರು ವರದಿಗಳಿಂದ ಅಂಕಿ ಅಂಶಗಳನ್ನು ಸಂಗ್ರಹಿಸಿ, ಅವುಗಳ ಸತ್ಯಾಸತ್ಯತೆಯನ್ನು ಪರೀಕ್ಷಿಸಲು ಇವರ ಅವಿರತ ಶ್ರಮ ಸ್ಮರಣೀಯ. ಹಾಗೆಯೇ ವಿನೀತ್ ಜಿಂಗಾಲ(ಗ್ರಾಫಿಕ್ ಡಿಸೈನರ್) ಮತ್ತು ಕೆ. ಕಮಾಲ್ (ವಿನ್ಯಾಸ ಮತ್ತು ಪೇಜ್ ಮೇಕ್) ಇವರಿಬ್ಬರಿಗೂ ಧನ್ಯವಾದಗಳು.

**ಪ.ಜಾತಿ/ಪಂಗಡಗಳ (ದೌರ್ಜನ್ಯ ತಡೆ) ಕಾಯ್ದೆ**
**ಬಲವರ್ಧನೆಗೆ ರಾಷ್ಟ್ರೀಯ ಒಕ್ಕೂಟ**

# ಪರಿವಿಡಿ


| | | ಪುಟ |
|---|---|---|
| ಮುನ್ನುಡಿ | | *i* |
| ಒಂದೆರಡು ಮಾತುಗಳು | | *iii* |
| ಸ್ಮರಣೆ | | *v* |
| 1. | ಕಾಯ್ದೆಯ ಪರಿಚಯ: ಸನ್ನಿವೇಶ, ಉದ್ದೇಶಗಳು, ಲಕ್ಷಣಗಳು | 1 |
| 2. | 20 ವರ್ಷಗಳ ದೌರ್ಜನ್ಯ–ಪರಿಶಿಷ್ಟರ ಮೇಲೆ | 5 |
| 3. | 20 ವರ್ಷಗಳ ಅನುಷ್ಠಾನ ವ್ಯವಸ್ಥೆ–ಪೋಲೀಸ್ | 13 |
| 4. | 20 ವರ್ಷಗಳ ಅನುಷ್ಠಾನ ವ್ಯವಸ್ಥೆ–ನ್ಯಾಯಾಂಗ | 21 |
| 5. | 20 ವರ್ಷಗಳಲ್ಲಿ ದೌರ್ಜನ್ಯಕ್ಕೊಳಾಗದವರ ಮತ್ತು ಸಾಕ್ಷಿಗಳ–ಹಕ್ಕು | 29 |
| 6. | 20 ವರ್ಷಗಳ ಅನುಷ್ಠಾನ ವ್ಯವಸ್ಥೆ; ಇತರೆ ಕಡ್ಡಾಯ ನಿಬಂಧನೆಗಳು | 33 |
| 7. | 20 ವರ್ಷಗಳ ಅನುಷ್ಠಾನದಲ್ಲಿ ಉತ್ತರದಾಯಿತ್ವ ವ್ಯವಸ್ಥೆ | 37 |
| 8. | 20 ವರ್ಷಗಳಲ್ಲಿ ಕಾಯ್ದೆಯ ಅನುಷ್ಠಾನಕ್ಕೆ–ಬಜೆಟ್ ಮತ್ತು ಖರ್ಚುವೆಚ್ಚ | 45 |
| 9. | ಕಾಯ್ದೆಯ ಹೊರಗುಳಿದ ದುರ್ಬಲರ ಮೇಲಿನ ದೌರ್ಜನ್ಯ–ಸ್ಥಿತಿಗತಿ | 49 |
| 10. | ಭವಿಷ್ಯ: ಶಿಫಾರಸ್ಸು ಮತ್ತು ತಿದ್ದುಪಡಿ ಪ್ರಸ್ತಾವನೆ | 57 |

## ಕಾಯ್ದೆಯ ಮಹತ್ವ: ಸರ್ವೋಚ್ಚ ನ್ಯಾಯಾಲಯ.

"ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳವರನ್ನು ಉದ್ದೇಶಪೂರ್ವಕವಾಗಿ ಅಪಮಾನಕ್ಕೀಡು ಮಾಡಿ, ಗುಲಾಮಗಿರಿಯ ಸ್ಥಿತಿಯಲ್ಲಿಯೇ ಇರಿಸಲು ಅವರ ಮೇಲೆ ದೌರ್ಜನ್ಯ ಎಸಗಲಾಗುತ್ತಿದೆ, ಇದು ಕಾನೂನುಬಾಹಿರ ಚಟುವಟಿಕೆ. ಆದ್ದರಿಂದ ಇಂತಹ ಚಟುವಟಿಕೆಗಳು ವಿಶೇಷ ಅಪರಾಧ ಪ್ರಕರಣಗಳು ಎನಿಸಿಕೊಳ್ಳುತ್ತವೆ. ಈ ಅಪರಾಧಗಳನ್ನು ಭಾರತ ದಂಡ ಸಂಹಿತೆಯಲ್ಲಿ ವಿವರಿಸಲಾಗಿರುವ ಕಾನೂನುಬಾಹಿರ ಚಟುವಟಿಕೆಗಳ ಜೊತೆ ಹೋಲಿಸಲು ಸಾಧ್ಯವಿಲ್ಲ".

*ಮಧ್ಯಪ್ರದೇಶ ಸರ್ಕಾರ Vs ರಾಮ ಕೃಷ್ಣ ಬಲೋಥಿಯ ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯ–1995 ಸ.ನ್ಯಾ 2) 221*

*ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ (ದೌರ್ಜನ್ಯ ತಡೆ) ಕಾಯ್ದೆ 1989 ಇದನ್ನು ಸಂಸತ್ತಿನಲ್ಲಿ ಅಂಗೀಕರಿಸುವವರೆಗೆ* ಕಾನೂನಿನ ಭಾಷೆಯಲ್ಲಿ 'ದೌರ್ಜನ್ಯ' ಎಂಬ ಪದಕ್ಕೆ ಸರಿಯಾದ ಅರ್ಥ ಇರಲಿಲ್ಲ. ಸದರಿ ಕಾಯ್ದೆಯ ಕಲಂ 3(1) ಮತ್ತು (2)ರಲ್ಲಿ ತಿಳಿಸಿರುವ ಶಿಕ್ಷಾರ್ಹ ಅಪರಾಧಗಳು ದೌರ್ಜನ್ಯದ ವ್ಯಾಪ್ತಿಯಲ್ಲಿ ಬರುತ್ತವೆ. ಇನ್ನಷ್ಟು ಸ್ಪಷ್ಟವಾಗಿ ತಿಳಿಸುವುದಾದಲ್ಲಿ:

(i) "ಪರಿಶಿಷ್ಟ ಜಾತಿ (ಪ. ಜಾ) ಮತ್ತು ಪರಿಶಿಷ್ಟ ಪಂಗಡಗಳವರ(ಪ.ಪಂ) ವಿರುದ್ಧ ಮಾಡಿದ ಯಾವುದೇ ಅಪರಾಧ ದೌರ್ಜನ್ಯವಾಗುತ್ತದೆ"

(ii) ಭಾರತದಲ್ಲಿ "ಅಪರಾಧ"ಕ್ಕೆ ಕಾನೂನಿನ ಪ್ರಕಾರ ಶಿಕ್ಷಾರ್ಹ ಚಟುವಟಿಕೆ ಎನ್ನುವ ಅರ್ಥವಿದೆ. ಆದರೆ, ದೌರ್ಜನ್ಯ, ಅಘಾತಕಾರಿಯಾದ ಪದವಾಗಿದ್ದು, ಕ್ರೂರತನ ಮತ್ತು ಅಮಾನವೀಯತೆಯ ಮಟ್ಟವನ್ನು ತೋರಿಸುತ್ತದೆ. *(ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳವರ ಸಂಸದೀಯ ಕಲ್ಯಾಣ ಸಮಿತಿಯ 4ನೇ ವರದಿ 2004–05, ನವದೆಹಲಿ, 2005, ಪ್ಯಾರಾ 1.1)*

(iii) ಭಾರತೀಯ ದಂಡ ಸಂಹಿತೆಯಲ್ಲಿ (ಐ.ಪಿ.ಸಿ) ತಿಳಿಸಿರುವ ಯಾವುದೇ ಶಿಕ್ಷಾರ್ಹ ಅಪರಾಧವನ್ನು ಪ.ಜಾತಿ ಅಥವಾ ಪ.ಪಂಗಡಗಳಿಗೆ ಸೇರದೇ ಇರುವ ಜನರು ಪ.ಜಾತಿಯವರ ಅಥವಾ ಪ.ಪಂಗಡಗಳವರ ವಿರುದ್ಧ ಎಸಗಿದರೆ "ದೌರ್ಜನ್ಯ" ಎನಿಸಿಕೊಳ್ಳುತ್ತದೆ. ಅಂತಹ ಅಪರಾಧಕ್ಕೆ ಪ್ರಚೋದನೆ ಜಾತಿ ಆಗಿರಬೇಕಿಲ್ಲ *(ಕೇಂದ್ರ ಸರ್ಕಾರದ ಗೃಹ ಸಚಿವಾಲಯ ನೀಡಿರುವ ಸ್ಪಷ್ಟನೆ, ಈ ಸ್ಪಷ್ಟನೆಯನ್ನು ರಾಷ್ಟ್ರೀಯ ಮಾನವ ಹಕ್ಕುಗಳ ಸಮಿತಿಯಲ್ಲಿ ಸೂಚಿಸಲಾಗಿದೆ, ಪರಿಶಿಷ್ಟ ಜಾತಿಯವರ ವಿರುದ್ಧ ದೌರ್ಜನ್ಯ ತಡೆಯ ವರದಿ, ನವದೆಹಲಿ, 2002. ಪುಟ 28)*

(iv) ದೌರ್ಜನ್ಯ "ಸಂಕಟ/ಯಾತನೆ/ನರಳುವಿಕೆ ತರುವ ಯಾವುದೇ ರೂಪದ ಅಪರಾಧ'ಗಳು ಆಗಿರುತ್ತದೆ",ಇಲ್ಲಿ "ತೊಂದರೆಗೊಳಗಾಗಿರುವವರು ಪ.ಜಾತಿಗೆ ಸೇರಿದ್ದು, ತೊಂದರೆ ನೀಡಿದವರು ಪ.ಜಾತಿಯವರು ಆಗಿರದೇ ಇದ್ದಲ್ಲಿ, ಒಂದು ವೇಳೆ ಪ್ರೇರಣೆಯು ಜಾತಿ ಅಲ್ಲದೇ ಹೋದರೂ ಸಹ ಈ ಸಂದರ್ಭದಲ್ಲಿ ಅಂತಹ ಕೃತ್ಯಗಳು ಜಾತಿಯ ಹಿನ್ನೆಲೆಯಲ್ಲಿ ಆಗಿರುತ್ತದೆ ಎಂಬ ತರ್ಕವನ್ನು ಇಲ್ಲಿ ಬಳಸಲಾಗುತ್ತದೆ. *(ಕೇಂದ್ರ ಸರ್ಕಾರದ ಗೃಹ ಸಚಿವಾಲಯದವರು ನೀಡಿರುವ ಮತ್ತೊಂದು ಸ್ಪಷ್ಟನೆಯ ಪ್ರಕಾರ)*

(v) ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳವರಿಗೆ ಆರ್ಥಿಕ, ಪ್ರಜಾತಾಂತ್ರಿಕ ಮತ್ತು ಸಾಮಾಜಿಕ ಹಕ್ಕುಗಳನ್ನು ನಿರಾಕರಿಸುವ, ಪಕ್ಷಪಾತ ತೋರಿಸುವ, ಶೋಷಿಸುವ ಮತ್ತು ಕಾನೂನು ಪ್ರಕ್ರಿಯೆಯನ್ನು ನಿಂದಿಸುವ, ಆತ್ಮಗೌರವ ಮತ್ತು ಅವರ ಗೌರವಕ್ಕೆ ಧಕ್ಕೆ ತರುವ 22 ರೀತಿಯ ಅಪರಾಧಗಳನ್ನು ಈ ಕಾಯ್ದೆಯು ಗುರುತಿಸುತ್ತದೆ. *(ಪರಿಶಿಷ್ಟ ಜಾತಿಯವರ ರಾಷ್ಟ್ರೀಯ ಆಯೋಗದ ಪ್ರಥಮ ವರದಿ 2004–05, ನವದೆಹಲಿ, 2006, ಪುಟ 223)*

**"ನಮ್ಮ ಸಮಾಜದಲ್ಲಿ ಎಲ್ಲಾ ಸವಲತ್ತುಗಳಿಂದ ವಂಚಿತರಾದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳವರ ಮೇಲೆ ದೌರ್ಜನ್ಯ ಎಸಗಲಾಗುತ್ತಿದೆ, ಇದೊಂದು ಸಾಮಾಜಿಕ ಪೀಡೆ. ಕ್ಷಣ ಕೂಡ ತಡ ಮಾಡದೆ ಈ ಪೀಡೆಯನ್ನು ಬುಡಸಮೇತ ಕಿತ್ತೆಸೆಯಲು ರಾಷ್ಟ್ರೀಯ ಸಂಕಲ್ಪ ಮಾಡಬೇಕಿದೆ".**

ಪ್ರಧಾನ ಮಂತ್ರಿ ಮನಮೋಹನ್ ಸಿಂಗ್, ಅಂತರ–ರಾಜ್ಯಗಳ ನಿಯೋಗದ 10ನೇ ಸಭೆಯಲ್ಲಿ ಮಾಡಿದ ಭಾಷಣ, ನವದೆಹಲಿ, 2006

## ಜಾತಿ ಪದ್ಧತಿಯಲ್ಲಿ ಆಳವಾಗಿ ಬೇರೂರಿರುವ ದೌರ್ಜನ್ಯ

1990ರಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ರಾಷ್ಟ್ರೀಯ ಆಯೋಗ *ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ವಿರುದ್ಧ ದೌರ್ಜನ್ಯದ ಕಾರಣ ಹಾಗೂ ಪರಿಹಾರಗಳ ಸಂಬಂಧ* ಅಧ್ಯಯನ ಕೈಗೊಂಡಿತು. ದೌರ್ಜನ್ಯಕ್ಕೆ ಎಡೆ ಮಾಡುವ ಹಲವಾರು ಆಕಸ್ಮಿಕ ಅಂಶಗಳನ್ನು ಈ ಅಧ್ಯಯನವು ಗುರುತಿಸಿದೆ: ಜಮೀನಿನ ವ್ಯಾಜ್ಯ; ಪರಭಾರೆ; ಜೀತ ಪದ್ಧತಿ; ಸಾಲದಹೊರೆ; ಕನಿಷ್ಟ ವೇತನವನ್ನು ನೀಡಲು ನಿರಾಕರಣೆ; ಜಾತಿಯ ಪೂರ್ವಾಗ್ರಹಪೀಡಿತ ಮನೋಭಾವನೆ; ಅಸ್ಪೃಶ್ಯತೆ; ಜಾತಿ ರಾಜಕಾರಣ; ಗುಂಪುಗಾರಿಕೆ; ಗೋರಿ ತೋಡಲು, ಹೆಣ ಸುಡಲು, ಸತ್ತಿರುವ ಪ್ರಾಣಿಗಳನ್ನು ಎತ್ತಿ ಹಾಕಲು ಹಾಗೂ ತಮಟೆ ಹೊಡೆಯಲು ನಿರಾಕರಿಸಿರುವುದು ಹಾಗೂ ಇತ್ಯಾದಿ ಕಾರಣಗಳು ದೌರ್ಜನ್ಯಕ್ಕೆ ಎಡೆ ಮಾಡಿಕೊಡುವ ಆಕಸ್ಮಿಕ ಅಂಶಗಳೆಂದು ಈ ಅಧ್ಯಯನ ತಿಳಿಸುತ್ತದೆ. ಇವುಗಳ ಮೂಲ ಕಾರಣಗಳು ಹುಡುಕುವಾಗ ಅದು ಜಾತಿ ಪದ್ಧತಿಯಲ್ಲಿ ಪರ್ಯಾವಸನಗೊಂಡಿದೆ. ಹಾಗೆಯೇ ಇದು ಕೇವಲ ಸಂಸ್ಕಾರ–ಶುದ್ಧತೆಯ ಹಾಗೂ ಈ ಆಧಾರದಲ್ಲಿ ಸಮಾಜವನ್ನು ವರ್ಗೀಕರಿಸುವಲ್ಲಿ ಅಂತ್ಯವಾಗಿದೆ. ಮನುಷ್ಯರ ಜಾತಿ, ಅವರು ಯಾವ ಜಾತಿಯಲ್ಲಿ ಹುಟ್ಟುತ್ತಾರೋ ಆ ಹಿನ್ನೆಲೆಯಿಂದ ನಿರ್ಧಾರವಾಗುತ್ತದೆ..." *(ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಸಂಸದೀಯ ಕಲ್ಯಾಣ ಸಮಿತಿ, 4ನೇ ವರದಿ 2004–05, ನವದೆಹಲಿ, 2005, ಪ್ಯಾರಾ 1.2)*

ಪರಿಶಿಷ್ಟ ಜಾತಿಯ ಮನುಷ್ಯರನ್ನು ಸಂಸ್ಕಾರಗಳಲ್ಲಿ–ಅಶುದ್ಧರು ಎಂದು ಪರಿಗಣಿಸಿ ಅವರನ್ನು ಸಾಮಾಜಿಕವಾಗಿಯೂ ಬೇರ್ಪಡಿಸಲಾಗಿದೆ, ಇವರಿಗೆ ಬಹು ಅಗತ್ಯದ ಸಂಪನ್ಮೂಲ ಮತ್ತು ಸೇವೆಗಳನ್ನೂ ಈ ಸಮಾಜ ನಿರಾಕರಿಸಿದೆ, ಜೀವನದ ಎಲ್ಲಾ ವಿಚಾರಗಳಲ್ಲಿಯೂ ಅವರ ವಿರುದ್ಧ ಪಕ್ಷಪಾತ ತೋರಿಸಲಾಗಿದೆ. ಪರಿಶಿಷ್ಟ ಜಾತಿಯ ಜನರು ಹಲವಾರು ವಿಧದ ಶೋಷಣೆ, ಅವಮಾನ ಮತ್ತು ಹಿಂಸೆಯನ್ನು ಎದುರಿಸುತ್ತಾರೆ. ಅಷ್ಟೇ ಅಲ್ಲದೆ ಅಸ್ಪೃಶ್ಯತೆಯಂತಹ ಕೀಳುಮಟ್ಟದ ಆಚರಣೆಗೂ ಬಲಿಯಾಗಿದ್ದಾರೆ. ಇನ್ನು ಪರಿಶಿಷ್ಟ ಪಂಗಡಗಳವರು, ಜಾತಿಯ ಆಧಾರದ ಮೇಲೆ ಶೋಷಣೆಗೆ ಒಳಗಾಗಿರುವುದಿಲ್ಲ, ಆದರೆ, ಅವರ ಭಿನ್ನ ಸಂಸ್ಕೃತಿ ಮತ್ತು ಜಗತ್ತಿನ ಕುರಿತು ಅವರಿಗಿರುವ ಭಿನ್ನ ಅಭಿಪ್ರಾಯದ ಹಿನ್ನೆಲೆಯಲ್ಲಿ ಅವರೂ ಶೋಷಣೆಗೆ ಒಳಗಾಗಿದ್ದಾರೆ.

"ಈ ಜಾತಿ ಮತ್ತು ಪಂಗಡಗಳಿಗೆ ಸೇರಿದ ಮಹಿಳೆಯರು ಜಾತಿ ಮತ್ತು ಲಿಂಗ ತಾರತಮ್ಯ, ಲೈಂಗಿಕ ಶೋಷಣೆ ಮತ್ತು ಅವುಗಳ ವಿರುದ್ಧ ಹೋರಾಟ ಮಾಡಲು ನಿಶ್ಶಕ್ತರಾಗಿದ್ದಾರೆ, ಹೀಗೆ ಅವರು ಎರಡು ರೀತಿಯಲ್ಲಿ ಶೋಷಿತರಾಗಿದ್ದಾರೆ, . *(ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಸಂಸದೀಯ ಕಲ್ಯಾಣ ಸಮಿತಿಯ ವರದಿ 2004–05, ನವದೆಹಲಿ, 2005, ಪ್ಯಾರಾ 1.4)*

## ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ (ದೌರ್ಜನ್ಯ ತಡೆ) ಕಾಯ್ದೆ 1989ರ ಇತಿಹಾಸ

19ನೇ ಶತಮಾನದಲ್ಲಿ, 'ಅಸ್ಪೃಶ್ಯತೆ' ವ್ಯವಸ್ಥೆಯ ವಿರುದ್ಧ ಅಸ್ಪೃಶ್ಯರು ಧ್ವನಿ ಎತ್ತಿದರು, ಇದು ಆಧುನಿಕ ಕಾಲದ ದೌರ್ಜನ್ಯಕ್ಕೆ ಮೂಲ. ಭಾರತ *ಸರ್ಕಾರದ ಕಾಯ್ದೆ 1919* ಹೇಗೆ ಕಾರ್ಯನಿರ್ವಹಿಸುತ್ತಿದೆ ಎಂಬುದನ್ನು ಪರಿಶೀಲಿಸಲು ಬ್ರಿಟಿಷ್ ಆಳ್ವಿಕೆಯ ಸಮಿತಿಯೊಂದು ಭಾರತ ಪ್ರವಾಸ ಕೈಗೊಂಡಿತು. 'ಅಸ್ಪೃಶ್ಯರ' ಮೇಲೆ ಆಗುತ್ತಿರುವ ಅನೇಕ ದೌರ್ಜನ್ಯಗಳು, ಆದರೆ ಅವುಗಳು ಬೆಳಕಿಗೆ ಬರುತ್ತಿಲ್ಲ ಮತ್ತು ದೌರ್ಜನ್ಯ ಮಾಡಿದವರಿಗೆ ಶಿಕ್ಷೆ ಆಗುತ್ತಿಲ್ಲ, ಏಕೆಂದರೆ ಸಾಕ್ಷಿ ಹೇಳಲು ಯಾರೂ ಮುಂದೆ ಬರುತ್ತಿಲ್ಲ ಎಂಬ ಅಂಶವನ್ನು ಈ ಸಮಿತಿ ಗುರುತಿಸಿತು. ಡಾ. ಬಿ. ಆರ್. ಅಂಬೇಡ್ಕರ್ ಅಂದಿನ ಬಾಂಬೆ ಸರ್ಕಾರದ ಮೇಲ್ಮನೆ ಸದಸ್ಯರಾಗಿದ್ದರು, ಇವರು 9 ಮೇ 1928ರಂದು *ಬಹಿಷ್ಕೃತ ಹಿತಕರಣಿ ಸಭಾ* ಪರವಾಗಿ ಪರಿಶಿಷ್ಟರ ಮೇಲೆ ಹಿಂದೆ ಆಗಿರುವ ದೌರ್ಜನ್ಯ ಪ್ರಕರಣಗಳನ್ನು ಲಿಖಿತ ರೂಪದಲ್ಲಿ ಸೈಮನ್ ಆಯೋಗಕ್ಕೆ (ಭಾರತೀಯ ಶಾಸನ ಆಯೋಗ) ಮನವಿ ನೀಡಿದ್ದರು.

ಸ್ವಾತಂತ್ರ ಬಂದ ನಂತರವೂ ಭಾರತದ ಎಲ್ಲೆಡೆ ಸತತ ದೌರ್ಜನ್ಯಗಳು ನಡೆದವು. ಜಾತಿ ಅಸ್ಪೃಶ್ಯತೆ ವ್ಯವಸ್ಥೆ ವಿರೋಧಿಸಿದನೆಂದು ತಮಿಳುನಾಡಿನ ಯುವ ದಲಿತ ನಾಯಕ ಇಮಾನ್ಯುವೆಲ್ ಸೇಕರನ್ ಹತ್ಯೆಗೊಳಗಾದ. ಇದು 1957ರ ರಾಮನಾಥಪುರ ದಂಗೆಯಲ್ಲಿ ಪರ್ಯಾವಸನಗೊಂಡಿತು; ಮುಂದೆ ಕಿಲವೆಣ್ಮಣಿ ಎಂಬಲ್ಲಿ 42 ಪರಿಶಿಷ್ಟರ ಹತ್ಯಾಕಾಂಡ; 1969ರಲ್ಲಿ ಆಂಧ್ರಪ್ರದೇಶದ ಕಂಚಿಕಾಚೆರ್ಲದಲ್ಲಿ ಪರಿಶಿಷ್ಟರ ಕೋಟೇಸು ಎಂಬುವವರ ಭೀಕರ ಕೊಲೆ; 1978ರಲ್ಲಿ ಆಂಧ್ರಪ್ರದೇಶ ಇಂದ್ರವಳ್ಳಿಯಲ್ಲಿ ಜಮೀನು ತಕರಾರಿನಲ್ಲಿ ಪರಿಶಿಷ್ಟ ಪಂಗಡದ 10 ಜನರನ್ನು ಪೋಲೀಸರೇ ಕಗ್ಗೊಲೆಗೈದ ಪ್ರಕರಣಗಳು ನಮ್ಮ ಮುಂದಿವೆ. ಈ ಎಲ್ಲಾ ಘಟನೆಗಳೂ ಅಂದಿನ ರಾಷ್ಟ್ರೀಯ ನಾಯಕರುಗಳಿಗೆ ಷಾಕ್ ನೀಡಿತ್ತು. ಮುಂದೆ ದಲಿತ ಸಂಸದರ ಒತ್ತಡ ಹೆಚ್ಚಾಯಿತು, ಇದರ ಪರಿಣಾಮವಾಗಿ, ಭಾರತ ಸರ್ಕಾರ 1974ರಿಂದ ಈಚೆಗೆ ಪರಿಶಿಷ್ಟ ಜಾತಿಯವರ ಮೇಲೆ ಎಸಗುವ ದೌರ್ಜನ್ಯದ ಮೇಲ್ವಿಚಾರಣೆ ಪ್ರಾರಂಭಿಸಿತು. 1984ರ ನಂತರ ಪರಿಶಿಷ್ಟ ಪಂಗಡಗಳ ಮೇಲೆ ಎಸಗುವ ದೌರ್ಜನ್ಯದ ಮೇಲ್ವಿಚಾರಣೆ ಪ್ರಾರಂಭವಾಯಿತು. ಪರಿಶಿಷ್ಟರ ಹತ್ಯೆ, ಅವರ ಮೇಲಿನ ಅತ್ಯಾಚಾರ, ಸಜೀವ ದಹನ ಮತ್ತು ಗಂಭೀರ ಸ್ವರೂಪದ ಗಾಯಗಳಂತಹ ದೌರ್ಜನ್ಯಗಳನ್ನು ವಿಶೇಷವಾಗಿ ಮೇಲ್ವಿಚಾರಣೆ ಮಾಡಲಾರಂಭಿಸಿತು.

ಮುಂದೆ ದೌರ್ಜನ್ಯಗಳು ತೀವ್ರವಾಗಿ ಹೆಚ್ಚಾದವೇ ವಿನ: ತಗ್ಗಲಿಲ್ಲ. 1979ರಲ್ಲಿ ಬಿಹಾರ ರಾಜ್ಯದ ಬೆಲ್ಚಿ ಹಾಗೂ 1980ರಲ್ಲಿ ಪಿಪ್ರಾದಲ್ಲಿ ಪರಿಶಿಷ್ಟ ಜಾತಿಯವರ ನರಮೇಧ; 1980ರಲ್ಲಿ ಉತ್ತರ ಪ್ರದೇಶದ ಕಫಾಲ್ಟದಲ್ಲಿ ಪರಿಶಿಷ್ಟ ಜಾತಿಯ ಮದುಮಗ ಕುದುರೆ ಸವಾರಿ ಮಾಡುವಾಗ ಅವನ ಕೊಲೆ; 1982 ಮಧ್ಯ ಪ್ರದೇಶದ ಮಂಡ್ಸಾರ್ ಜಿಲ್ಲೆಯಲ್ಲಿ ಬಚ್‌ದಾಸ್‌ನ ಕೊಲೆ; 1985ರಲ್ಲಿ ಬಿಹಾರದ ಸಾಹಿಬ್ ಗಂಜ್‌ನಲ್ಲಿ ಪೋಲೀಸರೇ ಪರಿಶಿಷ್ಟ ಜಾತಿಯ 15 ಜನರನ್ನು ಗುಂಡಿಕ್ಕಿ ಕೊಂದ ಘಟನೆ, ಹೀಗೆ ಅನೇಕ ದೌರ್ಜನ್ಯ ಪ್ರಕರಣಗಳನ್ನು ಇಲ್ಲಿ ಉದಾಹರಿಸಬಹುದು. ಆದರೆ, ಈ ಎಲ್ಲಾ ಸಂದರ್ಭದಲ್ಲಿಯೂ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ದೌರ್ಜನ್ಯದ ಮೂಲವನ್ನು ನಿರ್ಮೂಲನೆ ಮಾಡುವ ವಿಚಾರವಾಗಿ ಕ್ರಮ ಕೈಗೊಳ್ಳಲಿಲ್ಲ; ಕೈಗೊಂಡ ಕ್ರಮಗಳೂ ಔಪಚಾರಿಕವಾಗಿದ್ದವೇ ಹೊರತು ಅತ್ಯಗತ್ಯ ಅಮೂಲಾಗ್ರ ಕ್ರಮಗಳನ್ನು ಕೈಗೊಳ್ಳಲೇ ಇಲ್ಲ. ಈ ನಿಟ್ಟಿನಲ್ಲಿ ದಲಿತ ಸಂಸದರು ಮತ್ತು ರಾಜಕೀಯ ನಾಯಕರು ಸರ್ಕಾರದ ಮೇಲೆ ಸತತವಾಗಿ ಒತ್ತಡ ಹೇರಿದರು, ಪರಿಣಾಮವಾಗಿ, ಸಮಸ್ಯೆಯ ಆಳ ಮತ್ತು ಹರಿವನ್ನು ಪ್ರಧಾನ ಮಂತ್ರಿ ರಾಜೀವ್ ಗಾಂಧಿಯವರು ಗುರುತಿಸಿದರು. ಇವರು 1987 ಆಗಸ್ಟ್ 15ರಂದು ಸ್ವಾತಂತ್ರ ದಿನಾಚರಣೆಯ ಭಾಷಣದಲ್ಲಿ, ಅಗತ್ಯ ಬಿದ್ದರೆ ಈ ದೌರ್ಜನ್ಯಗಳನ್ನು ತಡೆಗಟ್ಟಲು ಒಂದು ಕಾಯ್ದೆಯನ್ನು ರೂಪಿಸಲಾಗುವುದು ಎಂದು ಘೋಷಿಸಿದರು. *(ಪಿ.ಎಸ್. ಕೃಷ್ಣನ್, 'ಪರಿಶಿಷ್ಟರ ವಿರುದ್ಧ ದೌರ್ಜನ್ಯ; ಆತ್ಮಾವಲೋಕನ ಮತ್ತು ಭವಿಷ್ಯ', ಕಂಬ್ಯಾಟ್ ಲಾ, ಸಂಪುಟ. 8, ಸಂಚಿಕೆ 5-6, 2009, ಪುಟ 12)*

## ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ (ದೌರ್ಜನ್ಯ ತಡೆ) ಕಾಯ್ದೆ: ಅಗತ್ಯತೆ ಮತ್ತು ಉದ್ದೇಶಗಳು

ಸಂವಿಧಾನ ಅನುಚ್ಛೇದ 15 ಜಾತಿ ಮತ್ತು ಜನಾಂಗೀಯ ತಾರತಮ್ಯವನ್ನು ನಿಶೇಧಿಸುತ್ತದೆ. ಆದರೂ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ವಿರುದ್ಧ ತಾರತಮ್ಯ ವ್ಯಾಪಕವಾಗಿ ಹರಡಿದೆ. ಅನುಚ್ಛೇದ 17 ಅಸ್ಪೃಶ್ಯತೆಯನ್ನು ನಿಶೇಧಿಸುತ್ತದೆ, ಆದರೆ ಇನ್ನೂ ಈ ಆಚರಣೆ ಜೀವಂತವಾಗಿದೆ. ಆದ್ದರಿಂದ ಸಂಸತ್ತು *ಅಸ್ಪೃಶ್ಯತೆ ಅಪರಾಧ ಕಾಯ್ದೆ 1955*ನ್ನು ಜಾರಿಗೊಳಿಸಿತು. ಮುಂದೆ ಇದೇ ಕಾಯ್ದೆ ತಿದ್ದುಪಡಿಗೊಂಡು *ನಾಗರಿಕ ಹಕ್ಕುಗಳ ಸಂರಕ್ಷಣೆ ಕಾಯ್ದೆ* ಆಗಿ ಮಾರ್ಪಟ್ಟಿತು. ಈ ಕಾಯ್ದೆಯಲ್ಲಿ ಧಾರ್ಮಿಕ ಮತ್ತು ಸಾಮಾಜಿಕ ಅಸ್ಪೃಶ್ಯತೆ ಶಿಕ್ಷಾರ್ಹಗಿದ್ದರೂ ಸಾಕಷ್ಟು ನ್ಯೂನತೆಗಳು ಈ ಕಾಯ್ದೆಯಲ್ಲಿದ್ದವು. ಈ ಕಾಯ್ದೆಯಲ್ಲಿ ಶಿಕ್ಷೆ ಭಾರತಿಯ ದಂಡ ಸಂಹಿತೆ(ಐಪಿಸಿ)ಯಲ್ಲಿ ನೀಡುವ ಶಿಕ್ಷೆಗಳಿಗಿಂತಲೂ ಸಣ್ಣ ಶಿಕ್ಷೆಗಳಾಗಿತ್ತು. ಪರಿಶಿಷ್ಟರನ್ನು ರಕ್ಷಿಸುವಲ್ಲಿ ಕಾನೂನು ಸುವ್ಯವಸ್ಥೆ ಸಿಬ್ಬಂಧಿಗಳಿಗೆ ತರಬೇತಿ ಮತ್ತು ಕಳಕಳಿಯ ಕೊರತೆ, ಇವರಿಗೆ ಇತರೆ ಸಮುದಾಯದವರ ಹಿಂಸೆಗಳಿಂದ ರಕ್ಷಿಸಲು ಹೆಚ್ಚು ಶಿಕ್ಷೆಯನ್ನು ನೀಡುವ ಕಾಯ್ದೆಯ ಅಗತ್ಯ ಉಂಟಾಯಿತು. ಪರಿಣಾಮವಾಗಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ (ದೌರ್ಜನ್ಯ ತಡೆ) 1989 ಕಾಯ್ದೆ ಜಾರಿಯಾಯಿತು.

ಈ ಸಮಗ್ರ ಕಾಯ್ದೆಯ ಕರಡನ್ನು ಸಂಸತ್ತಿನಲ್ಲಿ ಪರಿಚಯಿಸಿದಾಗಷ್ಟೇ ಇದರ ಮೂಲ ಗುರಿ, ಉದ್ದೇಶ ಮತ್ತು ಶಿಕ್ಷೆಯ ತೀವ್ರತೆಗಳು ಸ್ಪಷ್ಟವಾಗಿ ತಿಳಿಯಿತು.

"ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರ ಸಾಮಾಜಿಕ-ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಲು ಹಲವಾರು ಕ್ರಮಗಳನ್ನು ಕೈಗೊಳ್ಳಲಾಗಿದೆ. ಆದರೂ ಅವರು ಸುಲಭವಾಗಿ ದೌರ್ಜನ್ಯಕ್ಕೆ ಒಳಪಡುತ್ತಾರೆ. ಇವರು ಇಂತಹ ಹಲವಾರು ಬರ್ಬರ ದೌರ್ಜನ್ಯಗಳಲ್ಲಿ ಜೀವ ಮತ್ತು ಆಸ್ತಿಯನ್ನು ಕಳೆದುಕೊಂಡಿದ್ದಾರೆ. ಇವರಿಗೆ ದೊರೆತಿರುವ ಅಲ್ಪಸ್ವಲ್ಪ ವಿದ್ಯಾಭ್ಯಾಸದ ಪರಿಣಾಮವಾಗಿ ಅವರಲ್ಲಿ ಒಂದಷ್ಟು ಜಾಗೃತಿ ಮೂಡಿದೆ ಹಾಗೂ ಅಸ್ಪೃಶ್ಯತೆಯ ವಿರುದ್ಧ ತಮ್ಮ ಧ್ವನಿ ಎತ್ತಿದ್ದಾರೆ. ತಮ್ಮ ಹಕ್ಕುಗಳನ್ನು ಪ್ರತಿಪಾದಿಸಿದರೆ, ಕಾನೂನುಬದ್ಧವಾಗಿ ಕನಿಷ್ಟ ವೇತನವನ್ನು ಬೇಡಿದರೆ, ಜೀತದಾಳು ಅಥವಾ ಬಲವಂತವಾಗಿ ದುಡಿಯಲು ನಿರಾಕರಿಸಿದರೆ, ಅವರನ್ನು ಹೀನವಾಗಿ ಕಂಡು, ಮನದಲ್ಲಿ ಭೀತಿ ಸೃಷ್ಟಿಸಲು ಪಟ್ಟಭದ್ರ ಹಿತಾಸಕ್ತಿಗಳು ಪ್ರಯತ್ನಿಸುತ್ತವೆ. ಅಷ್ಟೇ ಅಲ್ಲದೆ ಪರಿಶಿಷ್ಟ ಮಹಿಳೆಯರ ಆತ್ಮಗೌರವ ಸಂರಕ್ಷಿಸಲು ಪ್ರಯತ್ನಿಸಿದರೆ, ಪ್ರಬಲ ವರ್ಗದವರಿಗೆ ಈ ಜನ ಕಿರಿಕಿರಿ ಎನಿಸುತ್ತಾರೆ.

ಇಂತಹ ಪರಿಸ್ಥಿತಿಯಲ್ಲಿ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರ ಮೇಲಿನ ದೌರ್ಜನ್ಯ ತಡೆಯಲು ಮತ್ತು ನಿರ್ಮೂಲನೆ ಮಾಡಲು *ನಾಗರಿಕ ಹಕ್ಕುಗಳ ರಕ್ಷಣಾ ಕಾಯ್ದೆ 1955* ಹಾಗೂ ಐ.ಪಿ.ಸಿಯ ನಿಬಂಧನೆಗಳು ಸಾಕಾಗುತ್ತಿಲ್ಲ. ಆದ್ದರಿಂದ 'ದೌರ್ಜನ್ಯ'ವನ್ನು ಸ್ಪಷ್ಟಗೊಳಿಸಿ ಕಠಿಣ ಸಜೆಯನ್ನೂ ಪರಿಚಯಿಸುವುದು ಅಗತ್ಯವೆಂದು ಪರಿಗಣಿಸಿ, ಪರಿಶಿಷ್ಟರನ್ನು ರಕ್ಷಿಸಲು ಎಲ್ಲಾ ರಾಜ್ಯ ಮತ್ತು ಕೇಂದ್ರಾಡಳಿತ ಪ್ರದೇಶಗಳೂ ದೌರ್ಜನ್ಯವನ್ನು ತಡೆಯಲು ಕಠೋರ ಶಿಕ್ಷೆಯ ಕ್ರಮಗಳನ್ನು ಕೈಗೊಳ್ಳಲು ಪ್ರಸ್ತಾವಿಸಲಾಗಿದೆ. ದೌರ್ಜನ್ಯಗಳಾದಾಗ ಸೂಕ್ತ ಮತ್ತು ಸಮರ್ಪಕ ಪರಿಹಾರ ಹಾಗೂ ಪುನರ್ವಸತಿ ಕ್ರಮ ಕೈಗೊಳ್ಳಲು ನೆರವು ನೀಡಬೇಕೆಂದು ತಿಳಿಸಿದ್ದೇವೆ. *(ಪರಿಶಿಷ್ಟ ಜಾತಿಗಳ ರಾಷ್ಟ್ರೀಯ ಆಯೋಗ, ಮೊದಲ ವರದಿ 2004-05, ನವದೆಹಲಿ, 2006, ಪುಟ 222 ಪ್ಯಾರಾ 3)*

ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರು ಪ್ರಬಲ ವರ್ಗಗಳಿಂದ ಭೀತಿ, ಹಿಂಸೆ ಅಥವಾ ದಬ್ಬಾಳಿಕೆಗೆ ಒಳಗಾಗದೇ ಆತ್ಮಗೌರವ ಮತ್ತು

ಸ್ವಾಭಿಮಾನದಿಂದ ಸಮಾಜದಲ್ಲಿ ಜೀವಿಸಲು, ಇವರನ್ನು ಸಮರ್ಥರನ್ನಾಗಿಸಿ ನ್ಯಾಯ ಒದಗಿಸಲು ಸರ್ಕಾರ ದಿಟ್ಟ ಕ್ರಮಗಳನ್ನು ಕೈಗೊಂಡಿದೆ ಎಂಬುದಾಗಿ ತಿಳಿಸಿ ಕಾಯ್ದೆಯು ತನ್ನ ಆಶಯವನ್ನು ಸ್ಪಷ್ಟವಾಗಿ ತಿಳಿಸುತ್ತದೆ. *(ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ–ಪರಿಶಿಷ್ಟ ಜಾತಿಯ ವಿರುದ್ಧ ದೌರ್ಜನ್ಯ ತಡೆ ವರದಿ, ನವದೆಹಲಿ, 2002, ಪುಟ14 ಪ್ಯಾರಾ 15)*

## ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಗಳ(ದೌರ್ಜನ್ಯ ತಡೆ) ಕಾಯ್ದೆ 1989 ಮತ್ತು 1995 ನಿಯಮಗಳು: ವಿಶೇಷತೆ

### 1. ಅಪರಾಧಗಳು

- **ದೌರ್ಜನ್ಯ ತಡೆ ಕಾಯ್ದೆಯು ಐಪಿಸಿ ಅಥವಾ ನಾಗರಿಕರ ಹಕ್ಕುಗಳ ಸಂರಕ್ಷಣ ಕಾಯ್ದೆಗಳಲ್ಲಿ ತಿಳಿಸದೇ ಇರುವ ಅಪರಾಧಗಳನ್ನು ಗುರುತಿಸಿ, ಅರ್ಥ ಹಾಗೂ ಶಿಕ್ಷೆ ಎರಡನ್ನೂ ಸ್ಪಷ್ಟವಾಗಿ ತಿಳಿಸುತ್ತದೆ.**
- **ದೌರ್ಜನ್ಯ ತಡೆ** ಕಾಯ್ದೆಯು ಪರಿಶಿಷ್ಟ ಜಾತಿ/ಪಂಗಡಗಳವರನ್ನು ಸಾಮಾಜಿಕ, ಆಸ್ತಿ ಲಪಟಾಯಿಸಲು ಹೊಂಚು, ದುರಾಲೋಚನೆಯ ಉಪದ್ರವ, ರಾಜಕೀಯ ಹಾಗೂ ಆರ್ಥಿಕ ಶೋಷಣೆಯಿಂದ ರಕ್ಷಿಸುತ್ತದೆ.

### 2. ದೌರ್ಜನ್ಯಕ್ಕೊಳಗಾದವರು ಹಾಗೂ ದುಷ್ಕರ್ಮಿಗಳು

- ಪರಿಶಿಷ್ಟರ ಮೇಲೆ ದೌರ್ಜನ್ಯ ಎಸಗಿದ ದುಷ್ಕರ್ಮಿಗಳು ಪರಿಶಿಷ್ಟರಾಗಿಲ್ಲದೇ ಹೋದರೆ ಅದು ದೌರ್ಜನ್ಯ ಎನಿಸಿಕೊಳ್ಳುತ್ತದೆ. ಕೇವಲ ಜಾತಿಯ ಹಿನ್ನೆಲೆಯಲ್ಲಿ ವಿಶೇಷ ದೌರ್ಜನ್ಯವನ್ನು ಸರಳವಾಗಿ ಗುರುತಿಸುತ್ತದೆ.

### 3. ತನಿಖೆಗಳು

- ದೌರ್ಜನ್ಯ ಪ್ರಕರಣಗಳಲ್ಲಿ ತನಿಖೆ ಮಾಡುವ ಪೋಲೀಸ್ ಅಧಿಕಾರಿ, ಡೆಪ್ಯುಟಿ ಸೂಪರಿಂಟೆಂಡೆಂಟ್‌ಗಿಂತಲೂ ಕಿರಿಯ ಅಧಿಕಾರಿ ಆಗಿರಬಾರದು ಹಾಗೂ ಈ ರೀತಿಯ ಪ್ರಕರಣಗಳನ್ನು ತನಿಖೆ ಮಾಡಲು ಸಾಮರ್ಥ್ಯ ಹೊಂದಿರಬೇಕು.
- ದೌರ್ಜನ್ಯಕ್ಕೆ ಒಳಗಾದ 30 ದಿನಗಳಲ್ಲಿ ತನಿಖೆ ಪೂರ್ಣವಾಗಬೇಕು.
- ದೌರ್ಜನ್ಯ ಎಸಗಿದ ವ್ಯಕ್ತಿಗಳಿಗೆ ನಿರೀಕ್ಷಣಾ ಜಾಮೀನು ಸಿಗುವುದಿಲ್ಲ.

### 4. ನ್ಯಾಯಾಂಗ

- ಈ ಕಾಯ್ದೆಯಲ್ಲಿ ದೌರ್ಜನ್ಯ ಪ್ರಕರಣಗಳ ತ್ವರಿತ ವಿಚಾರಣೆ ಮತ್ತು ವಿಲೇವಾರಿಗೆ, ವಿಶೇಷ ನ್ಯಾಯಾಲಯ, ವಿಶೇಷ ಅಧಿಕಾರ, ಹಾಗೂ ವಿಶೇಷ ಪಬ್ಲಿಕ್ ಪ್ರಾಸಿಕ್ಯೂಟರ್‌ಗಳ ವ್ಯವಸ್ಥೆಯಿದೆ.

### 5. ಶಿಕ್ಷೆ

- ಪರಿಶಿಷ್ಟ ಜಾತಿ/ಪಂಗಡದವರ ಮೇಲೆ ಅತ್ಯಾಚಾರ ಬಿಟ್ಟರೆ, ಬೇರೆ ಎಲ್ಲಾ ಅಪರಾಧಗಳಿಗೂ ಐಪಿಸಿಯಲ್ಲಿ ನೀಡುವ ಶಿಕ್ಷೆಗಿಂತಲೂ ಕಠಿಣ ಶಿಕ್ಷೆಯನ್ನು ಈ ಕಾಯ್ದೆ ನೀಡುತ್ತದೆ. ಜೊತೆಗೆ, ಸರ್ಕಾರಿ ನೌಕರರ ಮೇಲೆ ಆರೋಪ ಇದ್ದರೆ ಅವರೂ ಹೆಚ್ಚಿನ ಶಿಕ್ಷೆಗೆ ಒಳಗಾಗುತ್ತಾರೆ. ಬಹುಮುಖ್ಯವಾಗಿ ಕರ್ತವ್ಯಲೋಪವನ್ನೂ ಶಿಕ್ಷಾರ್ಹವೆನ್ನುತ್ತದೆ.

### 6. ಪರಿಹಾರ ಮತ್ತು ಪುನರ್ವಸತಿ

- ತನಿಖೆ ಮತ್ತು ವಿಚಾರಣೆಗೆ ಹಾಜರಾಗಲು, ದೌರ್ಜನ್ಯಕ್ಕೆ ಒಳಗಾದವರಿಗೆ ಮತ್ತು ಸಾಕ್ಷಿಗಳಿಗೆ, ಪ್ರಯಾಣ ಮತ್ತು ನಿರ್ವಹಣೆ ಭತ್ಯೆ ಜೊತೆಗೆ ದೌರ್ಜನ್ಯಕ್ಕೆ ಒಳಗಾದವರಿಗೆ ಹಣಕಾಸು ನೆರವು, ಪರಿಹಾರ ಮತ್ತು ಪುನರ್ವಸತಿ ಅವರ ಹಕ್ಕುಗಳು ಎಂದು ಹೇಳುತ್ತದೆ.

### 7. ಮೇಲ್ವಿಚಾರಣೆ ವ್ಯವಸ್ಥೆಗಳು

- ಕಾಯ್ದೆಯ ಪ್ರಕರಣಗಳಲ್ಲಿ ಕೈಗೊಂಡ ಕ್ರಮಗಳ ಮೇಲ್ವಿಚಾರಣೆ ಮಾಡಲು ಪ್ರತಿಯೊಂದು ರಾಜ್ಯದಲ್ಲಿಯೂ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಗಳ ರಕ್ಷಣಾ ಕೋಶವನ್ನು ಕಡ್ಡಾಯವಾಗಿ ಸ್ಥಾಪನೆ ಮಾಡಬೇಕು. ರಾಜ್ಯದ ಮುಖ್ಯ ಪೋಲೀಸ್ ನಿರ್ದೇಶಕರು/ನಿರೀಕ್ಷಕರು ಇದರ ಮುಖ್ಯಸ್ಥರಾಗಿರಬೇಕು.
- **ನೇಮಕಾತಿ:** i) ಕಾಯ್ದೆಯ ಉದ್ದೇಶಗಳನ್ನು ಈಡೇರಿಸಲು ಜಿಲ್ಲಾ ನ್ಯಾಯಾಧೀಶರು, ಪೋಲೀಸ್ ಸೂಪರಿಂಟೆಂಡೆಂಟ್ ಅಥವಾ ಇತರೆ ಅಧಿಕಾರಿಗಳ ಕೆಲಸಗಳನ್ನು ಸಂಯೋಜನೆ ಮಾಡಲು ನೋಡಲ್ ಅಧಿಕಾರಿಯ ನೇಮಕ ಕಡ್ಡಾಯ, ಹಾಗೂ ii) ಕಾಯ್ದೆಯಯನ್ನು ಅನುಷ್ಠಾನಗೊಳಿಸಬೇಕಿರುವ ಜಿಲ್ಲಾ ನ್ಯಾಯಾಧೀಶರು ಹಾಗೂ ಪೋಲೀಸ್ ಸೂಪರಿಂಟೆಂಡೆಂಟ್ ಅಥವಾ ಇತರೆ ಅಧಿಕಾರಿಗಳ ಕೆಲಸಗಳನ್ನು ಸಂಯೋಜಿಸಲು ಜಿಲ್ಲಾ ಮಟ್ಟದಲ್ಲಿ ವಿಶೇಷ ಅಧಿಕಾರಿಯ ನೇಮಕ ಕಡ್ಡಾಯ.
- ಕಾಯ್ದೆಯನ್ನು ಅನುಷ್ಠಾನಗೊಳಿಸುವಲ್ಲಿ ಉತ್ತರದಾಯಿತ್ವ ಹಾಗೂ ರಾಜಕೀಯ ಮೇಲ್ವಿಚಾರಣೆಯನ್ನು ಹೆಚ್ಚಿಸಲು ರಾಜ್ಯ ಮತ್ತು ಜಿಲ್ಲಾ ಮಟ್ಟದ ಜಾಗೃತಿ ಮತ್ತು ಮೇಲ್ವಿಚಾರಣೆ ಸಮಿತಿಯ ಸ್ಥಾಪನೆಯನ್ನು ಕಡ್ಡಾಯಗೊಳಿಸುತ್ತದೆ.
- ರಾಜ್ಯ ಸರ್ಕಾರವು ಕಾಯ್ದೆಯ ಅನುಷ್ಠಾನಕ್ಕೆ ಕೈಗೊಂಡ ಕ್ರಮಗಳ ವಾರ್ಷಿಕ ವರದಿಯನ್ನು ಕೇಂದ್ರ ಸರ್ಕಾರಕ್ಕೆ ಕಡ್ಡಾಯವಾಗಿ ಸಲ್ಲಿಸಬೇಕು.
- ಪರಿಶಿಷ್ಟ ಜಾತಿಯ ಮತ್ತು ಪರಿಶಿಷ್ಟ ಪಂಗಡಗಳ ಎರಡೂ ರಾಷ್ಟ್ರೀಯ ಆಯೋಗಗಳಿಗೆ ಕೆಳಕಂಡ ಅಧಿಕಾರಗಳನ್ನು ನೀಡುತ್ತದೆ: i) ಪರಿಶಿಷ್ಟ ಜಾತಿ/ಪಂಗಡದವರಿಗೆ ನೀಡಿರುವ ಸುರಕ್ಷತೆಯನ್ನು ತನಿಖೆ ಮಾಡಲು, ಮೇಲ್ವಿಚಾರಣೆ ಮತ್ತು ಮೌಲ್ಯಮಾಪನದ ಅಧಿಕಾರ; ii) ಪರಿಶಿಷ್ಟರು ನಿರ್ಧಿಷ್ಟವಾಗಿ ಹಕ್ಕುಗಳ ಉಲ್ಲಂಘನೆಯಾಗಿದೆ ಎಂದು ನೀಡಿರುವ ದೂರುಗಳ ವಿಚಾರಣೆ; iii) ಪರಿಶಿಷ್ಟ ಜಾತಿ/ಪಂಗಡಗಳವರ ರಕ್ಷಣೆ, ಅಭಿವೃದ್ಧಿ, ಕಲ್ಯಾಣ ಮತ್ತು ಪ್ರಗತಿಗೆ ಅಗತ್ಯದ ಕ್ರಮ ಕೈಗೊಳ್ಳಲು ಅಧಿಕಾರ.

### 8 ಮುನ್ನೆಚ್ಚರಿಕೆಯ ಕ್ರಮಗಳು

- ಕೆಳಕಂಡ ಅನೇಕ ಮುನ್ನೆಚರಿಕೆಯ ಕ್ರಮಗಳನ್ನು ಕೈಗೊಳ್ಳಲು ಕಾಯ್ದೆ ಅವಕಾಶ ನೀಡುತ್ತದೆ: ಆಕಸ್ಮಿಕ ಘಟನೆಗಳನ್ನು ನಿಭಾಯಿಸಲು ಮಾದರಿ ಯೋಜನೆ ತಯಾರಿಸಲು; ದೌರ್ಜನ್ಯಪೀಡಿತ ಪ್ರದೇಶ ಗುರುತಿಸಲು; ಯಾರಾದರೂ ಕಾಯ್ದೆಯನ್ನು ಉಲ್ಲಂಘಿಸಬಹುದಾದರೆ ಅವರ ಶಸ್ತಗಳ ಲೈಸೆನ್ಸ್ ರದ್ದುಗೊಳಿಸುವುದು; ಪರಿಶಿಷ್ಟ ಜಾತಿ/ ಪಂಗಡಗಳವರಿಗೆ ತಮ್ಮನ್ನು ರಕ್ಷಿಸಿಕೊಳ್ಳಲು ಶಸ್ತ್ರಗಳಿಗೆ ಲೈಸೆನ್ಸ್ ನೀಡಲು; ದೌರ್ಜನ್ಯಪೀಡಿತ ಪ್ರದೇಶಗಳಲ್ಲಿ ವಾಸಿಸುವ ಪರಿಶಿಷ್ಟರಿಗೆ ಅವರ ಹಕ್ಕುಗಳ ಕುರಿತು ಜಾಗೃತಿ ಮೂಡಿಸಲು ಶಿಬಿರಗಳನ್ನು ಏರ್ಪಡಿಸಲು ಕಾಯ್ದೆಯಲ್ಲಿ ಅವಕಾಶವಿದೆ.

ಮನುಷ್ಯರ ಹಕ್ಕುಗಳು ಉಲ್ಲಂಘನೆಯಾದಾಗ, ನೊಂದ ವ್ಯಕ್ತಿಗೆ ಪರಿಹಾರ ದೊರೆತರೆ ಮಾತ್ರ ಹಕ್ಕುಗಳು ಸಾಕಾರಗೊಳ್ಳುತ್ತವೆ. ನೊಂದವರಿಗೆ ಕಾನೂನು ಪರಿಹಾರ ಸಿಗದಿದ್ದರೆ ಅಂತಹ ಹಕ್ಕುಗಳನ್ನು ನೀಡುವುದರಿಂದ ಯಾವ ಪ್ರಯೋಜನವೂ ಇಲ್ಲ.

ಡಾ. ಬಿ.ಆರ್. ಅಂಬೇಡ್ಕರ್

## ಕಾಯ್ದೆ ಜಾರಿಗೊಂಡು 20 ವರ್ಷಗಳಾಗಿದೆ–ಆತ್ಮಾವಲೋಕನ ಮತ್ತು ಪ್ರಶ್ನೆಗಳು

ಭಾರತ 60 ವರ್ಷಗಳ ಹಿಂದೆ ಗಣರಾಜ್ಯವಾಯಿತು. ಅಂದಿನಿಂದ ಇಂದಿನವರೆಗೂ ಪರಿಶಿಷ್ಟ ಜಾತಿ/ಪಂಗಡಗಳವರ ಬವಣೆಗಳಿಗೆ ಭಾರತ ಗಣರಾಜ್ಯ ಉತ್ತಮವಾಗಿ ಸ್ಪಂದಿಸಿದೆ. ಪರಿಶಿಷ್ಟರ ಮೇಲಾದ ದೌರ್ಜನ್ಯಗಳ ಹಿನ್ನೆಲೆಯಲ್ಲಿ ರಾಷ್ಟ್ರಕ್ಕೆ ಆಗಾಗ್ಗೆ ಪಾಪಪ್ರಜ್ಞೆ ಕಾಡಿದೆ. ಸಂವಿಧಾನ ಸ್ವೀಕರಿಸಿ ಐದು ವರ್ಷಗಳಲ್ಲೇ *ಅಸ್ಪೃಶ್ಯತೆ ನಿಶೇಧ ಕಾಯ್ದೆ 1955* ಜಾರಿಯಾಯಿತು, 21 ವರ್ಷಗಳಲ್ಲೇ ತಿದ್ದುಪಡಿಗೊಂಡು *ನಾಗರಿಕ ಹಕ್ಕುಗಳ ಸಂರಕ್ಷಣೆ ಕಾಯ್ದೆ(1976)*ಯಾಗಿ ಮಾರ್ಪಟ್ಟಿತ್ತು.

ನಂತರ 13 ವರ್ಷಗಳಲ್ಲಿ ಸಂಸತ್ತು *ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರ (ದೌರ್ಜನ್ಯ ತಡೆ) ಕಾಯ್ದೆ 1989* ಜಾರಿ ಮಾಡಿತು. ಬದಲಾದ ಪರಿಸ್ಥಿತಿಯಲ್ಲಿ ಪರಿಶಿಷ್ಟರ ಮೇಲೆ ಹೊಸ ರೀತಿಯ ದೌರ್ಜನ್ಯಗಳು ಪ್ರಾರಂಭವಾಗಿದ್ದವು. ಇವುಗಳನ್ನು ನಿಭಾಯಿಸಲು ಕಾಯ್ದೆಯಲ್ಲಿ ದೌರ್ಬಲ್ಯಗಳಿದ್ದ ಕಾರಣ ಅವುಗಳನ್ನು 1989ರ ಕಾಯ್ದೆಯಲ್ಲಿ ಸರಿಪಡಿಸಲಾಯಿತು ಎಂಬುದರಲ್ಲಿ ಸ್ವಲ್ಪವೂ ಅನುಮಾನವಿಲ್ಲ. ಆದರೆ, ಕಾಯ್ದೆಯು ಸಂಸತ್ತಿನಲ್ಲಿ ಸ್ವೀಕೃತಿಗೊಂಡಿದ್ದರೂ ಸಹ ಪ್ರಬಲ ಜಾತಿಯ ರಾಜಕಾರಣಿಗಳ ಒತ್ತಡದಿಂದಾಗಿ ಕಾಯ್ದೆಯ ಅನುಷ್ಠಾನ ಆಗಲಿಲ್ಲ. ಈ ಸಂದರ್ಭದಲ್ಲಿ ಜಾಗೃತಗೊಂಡ ಪರಿಶಿಷ್ಟ ಜಾತಿ/ಪಂಗಡಗಳವರ ಜನರು, ಆಂದೋಲನಗಳು ಮತ್ತು ನಾಗರಿಕ ಸಂಸ್ಥೆಗಳ ಒತ್ತಡ ಹೆಚ್ಚಾದ್ದರಿಂದಲೇ ಕಾಯ್ದೆಯ ಅನುಷ್ಠಾನ ಪ್ರಾರಂಭವಾಯಿತು ಎಂಬುದೂ ಅಷ್ಟೇ ಸತ್ಯ. ಸಹಸ್ರಾರು ವರ್ಷಗಳಿಂದ ನಡೆದಿದ್ದ ದಬ್ಬಾಳಿಕೆ ದೌರ್ಜನ್ಯದ ವಿರುದ್ಧ ನಾಗರಿಕರ ಹೋರಾಟದ ಫಲವಾಗಿ ಇಂದು ಜಾತಿಯನ್ನೇ ಅವಲಂಬಿಸಿರುವ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ವ್ಯವಸ್ಥೆಗಳನ್ನು ಸ್ವಲ್ಪ ಮಟ್ಟಿನ ಹಿಡಿತದಲ್ಲಿ ಇಡಲು ಸಾಧ್ಯವಾಗಿದೆ.

ಇತಿಹಾಸ ಮರುಕಳಿಸುವುದನ್ನು ಗಮನಿಸಿದರೆ, ಇತಿಹಾಸ ಮೊದಲೇ ನಿರ್ಧಾರ ಆಗಿರುತ್ತದೆ ಎಂದು ಅನಿಸುತ್ತದೆ. ಸಂದರ್ಭಗಳು ಬದಲಾದಂತೆಲ್ಲ ಮರುಕಳಿಸುವ ಇತಿಹಾಸ ಮತ್ತಷ್ಟು ಚೇತರಿಕೆಗೊಂಡಿರುತ್ತದೆ ಹಾಗೂ ಹೊಸ ರೀತಿಯಲ್ಲಿ ಕಾಣಿಸಿಕೊಳ್ಳುತ್ತದೆ. ಭಾರತದ ಇತಿಹಾಸದಲ್ಲಿ ದೀರ್ಘಕಾಲದವರೆಗೆ ಪಕ್ಷಪಾತದ ಸಂಚಿಗೆ ಒಳಗಾಗಿರುವ ಪರಿಶಿಷ್ಟ ಜಾತಿ ಮತ್ತು ಪಂಗಡಗಳವರಿಗೆ ಸಾಮಾಜಿಕ ಸುರಕ್ಷತೆ ಮತ್ತು ಭದ್ರತೆಯನ್ನು ಭಾರತ ಗಣರಾಜ್ಯ ನೀಡಬೇಕು. ಈ ದಿಶೆಯಲ್ಲಿ ದೇಶದ ಹೊಣೆಗಾರಿಕೆಯನ್ನು ಹೆಚ್ಚಿಸಲು, ಇತಿಹಾಸವನ್ನು ಗಮನದಲ್ಲಿಟ್ಟುಕೊಂಡು ಜಾತ್ಯಾತೀತ ಗಣರಾಜ್ಯದ ಶಾಸಕಾಂಗ, ನ್ಯಾಯಾಂಗ ಮತ್ತು ಕಾರ್ಯಾಂಗ ಎಂಬ ಮೂರೂ ಪ್ರಮುಖ ಅಂಗಗಳ ಆಡಳಿತವನ್ನು ಕಾಯುವ ಕಣ್ಗಾವಲು ಪಡೆಯಾಗಿ ಕಾಯಲು **ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ (ದೌರ್ಜನ್ಯ ತಡೆ) ಕಾಯ್ದೆ 1989 ಬಲವರ್ಧನೆ–ರಾಷ್ಟ್ರೀಯ ಒಕ್ಕೂಟ** ನಿರ್ಧರಿಸಿದೆ. ಈ ಕರಾಳ ವರದಿಯ ಮುಂದಿನ ಪುಟಗಳಲ್ಲಿ ರಾಷ್ಟ್ರೀಯ ಒಕ್ಕೂಟವು ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳಲು ಪ್ರಯತ್ನಿಸುತ್ತದೆ:

⇒ *ಸಂವಿಧಾನದ ಅನುಚ್ಛೇದ 21ರಲ್ಲಿ ವರ್ಣಿಸಿರುವ ಮೂಲಭೂತ ಹಕ್ಕುಗಳು ಪರಿಶಿಷ್ಟ ಜಾತಿ/ಪಂಗಡಗಳವರಿಗೆ ಸಿಕ್ಕಿದೆಯೇ? ವಿಶೇಷವಾಗಿ ಜೀವಿಸುವ ಹಕ್ಕು ಮತ್ತು ಭದ್ರತೆ ದೊರೆತಿವೆಯೇ?*

⇒ *ಪರಿಶಿಷ್ಟ ಜಾತಿ/ಪಂಗಡಗಳವರ ಮೇಲೆ ದೌರ್ಜನ್ಯಗಳಾದಾಗ ಅವರಿಗೆ, ಕಾನೂನು ವ್ಯವಸ್ಥೆ ಹಾಗೂ ನ್ಯಾಯಾಂಗದ ಸಹಾಯ, ಎರಡನ್ನೂ ಹಕ್ಕುಗಳ ರೂಪದಲ್ಲಿ ಪಡೆಯಲು ಸಾಧ್ಯವಾಗಿದೆಯೇ?*

⇒ *ದೌರ್ಜನ್ಯ ತಡೆ ಕಾಯ್ದೆಯು ಜಾರಿಯಾಗಿರುವುದರಿಂದ ಪರಿಶಿಷ್ಟ ಜಾತಿ/ಪಂಗಡಗಳವರಿಗೆ ನ್ಯಾಯ ಪಡೆದುಕೊಳ್ಳುವ ತಮ್ಮ ಹಕ್ಕುಗಳು, ಹಣಕಾಸು, ಕಾನೂನು ನೆರವು, ಜೀವನ, ಆಸ್ತಿ ಮತ್ತಿತ್ಯಾದಿಗಳ ಸುರಕ್ಷತೆ ಹೆಚ್ಚಾಗಿದೆಯೇ?*

⇒ *ಅಪರಾಧದ ತೀವ್ರತೆಗೆ ತಕ್ಕಂತೆ ಕೋರ್ಟು ಮತ್ತು ಕಾನೂನು ದುಷ್ಕರ್ಮಿಗಳಿಗೆ ಶಿಕ್ಷೆ ವಿಧಿಸಲು ಸಾಧ್ಯವಾಗಿದೆಯೇ?*

⇒ *ಕಾಯ್ದೆಗೆ ವ್ಯಾಪಕ ಪ್ರಚಾರ ನೀಡಿ ಪರಿಶಿಷ್ಟ ಜಾತಿ/ಪಂಗಡಗಳವರನ್ನು ಜಾಗೃತಗೊಳಿಸಲು ಪ್ರಯತ್ನವಾಗಿದೆಯೇ?*

⇒ *ಪರಿಶಿಷ್ಟ ಜಾತಿ/ಪಂಗಡಗಳವರ ಭದ್ರತೆ ಮತ್ತು ಸುರಕ್ಷತೆಗೆ ಅಗತ್ಯವಿರುವ ಎಲ್ಲಾ ಮಹತ್ವದ ಅಂಶಗಳಿಗೆ ಸ್ಪಂದಿಸಲು ಈ ಕಾಯ್ದೆ ಸಮಗ್ರವಾಗಿದೆಯೇ?*

⇒ *ಸಂವಿಧಾನದ ಷೆಡ್ಯೂಲ್ ಲಿಸ್ಟ್‌ನಲ್ಲಿ ತಿಳಿಸಿರುವ ಜಾತಿಯವರು ಕ್ರಿಶ್ಚಿಯನ್ ಮತ್ತು ಮುಸ್ಲಿಂ ಧರ್ಮದಲ್ಲೂ ಇದ್ದಾರೆ ಮತ್ತು ಬೇರೆ ರಾಜ್ಯಗಳಿಗೆ ಕೆಲಸಗಳಿಗೆ ವಲಸೆ ಹೋಗಿರುವ ಪರಿಶಿಷ್ಟ ಪಂಗಡಗಳವರೂ ಇದ್ದಾರೆ. ಪರಿಶಿಷ್ಟ ಪಂಗಡಗಳಿಗೆ ಸೇರಿದವರು ಬೇರೊಂದು ಧರ್ಮಕ್ಕೆ ಸೇರಿದರೆ ಈ ಕಾಯ್ದೆಯಲ್ಲಿನ ಸೌಕರ್ಯ ಸವಲತ್ತುಗಳನ್ನು ಹೇಗೆ ಕಳೆದುಕೊಳ್ಳುವುದಿಲ್ಲವೋ ಅದೇ ರೀತಿ ಇತರೆ ಧರ್ಮಗಳಿಗೆ ಹೋದ ಪರಿಶಿಷ್ಟರಿಗೂ ಹಾಗೂ ವಲಸೆ ಹೋದವರಿಗೂ ಈ ಕಾಯ್ದೆಯ ರಕ್ಷಣೆಯನ್ನು ನೀಡಲು, ಕಾಯ್ದೆಯ ತಿದ್ದುಪಡಿ ಆಗಬೇಕಲ್ಲವೇ?*

⇒ *ಕಾಯ್ದೆಯ ಅನುಷ್ಠಾನವಾಗಲೇಬೇಕು. ಇದನ್ನು ಖಚಿತಪಡಿಸಲು ರಾಷ್ಟ್ರ ಮತ್ತು ರಾಜ್ಯಮಟ್ಟಗಳಲ್ಲಿ ವ್ಯವಸ್ಥೆಗಳನ್ನು ಬಲಪಡಿಸುವ ಅಗತ್ಯ ಇದೆಯೇ? ಇದ್ದಲ್ಲಿ, ಹೇಗೆ ಬಲಪಡಿಸಬೇಕು?*

⇒ *ಗಣರಾಜ್ಯಕ್ಕೆ ಪರಿಶಿಷ್ಟ ಜಾತಿ/ಪಂಗಡಗಳ ಸಮುದಾಯಗಳ ಹಿತಾಸಕ್ತಿ ಕಾಪಾಡಲು ನೈತಿಕ, ಕಾನೂನು ಮತ್ತು ರಾಜಕೀಯ ಕಟ್ಟುಪಾಡುಗಳಿವೆ. ಇವುಗಳನ್ನು ಗಣರಾಜ್ಯವು ಸತತವಾಗಿ ತೊಡಗಿಸಿಕೊಳ್ಳುವಂತೆ ಮಾಡಲು ನಾಗರಿಕ ಸಮಾಜ ಸಂಸ್ಥೆಗಳು ಏನು ಮಾಡಬೇಕು?*

## I ಅಳತೆಗೋಲು

ಜೀವಿಸುವುದು ಪ್ರತಿಯೊಬ್ಬರ ಜನ್ಮಸಿದ್ಧ ಹಕ್ಕು, ಈ ಹಕ್ಕನ್ನು ಯಾರೊಬ್ಬರೂ ದಬ್ಬಾಳಿಕೆಯಿಂದ ಕಸಿದುಕೊಳ್ಳಬಾರದು *(ICCPR ಅನುಚ್ಛೇದ 6(1), ಸಂವಿಧಾನ, ಅನುಚ್ಛೇದ 21)*

- ಕ್ರೂರ ಅಥವಾ ಹಿಂಸೆ, ಅಮಾನುಶ್ಯ ಅಥವಾ ಕೀಳು ಉಪಚಾರದ ಶಿಕ್ಷೆಗೆ ಯಾರೊಬ್ಬರೂ ಬಲಿಯಾಗಬಾರದು. *(ICCPR ಅನುಚ್ಛೇದ 7)*
- ವ್ಯಕ್ತಿಸ್ವಾತಂತ್ರ ಹಾಗೂ ಭದ್ರತೆಯ ಹಕ್ಕು ಪ್ರತಿಯೊಬ್ಬರಿಗೂ ಇದೆ. *(ICCPR ಅನುಚ್ಛೇದ 9(1); ಅನುಚ್ಛೇದ 21 ಭಾರತೀಯ ಸಂವಿಧಾನ)*
- ಮನುಷ್ಯರ ಖಾಸಗಿ ಜೀವನ, ಕುಟುಂಬ, ಮನೆ ಅಥವಾ ಮಾತುಕತೆ ಮೇಲೆ ದಬ್ಬಾಳಿಕೆ ಅಥವಾ ಕಾನೂನುಬಾಹಿರ ಹಸ್ತಕ್ಷೇಪ ಸಲ್ಲದು, ವ್ಯಕ್ತಿಯೊಬ್ಬರ ಗೌರವ ಮತ್ತು ಘನತೆಯ ಮೇಲೆ ಆಕ್ರಮಣ ಕೂಡದು. *(ICCPR ಅನುಚ್ಛೇದ 17(1))*
- ರಾಜ್ಯವು ಜನಾಂಗೀಯ ತಾರತಮ್ಯ ನಿಶೇಧಿಸಿ ನಿರ್ಮೂಲನೆ ಮಾಡಬೇಕು ಮತ್ತು ಕಾನೂನಿನಿಗೆ ಪ್ರತಿಯೊಬ್ಬರೂ ಸಮಾನ ಎನ್ನುವುದನ್ನು ಖಚಿತಪಡಿಸಬೇಕು, ವಿಶೇಷವಾಗಿ ವ್ಯಕ್ತಿಯೊಬ್ಬರ ಭದ್ರತೆ ಹಾಗೂ ಹಿಂಸೆ ವಿರುದ್ಧ ರಕ್ಷಣೆಯನ್ನು ಖಚಿತಪಡಿಸಬೇಕು *(ICERD ಅನುಚ್ಛೇದ 5(b))*
- ಮಹಿಳೆಯರ ಜನ್ಮಾಧಾರಿತ (ಜಾತಿ) ಬೇಧಭಾವ, ವಿಶೇಷವಾಗಿ ವ್ಯಕ್ತಿಗತ ಭದ್ರತೆಯಲ್ಲಿ ತಾರತಮ್ಯ ಮತ್ತು ಎಲ್ಲಾ ರೀತಿಯ ತಾರತಮ್ಯವನ್ನು ರಾಜ್ಯ ನಿರ್ಮೂಲನೆ ಮಾಡಬೇಕು.*(ಪ್ಯಾರಾ 12 CERD General Recommendations XXIX 2002)*
- ಸಾಮಾಜಿಕ ಅನ್ಯಾಯ ಮತ್ತು ಎಲ್ಲಾ ರೀತಿಯ ಶೋಷಣೆಯಿಂದ [ಪರಿಶಿಷ್ಟ ಜಾತಿ/ಪಂಗಡಗಳವರನ್ನು] ರಾಜ್ಯಗಳು ರಕ್ಷಿಸಬೇಕು *(ಸಂವಿಧಾನ, ಅನುಚ್ಛೇದ 46)*

**ಸೂಚನೆ: ಇವುಗಳನ್ನೂ ಸಹ ಓದಿರಿ–** *(1) ಅನುಚ್ಛೇದ 8(3)(a) ಐಸಿಸಿಪಿಆರ್; (2) ಪ್ಯಾರಾ 11 ಸಿಇಆರ್‌ಡಿ ಸಾಮಾನ್ಯ ಶಿಫಾರಸ್ಸು XXIX; (3) ಪ್ಯಾರಾ 3 ಸಿಇಆರ್‌ಡಿ ಸಾಮಾನ್ಯ ಶಿಫಾರಸ್ಸು XXXI; (4) ಅನುಚ್ಛೇದ. 17 ಮತ್ತು 23(1) ಭಾರತ ಸಂವಿಧಾನ.*

**"ಐಪಿಸಿ ಸೆಕ್ಷನ್ 438 ತೀವ್ರತರ ಅಪರಾಧಗಳಿಗೆ ಶಿಕ್ಷೆ ವಿವರಿಸುತ್ತದೆ, ಪರಿಶಿಷ್ಟ ಜಾತಿ/ಪಂಗಡಗಳ *(ದೌರ್ಜನ್ಯ ತಡೆ)* ಕಾಯ್ದೆಯಲ್ಲಿ 'ಚಿಕ್ಕಪುಟ್ಟ' ಅಪರಾಧಗಳಿಗೂ ಶಿಕ್ಷೆಯನ್ನು ತಿಳಿಸಿಲ್ಲ. ಈ ಅಸಮಾಧಾನವನ್ನು ಸಮರ್ಥಿಸಿಕೊಳ್ಳಲು ಆಗುವುದಿಲ್ಲ. ಪರಿಶಿಷ್ಟ ಜಾತಿ/ಪಂಗಡಗಳವರನ್ನು ಕೀಳಾಗಿ, ಸಮಾಜದಲ್ಲಿ ಅವರು ನಿಕೃಷ್ಟವಾಗಿ ನಡೆಸಿಕೊಳ್ಳುವುದು, ಅವರನ್ನು ಆತ್ಮಗೌರವ ಮತ್ತು ಘನತೆಯಿಂದ ಜೀವಿಸಲು ತಡೆಯುವುದು ಅಪರಾಧ ಎಂದು ದೌರ್ಜನ್ಯ ತಡೆ ಕಾಯ್ದೆಯ ಸೆಕ್ಷನ್ 3 ತಿಳಿಸುತ್ತದೆ. ಪರಿಶಿಷ್ಟರನ್ನು ಗುಲಾಮಗಿರಿಯಲ್ಲಿರಿಸುವ ಉದ್ದೇಶದಿಂದ ಅವಹೇಳನ ಮಾಡಿ ತುಳಿಯಲು ಈ ಅಪರಾಧಗಳಾಗುತ್ತವೆ. ಇವು ವಿಶೇಷ ಅಪರಾಧಗಳಾಗಿವೆ ಮತ್ತು ಐ.ಪಿ.ಸಿಯಲ್ಲಿ ತಿಳಿಸುವ ಅಪರಾಧಗಳಿಗೆ ಜೊತೆ ಹೋಲಿಸುವಂತಿಲ್ಲ."**

*ಮಧ್ಯಪ್ರದೇಶ ರಾಜ್ಯ V/s ರಾಮಕೃಷ್ಣ ಬಲೋಥಿಯಾ, ಮತ್ತೊಬ್ಬರ ಪ್ರಕರಣ, ಸರ್ವೋಚ್ಚ ನ್ಯಾಯಾಲಯ, 1995*

## II ನಿಜಸ್ಥಿತಿ?

### 1. ಕಳೆದ ದಶಕದಲ್ಲಿ: ಹೆಚ್ಚಿದ ಅಪರಾಧ ಮತ್ತು ದೌರ್ಜನ್ಯದ ಸ್ವರೂಪ

- ಪರಿಶಿಷ್ಟ ಜಾತಿ ಮತ್ತು ಪಂಗಡಗಳವರನ್ನು ರಕ್ಷಿಸುವಲ್ಲಿ ದೌರ್ಜನ್ಯ ತಡೆ ಕಾಯ್ದೆ ಅತ್ಯಂತ ಮಹತ್ತರವಾದದ್ದು. ಸದರಿ ಕಾಯ್ದೆ ಜಾರಿಯಲ್ಲಿದ್ದರೂ 1995ರಿಂದ 2007ರ ನಡುವೆ ದೇಶದಲ್ಲಿ ಪರಿಶಿಷ್ಟರ ಮೇಲೆ ಎಸಗಿರುವ ಅಪರಾಧಗಳ ಮೂರನೇ ಒಂದು ಭಾಗಕ್ಕೂ ಕಡಿಮೆ ಪ್ರಕರಣಗಳು ಮಾತ್ರ ಈ ಕಾಯ್ದೆಯ ಅಡಿಯಲ್ಲಿ ದಾಖಲಾಗಿವೆ.

| ಒಟ್ಟು ಪ್ರಕರಣಗಳು | ದೌರ್ಜನ್ಯ ಕಾಯ್ದೆಯಡಿ | ಒಟ್ಟು ಪ್ರಕರಣಗಳ % |
|---|---|---|
| 3,71,942 | ಪ.ಜಾ 1,21,464 ಅಪರಾಧಗಳು | ಕೇವಲ 1/3 |
| 69,482 | ಪ.ಪಂ 14,263 ಅಪರಾಧಗಳು | ಕೇವಲ 1/5 |

| | |
|---|---|
| ಪ.ಜಾ/ಪ.ಪಂಗಡಗಳವರ ಮೇಲೆಸಗಿದ ಅಪರಾಧಗಳಲ್ಲಿ ವರ್ಷಕ್ಕೆ ಸರಾಸರಿ | 33,956ರಂತೆ ಪ್ರಕರಣಗಳು ದಾಖಲಾಗಿವೆ |
| ಪ.ಜಾ/ಪ.ಪಂಗಡಗಳವರ ಮೇಲೆಸಗಿದ ಅಪರಾಧಗಳಲ್ಲಿ ದಿನಕ್ಕೆ ಸರಾಸರಿ | 93ರಂತೆ ಪ್ರಕರಣಗಳು ದಾಖಲಾಗಿವೆ |

- ಪರಿಶಿಷ್ಟ ಜಾತಿಯವರ ಮೇಲೆ ಪರಿಶಿಷ್ಟ ಪಂಗಡಗಳವರಿಗಿಂತ ಹೆಚ್ಚು ಅಪರಾಧಗಳಾಗಿ ಪ್ರಕರಣಗಳು ದಾಖಲಾಗಿವೆ. ಇದಕ್ಕೆ ಕಾರಣ ಪರಿಶಿಷ್ಟ ಜಾತಿಯವರ ಹೆಚ್ಚು ಜನಸಂಖ್ಯೆ, ಪ್ರಬಲ ಜಾತಿಯವರೊಡನೆ ಅವರಿಗಿರುವ ಹೆಚ್ಚಿನ ಸಂಪರ್ಕ ಮತ್ತು ಪರಿಶಿಷ್ಟ ಪಂಗಡಗಳವರ ಮೇಲಿನ ದೌರ್ಜನ್ಯಗಳಲ್ಲಿ ಬಹುತೇಕ ವರದಿಯಾಗುವುದಿಲ್ಲ.
- **1995–2007ರ ಅವಧಿಯಲ್ಲಿ ಪರಿಶಿಷ್ಟರ ಮೇಲೆಸಗಿದ ಅಪರಾಧ ಪ್ರಕರಣಗಳು ದಾಖಲಾಗುವುದು ಕಡಿಮೆಯಾಗಿದ್ದರೂ, ಗಣನೀಯ ಪ್ರಮಾಣದಲ್ಲಿ ಕಡಿಮೆಯಾಗಿಲ್ಲ.** *(ರಾಷ್ಟ್ರೀಯ ಅಪರಾಧ ದಾಖಲೆಗಳ ಬ್ಯೂರೋ, ಭಾರತದಲ್ಲಿ ಅಪರಾಧಗಳು 1995–2007, ನವದೆಹಲಿ. 1996–2008)*

**10 ರಾಜ್ಯಗಳಲ್ಲಿ ದೇಶದ 69%ರಷ್ಟು ಪರಿಶಿಷ್ಟರು ವಾಸಿಸುತ್ತಿದ್ದಾರೆ,**

**ಇವರ ಮೇಲೆ 1996–2007 ಅವದಿಗೆ, 90%ಕ್ಕಿಂತ ಹೆಚ್ಚು ತೀವ್ರಸ್ವರೂಪದ ದೌರ್ಜನ್ಯಗಳು ಆಗಿವೆ.**

ಪ.ಜಾ/ಪಂ ವಿರುದ್ಧ ಒಟ್ಟು ಅಪರಾಧಗಳ 66.9%

| ರಾಜ್ಯ | ಪ.ಜಾ./.ಪ.ಪಂ ಜನರ ಮೇಲೆ ಒಟ್ಟು ಅಪರಾಧಗಳು | ರಾಜ್ಯಕ್ಕೆ ರ್‍ಯಾಂಕ್ |
|---|---|---|
| ಉತ್ತರ ಪ್ರದೇಶ | 95,319 | 1 |
| ಮಧ್ಯ ಪ್ರದೇಶ | 81.941 | 2 |
| ರಾಜಸ್ಥಾನ | 78.782 | 3 |
| ಆಂದ್ರ ಪ್ರದೇಶ | 39,286 | 4 |

*(ಎನ್‌ಸಿಆರ್‌ಬಿ, ಭಾರತದಲ್ಲಿ ಅಪರಾಧಗಳು 1995–2007) ನವದೆಹಲಿ, 1996–2008)*

| ರಾಜ್ಯ | ಪ.ಜಾ./.ಪ.ಪಂ ಜನರ ಮೇಲೆ ಒಟ್ಟು ಅಪರಾಧಗಳು | ರಾಜ್ಯಕ್ಕೆ ರ್‍ಯಾಂಕ್ |
|---|---|---|
| ಗುಜಾರತ್ | 22,820 | 5 |
| ಕರ್ನಾಟಕ | 21,362 | 6 |
| ತಮಿಳುನಾಡು | 20,063 | 7 |
| ಬಿಹಾರ | 19,682 | 8 |
| ಒರಿಸ್ಸಾ | 18,232 | 9 |
| ಮಹಾರಾಷ್ಟ್ರ | 14,630 | 10 |

ಪ.ಜಾ./ ಪಂ ವಿರುದ್ಧ ಒಟ್ಟು ಅಪರಾಧಗಳ 26.5%

**1996–97ರಲ್ಲಿ: "ದೌರ್ಜನ್ಯ ತಗ್ಗಿಲ್ಲ"**

"...ಪರಿಶಿಷ್ಟರ ರಕ್ಷಣೆಗೆ ದೌರ್ಜನ್ಯ ತಡೆ ಕಾಯ್ದೆ ಹಾಗೂ ಹಲವಾರು ಕಾಯ್ದೆಗಳಿವೆ. ಆದರೂ, ಪರಿಶಿಷ್ಟ ಜಾತಿ ಮತ್ತು ಪಂಗಡಗಳವರ ಮೇಲೆ ಆಗುವ ದೌರ್ಜನ್ಯಗಳು ಕಡಿಮೆ ಆಗಲಿಲ್ಲ. ಪರಿಶಿಷ್ಟ ಜಾತಿ/ಪಂಗಡಗಳ (ದೌರ್ಜನ್ಯ ತಡೆ) ಕಾಯ್ದೆ ಮತ್ತು ನಿಯಮಗಳಲ್ಲಿರುವ ಪ್ರತಿಬಂಧಕ ಕ್ರಮಗಳನ್ನು ಹೆಚ್ಚಿಸುವ ಅಗತ್ಯವಿದೆ". *(ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ರಾಷ್ಟ್ರೀಯ ಆಯೋಗ, ನಾಲ್ಕನೇ ವರದಿ 1996–97 ಮತ್ತು 1997–98, ನವದೆಹಲಿ, 1998, ಪ್ಯಾರಾ 9.22)*

**2006–07 ರಲ್ಲಿ: "ದೌರ್ಜನ್ಯ ತಗ್ಗಿಲ್ಲ"**

"ಕೇಂದ್ರ ಗೃಹ–ಸಚಿವಾಲಯದ ಕಾರ್ಯದರ್ಶಿ, ಸಾಕ್ಷಿಯಲ್ಲಿ ನೀಡಿರುವ ಹೇಳಿಕೆ: ಸ್ವಾತಂತ್ರ ಪಡೆದು ಅರ್ಧ ಶತಮಾನವಾಗಿದೆ, ಆದರೂ ಪರಿಶಿಷ್ಟ ಜಾತಿ ಮತ್ತು ಪಂಗಡಗಳವರ ಮೇಲೆ ದೌರ್ಜನ್ಯಗಳು ಕಡಿಮೆಯಾಗಿಲ್ಲ. ಸಮಿತಿಯೂ ಇದನ್ನು ಗುರುತಿಸುತ್ತದೆ. *(ಪರಿಶಿಷ್ಟ ಜಾತಿ ಮತ್ತು ಪಂಗಡಗಳವರ ಕಲ್ಯಾಣಕ್ಕಾಗಿ ಸಂಸತ್ತು ಸಮಿತಿ, 14ನೇ ವರದಿಯಲ್ಲಿ 2006–07, ನವದೆಹಲಿ, 2006, ಪುಟ. 10)*

**ಪರಿಶಿಷ್ಟ ಜಾತಿ ಮತ್ತು ಪಂಗಡಗಳವರ ಮೇಲಿನ ದೌರ್ಜನ್ಯಗಳಲ್ಲಿ ಕೇವಲ ಮೂರನೇ ಒಂದು ಭಾಗ ಪ್ರಕರಣಗಳು ದೌರ್ಜನ್ಯ ಕಾಯ್ದೆಯಡಿ ದಾಖಲಾಗಿವೆ ಎಂಬುದು ಸತ್ಯಾಂಶ. ಇದರಿಂದ ಪ್ರಕರಣಗಳು ದಾಖಲೆಗೊಳ್ಳುವ ಪ್ರಕ್ರಿಯೆ ಸೂಕ್ಷ್ಮವಾಗಿ ಮೇಲ್ವಿಚಾರಣೆಯಾಗಬೇಕು ಹಾಗೂ ಪೋಲೀಸರು ಕಾಯ್ದೆಯನ್ನು ಕಡ್ಡಾಯವಾಗಿ ಅನುಷ್ಠಾನ ಮಾಡುವುದನ್ನು ಖಾತ್ರಿ ಮಾಡಿಕೊಳ್ಳಬೇಕು ಎಂಬುದು ತಿಳಿಯುತ್ತದೆ, ಅಲ್ಲವೇ? ಅಂಕಿ ಅಂಶಗಳನ್ನು ನೋಡಿದರೆ ಕಾಯ್ದೆಯ ಉದ್ದೇಶಗಳಿಗೆ ವ್ಯತಿರಿಕ್ತವಾಗಿ ಪರಿಶಿಷ್ಟರ ಮೇಲೆ ಹೆಚ್ಚಿನ ದೌರ್ಜನ್ಯವಾಗುತ್ತಿದೆ ಎಂದು ತಿಳಿಯುತ್ತದೆ, ಅಲ್ಲವೇ?**

***ಪರಿಶಿಷ್ಟರ ಮೇಲೆ ದೌರ್ಜನ್ಯಗಳು ಕಡಿಮೆಯಾಗುತ್ತಿವೆ ಎಂಬುದಾಗಿ ಹೇಳುತ್ತಾರೆ. ಆದರೆ ಸರ್ಕಾರದ ಅಂಕಿ ಅಂಶಗಳೇ ಇದು ಸುಳ್ಳು ಎಂದು ಸಾರುತ್ತವೆ. ಹಾಗಿರುವಾಗ, ಗಣರಾಜ್ಯ ಕ್ಷಣವನ್ನೂ ವ್ಯರ್ಥಗೊಳಿಸದೆ ಕ್ರಮ ಕೈಗೊಳ್ಳಬೇಕು. ಇಲ್ಲವಾದಲ್ಲಿ ಮತ್ತೊಂದು ಸಮಿತಿ ರಚನೆಯಾಗುತ್ತದೆ, ಅವರೂ ಮುಂದಕ್ಕೆ ಅದೇ ರಾಗ ಅದೇ ಹಾಡು ಹಾಡುತ್ತಾರೆ, ಅಲ್ಲವೇ?***

**2. ಹೆಚ್ಚು ಪ್ರಕರಣಗಳು ವರದಿಗೊಳ್ಳುವುದೇ ಇಲ್ಲ!**

- " ಪರಿಶಿಷ್ಟರ ಮೇಲೆ ಆಗುವ ದೌರ್ಜನ್ಯಗಳ ಕುರಿತು ಸರ್ಕಾರದ ಅಂಕಿ ಅಂಶಗಳು ಸತ್ಯಾಂಶವಲ್ಲ. ಇದು ಕೇವಲ ರಾಜ್ಯ/ಕೇಂದ್ರಾಡಳಿತ ಪ್ರದೇಶಗಳು ಕಲ್ಯಾಣ ಸಚಿವಾಲಯಕ್ಕೆ ನೀಡುವ ಅಂಕಿ ಅಂಶಗಳು. ವಾಸ್ತವವಾಗಿ ದೌರ್ಜನ್ಯಗಳ ಸಂಖ್ಯೆ ಹೆಚ್ಚೇ ಇರಬಹುದು... ಉದಾಹರಣೆಗೆ 1992ಸಾಲಿಗೆ ದೆಹಲಿಯಲ್ಲಿ ಕೇವಲ 2 ಪ್ರಕರಣಗಳು ಮಾತ್ರ ವರದಿಯಾಗಿವೆ, ಆದರೆ, ಆಯೋಗವೇ ಈ ಸಾಲಿನಲ್ಲಿ 5 ಪ್ರಕರಣಗಳನ್ನು ನಿಭಾಯಿಸಿದೆ." *(ಪರಿಶಿಷ್ಟ ಜಾತಿ ಮತ್ತು ಪಂಗಡಗಳ, ರಾಷ್ಟ್ರೀಯ ಆಯೋಗ, 2ನೇ ವರದಿ 1993–94, ನವದೆಹಲಿ, 1996 ಪ್ಯಾರಾ 5.15)*

***ಪರಿಶಿಷ್ಟರ ಮೇಲಿನ ದೌರ್ಜನ್ಯಗಳು ವರದಿಯಾಗುವುದು ಕಡಿಮೆ, ಏಕೆ?***

i. ದೌರ್ಜನ್ಯ ಎಸಗುವವರು ಪ್ರಬಲ ಜಾತಿಯವರು ಮತ್ತು ಶ್ರೀಮಂತರು. ಇವರ ವಿರುದ್ಧ ಕೇಸು ದಾಖಲಿಸುವ ಚೈತನ್ಯ ದೌರ್ಜನ್ಯಕ್ಕೊಳಗಾದವರಲ್ಲಿ ಇರುವುದಿಲ್ಲ. ಅವರು ಬಲಹೀನರಾಗಿದ್ದಾರೆ.

ii. ದೌರ್ಜನ್ಯ ಆದ ಮೇಲೆ ರಾಜಿಯಾಗಲು ಅಥವಾ ಕೇಸು ದಾಖಲಿಸದೇ ಇರಲು ಸ್ಥಳೀಯರು ಒತ್ತಡ ಹೇರುತ್ತಾರೆ.

iii. ದೌರ್ಜನ್ಯ ಪ್ರಕರಣ ದಾಖಲಿಸಲು ಪೋಲಿಸರಲ್ಲಿರುವ ಹಠಮಾರಿತನ

iv. ಪೋಲೀಸರಲ್ಲಿರುವ ಜಾತಿ ಮತ್ತು ಭ್ರಷ್ಟಾಚಾರದ ಮನೋಭಾವನೆ ಕೇಸು ದಾಖಲಿಸದಂತೆ ಮಾಡುತ್ತದೆ.

v. ಪೋಲೀಸ್ ಠಾಣೆಯಲ್ಲಿ ಅಪರಾಧ ಪ್ರಕರಣಗಳು ಕಡಿಮೆ ಇರಬೇಕು ಎನ್ನುವ ಪೋಲೀಸರ ಮೇಲಿನ ಒತ್ತಡ.

vi. ಪೋಲೀಸ್ ತನಿಖೆಯಲ್ಲಿ ವಿಳಂಬ ಮತ್ತು ಶಿಕ್ಷೆಯಾಗುವುದೂ ಕಡಿಮೆ. ಕೇಸು ಮಾಡುವುದರಿಂದ ನ್ಯಾಯ ದೊರಕುತ್ತದೆ ಎಂಬ ನಂಬಿಕೆ ಜನರಿಗೆ ಇಲ್ಲವಾಗಿದೆ.

vii. ಪರಿಶಿಷ್ಟ ಜಾತಿ ಮತ್ತು ಪಂಗಡಗಳವರಿಗೆ ದೌರ್ಜನ್ಯ ತಡೆ ಕಾಯ್ದೆ ಇದೆ ಎಂಬ ಜಾಗೃತಿ ಇಲ್ಲ.

*((1) ರಾಜ್ಯಪಾಲರುಗಳ ಸಮಿತಿ, ಪರಿಶಿಷ್ಟ ಜಾತಿ ಮತ್ತು ಪಂಗಡಗಳವರ ಕಲ್ಯಾಣ ಮತ್ತು ಹಕ್ಕುಗಳಿಗೆ ಸಂಬಂಧ ವರದಿ, ನವ ದೆಹಲಿ, 2001, ಪುಟ 68; (2) ಪರಿಶಿಷ್ಟ ಜಾತಿಗಳ ರಾಷ್ಟ್ರೀಯ ಆಯೋಗ, ಮೊದಲ ವರದಿ 2004–05, ನವ ದೆಹಲಿ, 2006, ಮುನ್ನುಡಿ II; (3) ಮಾನವ ಹಕ್ಕುಗಳ ರಾಷ್ಟ್ರೀಯ ಆಯೋಗ, ಪರಿಶಿಷ್ಟ ಜಾತಿಯವರ ವಿರುದ್ಧ ದೌರ್ಜನ್ಯ ತಡೆ ವರದಿ, ನವ ದೆಹಲಿ, 2004, ಪುಟ 33)*

- ನಾಲ್ಕು ರಾಜ್ಯಗಳಲ್ಲಿ ದಲಿತ ಮಹಿಳೆಯರ ಮೇಲೆ ಹಿಂಸಾಚಾರದ 500 ಪ್ರಕರಣಗಳನ್ನು ಅಧ್ಯಯನ ಮಾಡಿದೆವು. ಬಹುತೇಕ ಹಿಂಸಾಚಾರದ ಪ್ರಕರಣಗಳಲ್ಲಿ ಘಟನೆಯ ಕುರಿತು ಮಹಿಳೆಯರೇ ಮುಕ್ತವಾಗಿ ಮಾತನಾಡುವುದಿಲ್ಲ, ಮಾಧ್ಯಮದಲ್ಲಿ ವರದಿ ಆಗುವುದಿಲ್ಲ, ಪೋಲೀಸ್ ಠಾಣೆ ಮತ್ತು ಕೋರ್ಟುಗಳಲ್ಲಿ ಕೇಸು ದಾಖಲಾಗುವುದಿಲ್ಲ, ಅಥವಾ ಅವರ ಕುಟುಂಬದವರು, ಸಂಬಂಧಿಗಳು ಮತ್ತು ಸಮುದಾಯದವರು ಪ್ರಕರಣಗಳನ್ನು ಮುಚ್ಚಿ ಹಾಕುತ್ತಾರೆ ಅಥವಾ ದುಷ್ಕರ್ಮಿಗಳ ಮತ್ತು ಅವರ ಸಮುದಾಯದ ಬೆದರಿಕೆಯಿಂದ ಸತ್ಯ ಹೊರಬೀಳುವುದಿಲ್ಲ.

ಇದರಿಂದಾಗಿ, **ದಲಿತ ಮಹಿಳೆಯರ ಮೇಲಿನ ಹಿಂಸಾಚಾರದಲ್ಲಿ ಹಿಂಸೆ, ಮೌನ ಮತ್ತು ನಿರ್ಭೀತಿಯ ಸಂಸ್ಕೃತಿ ಸೃಷ್ಟಿಯಾಗಿದೆ, ಇದು ಮುಂದುವರಿಯುತ್ತಲಿದೆ".** *(ಅಲಾಸಿಯಸ್ ಇರುದಯಂ ಮತ್ತಿತರರು, ದಲಿತ ಮಹಿಳೆಯರು ಬಾಯಿ ಬಿಟ್ಟರು(ದಲಿತ್ ವುಮೆನ್ ಸ್ಪೀಕ್ ಔಟ್): ಭಾರತದಲ್ಲಿ ದಲಿತ ಮಹಿಳೆಯರ ವಿರುದ್ಧ ಹಿಂಸೆ, ಚೆನ್ನೈ, ಐಡಿಇಎಎಸ್, ಎನ್‌ಸಿಡಿಹೆಚ್‌ಆರ್ ಮತ್ತು ಎನ್‌ಎಫ್‌ಡಿಡಬ್ಲ್ಯು, 2006, ಪುಟ 106)*

***⇒ ದೌರ್ಜನ್ಯಗಳು ವರದಿಗೊಳ್ಳುತ್ತಿಲ್ಲ ಎಂದು ಅಧಿಕೃತವಾಗಿ ಒಪ್ಪಿಕೊಂಡ ಮಾತ್ರಕ್ಕೆ, ರಾಜ್ಯದ ಕರ್ತವ್ಯ ಸಂವಿಧಾನದ ಅನುಚ್ಛೇದ 46ರಂತೆ ಮುಗಿಯುವುದಿಲ್ಲ. ಬದಲಿಗೆ, ಪರಿಶಿಷ್ಟರ ಮೇಲೆ ಆಗುವ ದೌರ್ಜನ್ಯಗಳನ್ನು ದಾಖಲಿಸಲು ಅಥವಾ ವರದಿ ಮಾಡಲು ವಿಫಲರಾಗುವ ಪೋಲೀಸ್ ಅಧಿಕಾರಿಗಳಲ್ಲಿ ಶಿಸ್ತು ಮೂಡಿಸಲು, ಜಾತಿ, ಜನಾಂಗ ತಾರತಮ್ಯ ಮತ್ತು ಹಿಂಸಾಚಾರದ ವಿರುದ್ಧ ಗಣರಾಜ್ಯ ಕ್ರಮ ಕೈಗೊಳ್ಳಬೇಕೆಂದು ಸಂವಿಧಾನ ಬಯಸುತ್ತದೆ, ಅಲ್ಲವೇ?***

**"ಪರಿಶಿಷ್ಟರ ಮತ್ತಿತರ ಬಲಹೀನ ವರ್ಗದವರ ರಕ್ಷಣೆಗೆ ಸಂವಿಧಾನ ಮತ್ತು ಕಾನೂನುಗಳು ರಕ್ಷಣೆಯನ್ನು ಸಾರುತ್ತವೆ. ಆದರೂ, ಅವರ ಮೇಲೆ ಶೋಷಣೆ ಮತ್ತು ಸಾಮಾಜಿಕ ಅನ್ಯಾಯ ಮುಂದುವರಿದಿದೆ. ಇದು ದುರಾದೃಷ್ಟ ಮತ್ತು ಸತ್ಯಾಂಶ. ಇವರ ಮೇಲೆ ದೌರ್ಜನ್ಯ ಆಗುತ್ತಿರುವುದನ್ನು ಮಾಧ್ಯಮಗಳು ವರದಿ ಮಾಡುತ್ತಿರುವುದು ಮತ್ತಷ್ಟು ಆತಂಕದ ವಿಷಯ. ದೇಶ ಗಣರಾಜ್ಯ ಎಂದು ಘೋಷಣೆಯಾಗಿ ಅರ್ಧ ಶತಮಾನವಾಗಿದೆ, ಆದರೂ ಪರಿಶಿಷ್ಟರು ಕಷ್ಟ ಅನುಭವಿಸುವುದು ನಾಚಿಕೆಯ ಸಂಗತಿ".**

*ನ್ಯಾಯ ಮೂರ್ತಿ ಎ.ಎಸ್. ಆನಂದ್, ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ ವರದಿ ಪರಿಶಿಷ್ಟ ಜಾತಿಯ ವಿರುದ್ಧ ದೌರ್ಜನ್ಯ ತಡೆ ವರದಿಯ ಮುನ್ನುಡಿಯಲ್ಲಿ. ನವದೆಹಲಿ, 2002, ಪುಟ vii*

### 3. ಇನ್ನೂ ನಡೆಯುತ್ತಿರುವ ಗಂಭೀರ–ಸ್ವರೂಪದ ದೌರ್ಜನ್ಯಗಳು

**1995–2007ರ ಅವಧಿಯಲ್ಲಿ ಪರಿಶಿಷ್ಟರ ಮೇಲೆ ಆದ ದೌರ್ಜನ್ಯಗಳಲ್ಲಿ 4,41,424 ದಾಖಲಾಗಿವೆ, ಅವುಗಳು ಹೀಗಿವೆ:**

- 9,593 ಕೊಲೆ
- 61,168 ಗಾಯ ಅಥವಾ ಗಂಭೀರ–ಸ್ವರೂಪದ ಗಾಯಗಳು
- 20,865 ಅತ್ಯಾಚಾರ
- 4,699 ಮನೆ/ಗುಡಿಸಲುಗಳನ್ನು ಸುಟ್ಟಿರುವ ಪ್ರಕರಣಗಳು
- 4,484 ಅಪಹರಣ
- 10,512 'ಅಸ್ಪೃಶ್ಯತೆ'

*(ಎನ್‌ಸಿಆರ್‌ಬಿ, ಭಾರತದಲ್ಲಿ ಅಪರಾಧಗಳು 1995–2007, ನವದೆಹಲಿ, 1996–2008)*

2007–08ರಲ್ಲಿ ಒಂಭತ್ತು ರಾಜ್ಯಗಳ(ಆಂದ್ರ ಪ್ರದೇಶ, ಬಿಹಾರ, ಗುಜರಾತ್, ಮಹಾರಾಷ್ಟ್ರ, ಒರಿಸ್ಸಾ, ಪಂಜಾಬ್, ರಾಜಸ್ಥಾನ್, ತಮಿಳುನಾಡು ಮತ್ತು ಉತ್ತರ ಪ್ರದೇಶ) 57 ಜಿಲ್ಲೆಗಳಲ್ಲಿ ಪರಿಶಿಷ್ಟರ ಮೇಲಿನ 1041 ದೌರ್ಜನ್ಯದ ಪ್ರಕರಣಗಳನ್ನು ಅಧ್ಯಯನ ಮಾಡಲಾಯಿತು. ಅವುಗಳು:

i. ಜಾತಿ ನಿಂದನೆ: 172 ಪಕರಣಗಳು (18%)
ii. ಗಂಭೀರ–ಸ್ವರೂಪದ ಗಾಯ: 158 ಪ್ರಕರಣಗಳು (17%)
iii. ಕೊಲೆ: 105 ಪ್ರಕರಣಗಳು (11%)
iv. ಅತ್ಯಾಚಾರ: 101 ಪ್ರಕರಣಗಳು (11%)
v. ಗಾಯ: 75 ಪ್ರಕರಣಗಳು (8%)

*(ಐಐಡಿಹೆಚ್‌ಆರ್ ವರದಿ–ಭಾರತದಲ್ಲಿ ಪರಿಶಿಷ್ಟ ಜಾತಿಯವರ ಹಕ್ಕುಗಳಲ್ಲಿ ಸಮಾನತೆ ತರಲು ಮತ್ತು ಸಾಕಾರಗೊಳಿಸಲು ನಾಗರಿಕ ಸಂಸ್ಥೆಗಳ ಸ್ಪಂದನೆ, 2007–08– ಕ್ರಿಶ್ಚಿಯನ್ ಏಡ್ ಕಾರ್ಯಕ್ರಮ.)*

| *ವ್ಯಕ್ತಿ–ಘನತೆಗೆ ಅಪಮಾನ* | *ಸಾಮೂಹಿಕ ಹಿಂಸೆ* |
|---|---|
| ಇತ್ತೀಚಿಗೆ ಮಾನವ ಘನತೆ ಉಲ್ಲಂಘನೆಯ ದೌರ್ಜನ್ಯಗಳು ಹೆಚ್ಚುತ್ತಿದ್ದು ಅವು ಹೀಗಿವೆ:<br>• ಪರಿಶಿಷ್ಟ ಮಹಿಳೆಯರ ಬೆತ್ತಲೆ<br>• ಪರಿಶಿಷ್ಟರಿಗೆ ಬಲತ್ಕರಿಸಿ ಮಲ–ಮೂತ್ರ ತಿನ್ನಿಸುವುದು<br>• ಪರಿಶಿಷ್ಟರ ಮುಖಕ್ಕೆ ಮಸಿ ಬಳಿಯುವುದು<br>• ಅವರ ತಲೆ ಬೋಳಿಸುವುದು<br>• ಗ್ರಾಮದ ಕೇರಿಗಳಲ್ಲಿ ಮೆರವಣಿಗೆ<br>*(ಪರಿಶಿಷ್ಟ ಜಾತಿ ಮತ್ತು ಪಂಗಡಗಳ ರಾಷ್ಟ್ರೀಯ ಆಯೋಗದ ಎರಡನೇ ವರದಿ 1993–94, ನವದೆಹಲಿ, 1996, ಪ್ಯಾರಾ 7.33)* | ಕೆಳಕಂಡ ಕಾರಣಗಳಿಗೆ ಪರಿಶಿಷ್ಟರನ್ನು ವ್ಯಕ್ತಿಗತವಾಗಿ ಅವಮಾನಕ್ಕೊಳಪಡಿಸುವ, ಅವಹೇಳನ ಮಾಡುವ ಮತ್ತು ಅವರ ಮೇಲೆ ಸಂಘಟಿತವಾಗಿ ಸಾಮೂಹಿಕ ಹಿಂಸೆ ಮಾಡುವ ಘಟನೆಗಳು ಹೆಚ್ಚಾಗಿವೆ:<br>• ಭೂ ಸುಧಾರಣೆ<br>• ರಾಜಕೀಯ ಗುಂಪುಗಾರಿಕೆ<br>• ಸರ್ಕಾರಿ ನೌಕರಿಗಳಲ್ಲಿ ಪಾಲು ದೊರೆಯುತ್ತಿರುವ ಕಾರಣ<br>"ಇಂತಹ ಪ್ರಕರಣಗಳಲ್ಲಿ, ಸಾಮೂಹಿಕವಾಗಿ ಶಿಕ್ಷೆ ಮತ್ತು ದಂಡ ವಿಧಿಸುವುದರಿಂದ ಹೆಚ್ಚು ಪ್ರಬಲ ಮತ್ತು ಪರಿಣಾಮಕಾರಿಯಾಗಿ ಪ್ರತಿಬಂಧಿಸಬಹುದು."<br>*(ಪರಿಶಿಷ್ಟ ಜಾತಿ ಮತ್ತು ಪಂಗಡಗಳ ರಾಷ್ಟ್ರೀಯ ಆಯೋಗ, ಪರಿಶಿಷ್ಟರ ವಿರುದ್ಧ ದೌರ್ಜನ್ಯ: ಕಾರಣ ಮತ್ತು ಪರಿಹಾರ, ನವದೆಹಲಿ, 1990, ಪುಟ 36)* |

ಬಿಹಾರ ಸರ್ಕಾರವು ರಣವೀರ್ ಸೇನೆಯನ್ನು ನಿಷೇಧಿಸಿದೆ. ಆದರೂ, ಪ್ರಬಲರ ಈ ಖಾಸಗಿ ಸೇನೆ 1995–1999ರ ಅವಧಿಯಲ್ಲಿ ಸುಮಾರು 200 ಪರಿಶಿಷ್ಟರನ್ನು ಹತ್ಯೆ ಮಾಡಿದೆಯೆಂದು ಮಾಧ್ಯಮದಲ್ಲಿ ವರದಿಯಾಗಿದೆ *(ಫ್ರಂಟ್‌ಲೈನ್, ಸಂಪುಟ 16, ಸಂಖ್ಯೆ 5, 1999)*

**ಚುನಾವಣೆಯಲ್ಲಿ ಉಂಟಾದ ಹಿಂಸೆ ಪ್ರಕರಣಗಳು (ದೌರ್ಜನ್ಯ ತಡೆ ಕಾಯ್ದೆ, ಸೆಕ್ಷನ್3(1)(vii) ಅಡಿಯಲ್ಲಿ):**

NCDHR–ಚುನಾವಣೆಯಲ್ಲಿ ಪರಿಶಿಷ್ಟರ ರಾಷ್ಟ್ರೀಯ ಕಣ್ಗಾವಲುಪಡೆ, 2009ರ ಲೋಕಸಭೆ ಚುನಾವಣೆಯಲ್ಲಿ 264 ಕ್ಷೇತ್ರಗಳಿಂದ 490 ಪ್ರಕರಣಗಳನ್ನು ದಾಖಲಿಸಿದೆ:

| | | | |
|---|---|---|---|
| i. | ಪ್ರಬಲರಿಂದ ಭೀತಿ, ಬೆದರಿಕೆ, ಹಿಂಸೆ: | 157 ಪ್ರಕರಣಗಳು | (32%) |
| ii. | ಪರಿಶಿಷ್ಟರು ಮತದಾನ ಮಾಡದಿರುವಂತೆ ತಡೆಯಲು ಭೀತಿ, ಬೆದರಿಕೆ, ಹಿಂಸೆ (ರಾಜಕೀಯ ಪಕ್ಷಗಳು, ಪ್ರಧಾನರು, ಇನ್ನಿತರರಿಂದ): | 108 ಪ್ರಕರಣಗಳು | (22%) |
| iii. | ಪೋಲಿಸ್ ಮತ್ತು ಪೋಲಿಂಗ್ ಏಜೆಂಟರ ಹಿಂಸೆ, ಭೀತಿ: | 8 ಪ್ರಕರಣಗಳು | (1.6%) |
| iv. | ಮತಪಟ್ಟಿಯಲ್ಲಿ ಹೆಸರಿಲ್ಲದಿರುವುದು, ಚುನಾವಣೆ ಅಥವಾ ಕೆಲಸದ ಗುರುತಿನ ಚೀಟಿ ಕೊರತೆ: | 94 ಪ್ರಕರಣಗಳು | (19.2%) |
| v. | ಪರಿಶಿಷ್ಟರ ಬದಲಿಗೆ ಪ್ರಾಕ್ಸಿ ವೋಟ್: | 26 ಪ್ರಕರಣಗಳು | (5.3%) |
| vi. | ಹಣ, ಹೆಂಡ, ಪ್ರಯಾಣ ಸೌಲಭ್ಯದಿಂದ ಪರಿಶಿಷ್ಟರ ಮೇಲೆ ಪ್ರಭಾವ: | 51 ಪ್ರಕರಣಗಳು | (10.4%) |
| vii. | ಪೋಲಿಂಗ್ ಬೂತ್‌ಗಳಲ್ಲಿ, ಗುರುತಿನ ಚೀಟಿಗೆ ಮಾನ್ಯತೆ ಇಲ್ಲ, ಅವಧಿಗೆ ಮೊದಲು ಪೋಲಿಂಗ್ ಮುಗಿದಿರುವ, ಮತಯಂತ್ರಗಳ ನಿಷ್ಕ್ರಿಯತೆ, ಇತ್ಯಾದಿ: | 43 ಪ್ರಕರಣಗಳು | (8.8%) |

*(ದಲಿತ ಚುನಾವಣೆ ಕಾವಲು, ಪರಿಶಿಷ್ಟರು ಮತ್ತು ಚುನಾವಣೆ ಹಕ್ಕುಗಳು, ನವದೆಹಲಿ: ಎನ್‌ಸಿಡಿಹೆಚ್‌ಆರ್–ಎನ್‌ಡಿಎಂಜೆ, 2009, ಪ್ಯಾರಾ 11)*

**⇒ ಚುನಾವಣೆಯಲ್ಲಿ ಪರಿಶಿಷ್ಟರಿಗೆ ಮತದಾನದ ಹಕ್ಕು ನಿರಾಕರಿಸುವುದು ಅಥವಾ ಅವರನ್ನು ನಿಯಂತ್ರಿಸಲು ದೌರ್ಜನ್ಯಗಳಾದರೆ ಪ್ರಜಾಪ್ರಭುತ್ವಕ್ಕೆ ಏನರ್ಥವಿದೆ?**

***ರಾಜಸ್ಥಾನ ರಾಜ್ಯದಲ್ಲಿ ಪರಿಶಿಷ್ಟರ ಮೇಲಾದ 2,307 ದೌರ್ಜನ್ಯ ಪ್ರಕರಣಗಳಲ್ಲಿ(2007–08):***

- ಅಸ್ಪೃಶ್ಯತೆ (24.7%)
- ಜಮೀನು ವ್ಯಾಜ್ಯ (18.8%)
- ಮಹಿಳೆಯರಿಗೆ ಹಿಂಸೆ (14.8%)
- ಸಾಮೂಹಿಕ ಹಿಂಸೆ (13.0%)
- 2008ರ ಚುನಾವಣೆ ಹಿಂಸೆ (181 ಪ್ರಕರಣಗಳು)

*ದಲಿತ ಮಾನವ ಹಕ್ಕುಗಳ ಅಂಕಿ ಅಂಶಗಳ ಕೇಂದ್ರ, ರಾಜಸ್ಥಾನ, 2007–08*

***ಆಂಧ್ರಪ್ರದೇಶದಲ್ಲಿ ರಾಜ್ಯದಲ್ಲಿ ಪರಿಶಿಷ್ಟರ ಮೇಲಾದ 3,107 ದೌರ್ಜನ್ಯ ಪ್ರಕರಣಗಳಲ್ಲಿ(1999–2008):***

- ಆಕ್ರಮಣ (27%)
- ಅಸ್ಪೃಶ್ಯತೆ (18.7%)
- ರಾಜ್ಯ ಪ್ರಾಧಿಕಾರಗಳಿಂದ ಜಾತಿ ಪಕ್ಷಪಾತ (13.3%)
- ವ್ಯಕ್ತಿಗತ ಮತ್ತು ಸಾಮೂಹಿಕ ಅತ್ಯಾಚಾರ (13.1%)
- ಕೊಲೆ (9.8%)

*(ಸಾಕ್ಷಿ ಮಾನವಹಕ್ಕುಗಳ ಕಣ್ಗಾವಲು–ಎ.ಪಿ. ಅಂಕಿ ಅಂಶಗಳು, ಸಿಕಂದರಾಬಾದ್, 1999–2008)*

***ಗುಜರಾತ್ ರಾಜ್ಯದ 26 ಜಿಲ್ಲೆಗಳಲ್ಲಿ 30–01–2001 ರಿಂದ 31–03–2008ರ ಅವಧಿಯಲ್ಲಿ ಪರಿಶಿಷ್ಟರ ಮೇಲೆ ಆದ 8,317 ದೌರ್ಜನ್ಯ ಪ್ರಕರಣಗಳಲ್ಲಿ:***

- ಸುಮಾರು 3/4ರಷ್ಟು ಜಾತಿ ನಿಂದನೆ, ಬೆದರಿಕೆ ಅಥವಾ ಅವಮಾನದ ಪ್ರಕರಣಗಳು
- 125 ಕೊಲೆ
- 213 ಅತ್ಯಾಚಾರ
- 578 ಗಂಭೀರ–ಸ್ವರೂಪ ಗಾಯದ ಪ್ರಕರಣಗಳು
- 771 ಪರಿಶಿಷ್ಟರನ್ನು ಬಲವಂತವಾಗಿ ಗ್ರಾಮ ಬಿಟ್ಟು ಹೋಗುವಂತೆ ಮಾಡಿದ ಪ್ರಕರಣಗಳು
- 212 ಪರಿಶಿಷ್ಟರು ಸಾಮಾಜಿಕ ಬಹಿಷ್ಕಾರವನ್ನು ಎದುರಿಸಿದರು

*ಸಮಾಜ ಕಲ್ಯಾಣ ಇಲಾಖೆಯ ನಿರ್ದೇಶಕರ ಪತ್ರ ಸಂಖ್ಯೆ. ಎಜೆಕೆ/ಸಿ–1/2008/2993, ಗುಜರಾತ್, ದಿನಾಂಕ (29–05–2008, ನವರಸನ್ ಟ್ರಸ್ಟ್, ಅಹಮದಾಬಾದ್, ಮಾಹಿತಿ ಹಕ್ಕು ಮೂಲಕ)*

***⇒ 21ನೇ ಶತಮಾನದಲ್ಲಿಯೂ ಪರಿಶಿಷ್ಟರನ್ನು ಬೆತ್ತಲೆಗೊಳಿಸಿ, ಮೆರವಣಿಗೆ ಮಾಡುವುದು ಘೋರ ಅಪಮಾನದ ಸಂಗತಿ. ಇದನ್ನು ಸಹಿಸುವುದು ಅಸಾಧ್ಯ ಹಾಗೂ ರಾಷ್ಟ್ರಕ್ಕೆ ನಾಚಿಕೆ ಎಂಬುದಾಗಿ ಒಕ್ಕೊರಲಿನಿಂದ ಮತ್ತು ಮುಕ್ತವಾಗಿ ದೇಶದ ಎಲ್ಲಾ ರಾಜಕಾರಣಿಗಳು ಮತ್ತು ನಾಗರಿಕರು ಒಪ್ಪಿಕೊಳ್ಳಬೇಕು, ಅಲ್ಲವೇ? ಪರಿಶಿಷ್ಟರ ಮೇಲೆ ಇಷ್ಟೊಂದು ಹೀನಾಯ ದೌರ್ಜನ್ಯಗಳಾಗುತ್ತಿರುವಾಗ ದೌರ್ಜನ್ಯ ತಡೆ ಕಾಯ್ದೆಯನ್ನು ಅನುಷ್ಠಾನಗೊಳಿಸಲು ಪ್ರಯತ್ನಗಳಾಗಬೇಕು, ಅಲ್ಲವೇ?***

## 4. ದೌರ್ಜನ್ಯಗಳೇಕೆ?

ಪರಿಶಿಷ್ಟ ಜಾತಿ ಮತ್ತು ಪಂಗಡಗಳ ರಾಷ್ಟ್ರೀಯ ಆಯೋಗದ ಅಭಿಪ್ರಾಯ: ಬಡವರು, ಪರಿಶಿಷ್ಟರು, ಪರಿಶಿಷ್ಟರಲ್ಲದ ಶ್ರೀಮಂತರ ಮೇಲೆ ಅವಲಂಬಿತರಾಗಿದ್ದಾರೆ. ಅಸ್ಪೃಶ್ಯತೆಯಿಂದ ಸೃಷ್ಟಿಯಾದ ಬೇಧಭಾವ, ಇವರನ್ನು ತುಳಿಯಬೇಕೆಂಬ ಹಳೆಯ ಪ್ರಚೋದನೆಗಳು ಪರಿಶಿಷ್ಟರನ್ನು ದೌರ್ಜನ್ಯಕ್ಕೆ ಬಲಿಗೊಡುತ್ತವೆ..."

1993–94ರ ಅವಧಿಗೆ ಕ್ಷುಲ್ಲಕ ಕಾರಣಗಳಿಗೆ ದೌರ್ಜನ್ಯಗಳಾದ 418 ಪ್ರಕರಣಗಳನ್ನು ಆಯೋಗ ನಿಭಾಯಿಸಿತು ಅವು ಹೀಗಿವೆ:

i. ಅಸ್ಪೃಶ್ಯತೆ ಮತ್ತು ಸಾಮಾಜಿಕ ಬಹಿಷ್ಕಾರ: 68 ಪ್ರಕರಣಗಳು (16.3%)
ii. ಆರ್ಥಿಕ ಕಾರಣಗಳು–ಜಮೀನು, ಹಣಕಾಸಿನ ವ್ಯವಹಾರ, ಕೂಲಿ, ಜೀತ ಪದ್ಧತಿ, ಇತ್ಯಾದಿ.: 87 ಪ್ರಕರಣಗಳು (20.8%)
iii. ಲೈಂಗಿಕ ಹಿಂಸೆ–ಅತ್ಯಾಚಾರ: 32 ಪ್ರಕರಣಗಳು (7.7%)

*(ಪರಿಶಿಷ್ಟ ಜಾತಿ ಮತ್ತು ಪಂಗಡಗಳ ರಾಷ್ಟ್ರೀಯ ಆಯೋಗ, ಎರಡನೇ ವರದಿ, ನವದೆಹಲಿ, 1996, ಪ್ಯಾರಾ 7.13)*

- ***ಪರಿಶಿಷ್ಟ ಜಾತಿ ಮತ್ತು ಪಂಗಡಗಳವರ ರಾಷ್ಟ್ರೀಯ ಆಯೋಗ:*** ಆದಿವಾಸಿ(ಪರಿಶಿಷ್ಟ ಪಂಗಡ)ಗಳ ಮೇಲಾದ ದೌರ್ಜನ್ಯಗಳ ಕುರಿತ ಅಧ್ಯಯನವೊಂದರಲ್ಲಿ, ದೌರ್ಜನ್ಯಗಳಿಗೆ ನೇರ ಕಾರಣ ಭೂಮಿಯ ಒಡೆತನವೆಂದು ನೇರವಾಗಿ ತಿಳಿಸುತ್ತದೆ: "ಆದಿವಾಸಿಗಳಲ್ಲದವರು ಆದಿವಾಸಿಗಳ ಭೂಮಿಯನ್ನು ಮೋಸದಿಂದ ಲಪಟಾಯಿಸುವುದು, ಸಾಲದ ಹೊರೆ, ಅರಣ್ಯಾಧಿಕಾರಿಗಳ ಜೊತೆ ಅಸಮಾಧಾನ ಪರಿಶಿಷ್ಟ ಪಂಗಡಗಳ ಮೇಲೆ ದೌರ್ಜನ್ಯಕ್ಕೆ ಕಾರಣ, ಇದರಿಂದಾಗಿ ಆದಿವಾಸಿಗಳ ಮೇಲೆ ದೌರ್ಜನ್ಯ ಭುಗಿಲೇಳುತ್ತದೆ." *(ಪರಿಶಿಷ್ಟ ಜಾತಿ ಮತ್ತು ಪಂಗಡಗಳ ರಾಷ್ಟ್ರೀಯ ಆಯೋಗ, ಪರಿಶಿಷ್ಟ ಜಾತಿ ಪಂಗಡಗಳ ಮೇಲೆ ದೌರ್ಜನ್ಯ: ಕಾರಣಗಳು ಮತ್ತು ಪರಿಹಾರ, ನವದೆಹಲಿ, 1990, ಪುಟ, ಪ್ಯಾರಾ. 9, 29)*

- ***ಪರಿಶಿಷ್ಟ ಪಂಗಡಗಳವರ ಭೂಮಿಯಲ್ಲಿ ಹಸ್ತಕ್ಷೇಪದ ನಿರ್ದಿಷ್ಟ ಪ್ರಕರಣಗಳು?*** "ಹಲವಾರು ರಾಜ್ಯಗಳಿಂದ ದೊರೆತಿರುವ ವರದಿಯಂತೆ ಆದಿವಾಸಿಗಳು ಭೂಮಿ ಕಳೆದುಕೊಂಡ 5.06 ಲಕ್ಷ ಪ್ರಕರಣಗಳು ದಾಖಲಾಗಿವೆ. ಕಳೆದುಕೊಂಡ ಭೂಮಿಯ ಪ್ರಮಾಣ 9.02 ಲಕ್ಷ ಎಕರೆ. ಈ ಪ್ರಕರಣಗಳಲ್ಲಿ 2.25 ಲಕ್ಷ ಪ್ರಕರಣಗಳು ಆದಿವಾಸಿಗಳ ಪರವಾಗಿ ತೀರ್ಪು ದೊರೆತಿದೆ.... ಹಲವು ಕಾರಣಗಳಿಗೆ 1.99 ಲಕ್ಷ ಪ್ರಕರಣಗಳು ಕೋರ್ಟಿನಲ್ಲಿ ಬಿದ್ದುಹೋಗಿವೆ." *(ಗ್ರಾಮೀಣಾಭಿವೃದ್ಧಿ ಸಚಿವಾಲಯ, ವಾರ್ಷಿಕ ವರದಿ 2007–08, ನವದೆಹಲಿ, 2009, ಪುಟ. 171)*

***ಕೋರ್ಟ್‌ಗಳಿಂದ ದೊರೆಯದ ಪರಿಹಾರ(ಆದಿವಾಸಿಗಳಿಗೆ)***

ಮಾನವ ಹಕ್ಕುಗಳ ಏಷಿಯಾ ಕೇಂದ್ರದ ಪ್ರಕಾರ 2007ರಲ್ಲಿ, ಅರಣ್ಯವಾಸಿಗಳನ್ನು ಒಳಗೊಂಡ ಸುಮಾರು 29,000 ಭೂವಿವಾದದ ಪ್ರಕರಣಗಳು ವರದಿಯಾಗಿದ್ದವು, ಆದರೆ ಒಂದು ಪ್ರಕರಣದಲ್ಲಿಯೂ ತೀರ್ಪು ಅರಣ್ಯವಾಸಿಗಳ ಪರವಾಗಿ ಬರಲಿಲ್ಲ. ಅಭಿವೃದ್ಧಿಯ, ಭದ್ರತೆ ಮತ್ತು ಸಂಘರ್ಷದ ನೆಪದಲ್ಲಿ ಅರಣ್ಯವಾಸಿಗಳು ತಮ್ಮ ಭೂಮಿಯನ್ನು ಕಳೆದುಕೊಳ್ಳುತ್ತಿದ್ದಾರೆ

*('ಹೈ ಅಂಡ್ ಡ್ರೈ', ಫ್ರಂಟ್‌ಲೈನ್, 4–12–2009, ಪುಟ23, ಪ್ಯಾರಾ 4)*

***ದೌರ್ಜನ್ಯಗಳ ವಿರುದ್ಧ ಪರಿಶಿಷ್ಟರ ಹೋರಾಟ***

'ಭೂವಿವಾದ, ಪರಭಾರೆ, ಬಲವಂತದ ಕೂಲಿ ಮತ್ತು ಕನಿಷ್ಟ ವೇತನ ನಿರಾಕರಣೆ, ಅಸ್ಪೃಶ್ಯತೆ ಮತ್ತು ಸಾಮಾಜಿಕವಾಗಿ ಅವರು ದುರ್ಬಲರು ಇರುವುದರಿಂದಾಗಿ ಪರಿಶಿಷ್ಟರ ಮೇಲೆ ದೌರ್ಜನ್ಯಗಳು ಹೆಚ್ಚುತ್ತಿವೆ... ಮೀಸಲಾತಿ ಸಹ ಇತರೆ ಸಮುದಾಯದವರ ಜೊತೆ ಶತ್ರುತ್ವಕ್ಕೆ ಕಾರಣವಾಗುತ್ತಿದೆ. ಪರಿಶಿಷ್ಟರಲ್ಲಿ ಹೆಚ್ಚುತ್ತಿರುವ ವಿದ್ಯಾಭ್ಯಾಸದಿಂದ ತಮ್ಮ ಹಕ್ಕುಗಳಿಗೆ ಹೋರಾಟ ಮಾಡುತ್ತಿದ್ದಾರೆ"

*(ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ರಾಷ್ಟ್ರೀಯ ಆಯೋಗ, ಆರನೇ ವರದಿ 1999–2000 ಮತ್ತು 2000–01, ನವದೆಹಲಿ, 2001, ಪ್ಯಾರಾ 9.10)*

⇒ ***ಅಭಿವೃದ್ಧಿ ಯೋಜನೆಗಳಿಂದಾಗಿ ಪರಿಶಿಷ್ಟರನ್ನು ಸ್ಥಳಾಂತರಗೊಳಿಸಿ ಭೂಮಿಯನ್ನು ಕಸಿದುಕೊಳ್ಳುವುದು ದೌರ್ಜನ್ಯ ಕಾಯ್ದೆಯ ಸೆಕ್ಷನ್3(1)(v)ರಲ್ಲಿ ತಿಳಿಸಿರುವಂತೆ ಪರಿಶಿಷ್ಟರ ಹಕ್ಕುಗಳಿಗೆ ತಡೆ ಎಂದೇಕೆ ಪರಿಗಣಿಸಬಾರದು? ಹೀಗಿದ್ದರೆ, ವಾಸ್ತವತೆಯಲ್ಲಿ, ಪರಿಶಿಷ್ಟ ಪಂಗಳವರ ವಿರುದ್ಧ ಹೆಚ್ಚು ಸಂಖ್ಯೆಯಲ್ಲಿ ದೌರ್ಜನ್ಯಗಳು ಆಗುತ್ತಿರುವುದು ಕಾಣಿಸುವುದಿಲ್ಲವೇ?***

**ಪ್ರಬಲ ಜಾತಿಯವರು ಪರಿಶಿಷ್ಟ ಮಹಿಳೆಯರನ್ನು ಹಿಂಸಿಸಲು ಪ್ರಮುಖ ಕಾರಣಗಳು ಜಾತಿ ಮತ್ತು ಅವರು ಮಹಿಳೆಯರು ಎನ್ನುವ ಕಾರಣಕ್ಕಾಗಿ ಎನ್ನುತ್ತಾರೆ ಪರಿಶಿಷ್ಟ ಮಹಿಳೆಯರು. ಅಸ್ಪೃಶ್ಯತೆಯೆಂಬ ಹಿಂಸೆಯಷ್ಟೇ ಅಲ್ಲದೆ ಸಣ್ಣ ಕಾರಣಗಳಿಗೆ ದೊಡ್ಡ ಸ್ವರೂಪದ ಹಿಂಸೆ ನೀಡುತ್ತಾರೆ. (ಉದಾ: ಪರಿಶಿಷ್ಟ ಮಹಿಳೆಯರು ಪ್ರಬಲ ಜಾತಿಯವರ ಹೊಲ ದಾಟಿದ ಕಾರಣ, ನೀರಿಗಾಗಿ, ಆರ್ಥಿಕ ಸಂಪನ್ಮೂಲದ ಮೇಲಿನ ಹಕ್ಕುಗಳಿಗೆ) ಈ ಕಾರಣಗಳನ್ನು ಎರಡು ಭಾಗ ಮಾಡಬಹುದು: (1) ಜಾತಿಯ ನಿಯಮ ಅಥವಾ ಜಾತಿಯ ಜೊತೆ ಮಹಿಳೆಯರಿಗಿರುವ ನಿಯಮಗಳನ್ನು ಮುಂದುವರಿಸುವುದಕ್ಕಾಗಿ ಹಿಂಸೆ; ಹಾಗೂ (2) ಪರಿಶಿಷ್ಟ ಮಹಿಳೆಯರು ಅಸ್ಪೃಶ್ಯತೆಯನ್ನು ಖಂಡಿಸಿದರೆ ಅಥವಾ ತಮ್ಮ ಸಂಸ್ಕೃತಿ, ಆರ್ಥಿಕ ಮತ್ತು ರಾಜಕೀಯ ಹಕ್ಕುಗಳಿಗೆ ಹೋರಾಡಿದರೆ ಪ್ರತೀಕಾರ.**

*ಅಲಾಸಿಯಸ್ ಇರುದಯಂ ಮತ್ತು ಇತರರು, ದಲಿತ್ ವುಮೆನ್ ಸ್ಪೀಕ್ ಔಟ್: ಭಾರತದಲ್ಲಿ ದಲಿತ ಮಹಿಳೆಯರ ವಿರುದ್ಧ ಹಿಂಸೆ, ಚೆನ್ನೈ, ಐಡಿಇಎಎಸ್, ಎನ್‌ಸಿಡಿಹೆಚ್‌ಆರ್ ಮತ್ತು ಎನ್‌ಎಫ್‌ಡಿಡಬ್ಲ್ಯು, 2006, ಪುಟ 113*

## 5. ಪೋಲೀಸ್ ಮತ್ತು ಭದ್ರತಾ ಪಡೆಯಲ್ಲಿ ದುಷ್ಕರ್ಮಿಗಳು!

**ದೇಶದ ನಾಗರಿಕರನ್ನು ರಕ್ಷಿಸುವ ಬದಲಿಗೆ ಕೆಲವು ಪೋಲೀಸರು ಜಾತಿ/ಜನಾಂಗೀಯ ಮನೋಭಾವನೆ ತೋರುತ್ತಿದ್ದು ಪರಿಶಿಷ್ಟರ ಮೇಲಿನ ದೌರ್ಜನ್ಯಗಳಲ್ಲಿ ತಾವೂ ಕೈಜೋಡಿಸಿದ್ದಾರೆ ಅಥವಾ ದುಷ್ಕರ್ಮಿಗಳಿಗೆ ಕಾನೂನು ಉಲ್ಲಂಘನೆಗೆ ಅವಕಾಶ ನೀಡುತ್ತಿದ್ದಾರೆ!**

- ***ಪೋಲೀಸ್ ನಿರ್ಲಕ್ಷ:*** 1992–1995 ಅವಧಿಯಲ್ಲಿ 12 ರಾಜ್ಯ/ಕೇಂದ್ರಾಡಳಿತ ಪ್ರದೇಶಗಳಲ್ಲಿ ಪೋಲೀಸರು ಪರಿಶಿಷ್ಟರ ಮೇಲೆ ಮಾಡಿದ 699 ದೌರ್ಜನ್ಯ ಪ್ರಕರಣಗಳು ದಾಖಲಾದವು. ಅವು:
  - ಕಸ್ಟಡಿಯಲ್ಲಿ ಸಾವು ಅಥವಾ ಅತ್ಯಾಚಾರ; ಇತರೆ ದೌರ್ಜನ್ಯಗಳು ಅಥವಾ ಪೋಲೀಸರ ಅತಿರೇಕ ವರ್ತನೆ;
  - ಪರಿಶಿಷ್ಟರ ಮೇಲೆ ಆದ ದೌರ್ಜನ್ಯ ಪ್ರಕರಣಗಳಲ್ಲಿ ನೀಡಿದ ದೂರುಗಳ ವಿರುದ್ಧ ಕ್ರಮ ಕೈಗೊಳ್ಳದಿರುವ ಪೋಲೀಸರ ಮೇಲೆ ದೂರುಗಳು
  - ದೌರ್ಜನ್ಯಗಳಲ್ಲಿ ಪೋಲೀಸರ ಶಾಮೀಲು ಅಥವಾ ನಿರ್ಲಕ್ಷತನದಿಂದಾಗಿ ದೌರ್ಜನ್ಯಕ್ಕೆ ಎಡೆ ಮಾಡಿಕೊಟ್ಟಿರುವ ಪ್ರಕರಣಗಳು ಅಥವಾ ದೌರ್ಜನ್ಯದ ನಂತರ ನ್ಯಾಯ ದೊರಕದಂತೆ ಮಾಡಿರುವ ಪ್ರಕರಣಗಳು. *(ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ರಾಷ್ಟ್ರೀಯ ಆಯೋಗ, ಎರಡನೇ ವರದಿ 1993–94 ಮತ್ತು ಮೂರನೇ ವರದಿ 1994–95 ಮತ್ತು 1995–96, ನವದೆಹಲಿ, 1996 ಮತ್ತು 1998, ಪುಟ ಪ್ಯಾರಾ. 167–70 ಮತ್ತು ಪುಟ ಪ್ಯಾರಾ 215–17)*
- ***ಪೋಲೀಸ್ ಹಿಂಸೆ:*** "ಬಿಹಾರ, ಉತ್ತರಪ್ರದೇಶ ಮತ್ತು ಮಹಾರಾಷ್ಟ್ರಗಳಲ್ಲಿ ಪರಿಶಿಷ್ಟರು ಹೆಚ್ಚು ಸಂಖ್ಯೆಯಲ್ಲಿ ಸಾವಿಗೆ ಈಡಾಗುತ್ತಾರೆ... ಜೈಲಿನಲ್ಲಿರುವ ಪರಿಶಿಷ್ಟರನ್ನು ಪದೇ ಪದೇ ಅವಮಾನಿಸುತ್ತಾರೆ, ಗುಲಾಮಚಾಕರಿ ಮಾಡಲು ಬಲತ್ಕರಿಸುತ್ತಾರೆ ಹಾಗೂ ಜೈಲು ಸಿಬ್ಬಂಧಿಗಳ ಆದೇಶ ಅಷ್ಟೇ ಅಲ್ಲದೆ ಕೆಲವೊಮ್ಮೆ ಜೈಲಿನಲ್ಲಿರುವ ಹಿಂದೂಗಳ ಆದೇಶವನ್ನೂ ಪಾಲಿಸಬೇಕು." *(ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗದ ವರದಿ–ಪರಿಶಿಷ್ಟ ಜಾತಿಯವರ ವಿರುದ್ಧ ದೌರ್ಜನ್ಯ ತಡೆ, ನವದೆಹಲಿ, 2002, ಪುಟ,ಪ್ಯಾರಾ 120–1)*
- ***ಪೋಲೀಸ್ ದೌರ್ಜನ್ಯ:*** ಮಾನವ ಹಕ್ಕುಗಳ ಕಾವಲುಪಡೆ ಗುರುತಿಸಿರುವ ದೌರ್ಜನ್ಯಗಳು ಈ ಕೆಳಕಂಡವನ್ನು ಒಳಗೊಂಡಿವೆ: ಪೋಲೀಸ್ ಕಸ್ಟಡಿಯಲ್ಲಿ ಹಿಂಸೆ ಮತ್ತು ಸಾವು; ಎನ್‌ಕೌಂಟರ್ ಸಾವುಗಳು; ಜಾತೀಯ ಜಗಳಗಳಾದ ನಂತರ ಪರಿಶಿಷ್ಟರ ಕೇರಿಗಳಲ್ಲಿ ಪೋಲೀಸ್ ರೈಡ್; ಪರಿಶಿಷ್ಟ ಮಹಿಳೆಯರಿಗೆ ಹಿಂಸೆ; ಪರಿಶಿಷ್ಟರ ಮೇಲೆ ಸುಳ್ಳು ಆರೋಪ ಮತ್ತು ಬಂಧನ; ಪರಿಶಿಷ್ಟರು ಮಾಡುವ ಶಾಂತಿಯುತ ಪ್ರತಿಭಟನೆಯಲ್ಲಿ ಹಿಂಸೆ ನೀಡಿ ಭಗ್ನಗೊಳಿಸುವುದು; ಪರಿಶಿಷ್ಟರ ಆರೋಪಿಯನ್ನು ಹುಡುಕುವಾಗ ಇಡೀ ಪರಿಶಿಷ್ಟರ ಕೇರಿಯ ಪರಿಶೋಧನೆ; ಹಾಗೂ ಗಲಭೆ/ನಕ್ಸಲ್ ಪೀಡಿತ ಪ್ರದೇಶದಲ್ಲಿ ಬಂದೂಕು ದಾಳಿಗೆ ಪರಿಶಿಷ್ಟರ ಬಲಿ. *(ಮಾನವ ಹಕ್ಕುಗಳ ಕಾವಲು ಪಡೆ, ಅಸಹಾಯಕ ಜನರು: ಭಾರತದ 'ಅಸ್ಪೃಶ್ಯರ' ಮೇಲೆ ಜಾತಿಯ ಹಿಂಸೆ, ನ್ಯೂಯಾರ್ಕ್, 1999)*
- ***ಭದ್ರತಾ ಪಡೆಗಳ ದೌರ್ಜನ್ಯ:*** ಭದ್ರತಾ ಪಡೆಗಳು ಕಾರ್ಯಾಚರಣೆ ಮಾಡುವಾಗ ಕಾರಣವಿಲ್ಲದ ಬಂಧನ ಅರಣ್ಯವಾಸಿಗಳ ಹಕ್ಕು ಉಲ್ಲಂಘನೆ, ಅಕ್ರಮ ಬಂಧನ, ಹಿಂಸೆ, ಕಸ್ಟಡಿಯಲ್ಲಿ ಸಾವು ಮತ್ತು "ಭಯೋತ್ಪಾದನೆ ಮೇಲೆ ಕಾರ್ಯಾಚರಣೆ" ಎಂಬ ನೆಪದಲ್ಲಿ ನ್ಯಾಯಾಂಗದ ಎಲ್ಲೆ ಮೀರಿ ಜನರ ಸಾವುಗಳಿಗೆ ಭದ್ರತಾ ಪಡೆ ಜವಾಬ್ದಾರಿ ಆಗಿದ್ದಾರೆ. *(ಏಷಿಯಾದ ಮೂಲನಿವಾಸಿಗಳು ಮತ್ತು ಅರಣ್ಯವಾಸಿಗಳ ಒಕ್ಕೂಟ, ಭಾರತದಲ್ಲಿ ಮೂಲನಿವಾಸಿಗಳು ಮತ್ತು ಅರಣ್ಯವಾಸಿ ಜನರ ಸ್ಥಿತಿಗತಿ 2009, ನವದೆಹಲಿ, 2009, ಪುಟ 4)*

⇨ ***ದೇಶದ ಪ್ರಜೆಗಳನ್ನು ರಕ್ಷಿಸಲು ಕಾನೂನು ಸುವ್ಯವಸ್ಥೆ ಪರಿಪಾಲನೆ ಪೋಲೀಸ್ ಹಾಗೂ ಭದ್ರತಾ ಪಡೆಗಳ ಕರ್ತವ್ಯ, ಹೀಗಿರುವಾಗ, ಇವರೇ ಪರಿಶಿಷ್ಟರ ಮೇಲೆ ದೌರ್ಜನ್ಯ ಮಾಡುವ, ದೌರ್ಜನ್ಯ ಪ್ರಕರಣಗಳಲ್ಲಿ, ಕೇಸು ದಾಖಲಿಸಲು ಅಥವಾ ತನಿಖೆ ಮಾಡಲು ನಿರ್ಲಕ್ಷಿಸುವ ಪೋಲೀಸರಿಗೆ ಶಿಕ್ಷೆ ಆಗಬೇಕು, ಅಲ್ಲವೇ?***

## 6. ಗೌರವ ಮತ್ತು ಭದ್ರತೆ? ಮಹಿಳೆಯರನ್ನು ಗುರಿಯಾಗಿಸಿ ಅಪರಾಧ

- "ಪರಿಶಿಷ್ಟ ಮಹಿಳೆಯರ ಮೇಲಿನ ದೌರ್ಜನ್ಯಗಳಲ್ಲಿ, ದುಷ್ಕರ್ಮಿಗಳು ಮಹಿಳೆಯರ ಮೇಲೆ ಅಧಿಕಾರ ಚಲಾಯಿಸುತ್ತಾರೆ, ಅಸಭ್ಯವಾಗಿ ವರ್ತಿಸುತ್ತಾರೆ, ಅಮಾನವೀಯತೆಯಿಂದ ನಡೆಸಿಕೊಳ್ಳುತ್ತಾರೆ, ಲೈಂಗಿಕ ಅತ್ಯಾಚಾರ ಮಾಡಿ, ಬೆತ್ತಲೆ ಮೆರವಣಿಗೆ ನಡೆಸಿ, ಕೆಟ್ಟ ಮಾತುಗಳಿಂದ ನಿಂದಿಸಿ, ಪರಿಶಿಷ್ಟ ಸಮುದಾಯವನ್ನು ಅವಹೇಳನ ಮಾಡುತ್ತಾರೆ." *(ಮಹಿಳೆಯರಿಗೆ ರಾಷ್ಟ್ರೀಯ ಆಯೋಗ, ದುರ್ಬಲ ಮಹಿಳೆಯರು: ಪರಿಶಿಷ್ಟ ಜಾತಿಯ ಮಹಿಳೆಯರ ಸಾಮಾಜಿಕ–ಆರ್ಥಿಕ ಅಭಿವೃದ್ಧಿ, ನವದೆಹಲಿ, 1996, ಪುಟ 33)*

1999–2004 ಅವಧಿಗೆ, ಆಂಧ್ರಪ್ರದೇಶ, ಬಿಹಾರ, ತಮಿಳುನಾಡು ಮತ್ತು ಉತ್ತರಪ್ರದೇಶ ರಾಜ್ಯಗಳಲ್ಲಿ ಪರಿಶಿಷ್ಟ ಮಹಿಳೆಯರ ಮೇಲೆ ದೌರ್ಜನ್ಯ ಪ್ರಕರಣಗಳನ್ನು ಅಧ್ಯಯನ ಮಾಡಲಾಗಿ, ಬಹುತೇಕ ಮಹಿಳೆಯರು ಸಾಮಾನ್ಯ ಸಮುದಾಯದವರಿಂದ ಅಥವಾ ಅವರ ಕುಟುಂಬದ ಜನರಿಂದಲೇ ಹಲವು ವಿಧವಾಗಿ ದೌರ್ಜನ್ಯಕ್ಕೊಳಗಾಗುತ್ತಾರೆ. ಹಿಂಸೆಯ ಪರಿ ಹೀಗಿವೆ: **ನಿಂದನೆ (62.4%), ದೇಹದ ಮೇಲೆ ಹಲ್ಲೆ (54.8%), ಲೈಂಗಿಕ ಕಿರುಕುಳ ಮತ್ತು ಹಲ್ಲೆ (46.8%), ಕೌಟುಂಬಿಕ ಹಿಂಸೆ (43,0%) ಮತ್ತು ಅತ್ಯಾಚಾರ (23.2%)**.

ಪರಿಶಿಷ್ಟ ಮಹಿಳೆಯರ ಮೇಲಾಗುವ ದೌರ್ಜನ್ಯಗಳನ್ನು ಬಹುತೇಕ ಪರಿಶಿಷ್ಟರಲ್ಲದವರು ಮಾಡುತ್ತಾರೆ, ಇವರಲ್ಲಿ ಹೆಚ್ಚು ದೌರ್ಜನ್ಯ ಎಸಗುವವರು ಜಮೀನುದಾರರು. ನಂತರ ಕ್ರಮವಾಗಿ ಪೋಲೀಸ್, ಅರಣ್ಯ ಇಲಾಖೆ ಸಿಬ್ಬಂಧಿಗಳು ವ್ಯಾಪಾರಿಗಳು ಇನ್ನಿತರೆ ಮುಖ್ಯ ದುಷ್ಕರ್ಮಿಗಳು. ಪೋಲೀಸರು ನೇರವಾಗಿ ಭಾಗಿಯಾಗದಿದ್ದರೂ ಹೆಚ್ಚು ಪ್ರಕರಣಗಳಲ್ಲಿ ಕಾನೂನು ಪರಿಪಾಲನೆ ಮಾಡದೆ ದುಷ್ಕರ್ಮಿಗಳ ಜೊತೆ ಶಾಮೀಲಾಗಿದ್ದಾರೆ. ಮತ್ತೆರಡು ವರ್ಗದ ದುರಾಚಾರಿಗಳಲ್ಲಿ ಒಬ್ಬರು ವೃತಿಪರ ಸಿಬ್ಬಂಧಿಗಳು (ಆಸ್ಪತ್ರೆಯ ಶುಶ್ರೂಷಕರು ಮತ್ತು ವೈದ್ಯರು ಹಾಗೂ ಶಿಕ್ಷಕರು) ಮತ್ತೊಬ್ಬರು ರಾಜಕಾರಣಿಗಳು (ಸ್ಥಳೀಯ ರಾಜಕೀಯ ಧುರೀಣರು ಮತ್ತು ಚುನಾಯಿತ ಪಂಚಾಯತಿ ಸದಸ್ಯರು).
*(ಅಲಾಸಿಯಸ್ ಇರುದಯಂ ಮತ್ತು ಇತರರು, ದಲಿತ ಮಹಿಳೆಯರು ಮಾತನಾಡುತ್ತಾರೆ: ಭಾರತವಲ್ಲಿ ದಲಿತ ಮಹಿಳೆಯರ ವಿರುದ್ಧ ಹಿಂಸೆ, ಚೆನ್ನೈ, ಐಡಿಇಎಎಸ್, ಎನ್‌ಸಿಡಿಹೆಚ್‌ಆರ್ ಮತ್ತು ಎನ್‌ಎಫ್‌ಡಿಡಬ್ಲ್ಯು, 2006, ಪುಟ, ಪ್ಯಾರಾ 106–7, 110–11)*

## 20 ವರ್ಷಗಳ ದೌರ್ಜನ್ಯ–ಪರಿಶಿಷ್ಟರ ಮೇಲೆ

- 1995–2007 ಅವಧಿಯಲ್ಲಿ ಅರಣ್ಯವಾಸಿಗಳ ಕೊಲೆ, ಅಪಹರಣ, ಡಕಾಯತಿ, ರಾಬರಿ ಮತ್ತು ಮನೆಯ ಸುಡುವಂತಹ ಎಲ್ಲಾ ಪ್ರಕರಣಗಳನ್ನು ಸೇರಿಸಿದರೆ, ಅದಕ್ಕಿಂತ ಹೆಚ್ಚು ಅರಣ್ಯವಾಸಿ ಮಹಿಳೆಯರ ಮೇಲೆ ಮಾಡಿದ ಅತ್ಯಾಚಾರ ಪ್ರಕರಣಗಳು ಹೆಚ್ಚಿದ್ದವು.
- ತಮಿಳುನಾಡಿನ 10 ಜಿಲ್ಲೆಗಳ 100 ಅರಣ್ಯವಾಸಿ ಗ್ರಾಮಗಳಲ್ಲಿ 1989–1999ರ ಅವದಿಗೆ ಮಧುರೆ ಜಿಲ್ಲೆಯ ಅಭಿವೃದ್ಧಿ, ಶಿಕ್ಷಣ ಮತ್ತು ಅಧ್ಯಯನ ಎಂಬ ಸಂಸ್ಥೆ ನಡೆಸಿದ ಅಧ್ಯಯನದಲ್ಲಿ ಆದಿವಾಸಿ ಮಹಿಳೆಯರ ವಿರುದ್ಧ ಆದ ಈ ಕೆಳಕಂಡ ದೌರ್ಜನ್ಯಗಳು ಬೆಳಕಿಗೆ ಬಂದವು:

| ಮಹಿಳೆಯರ ವಿರುದ್ಧ ಅಪರಾಧಗಳು: ಒಟ್ಟು ಗ್ರಾಮಗಳು | | | |
|---|---|---|---|
| ದುಷ್ಕರ್ಮಿಗಳು | ದೈಹಿಕ ಹಿಂಸೆ | ಲೈಂಗಿಕ ಶೋಷಣೆ | ಲೈಂಗಿಕ ಕಿರುಕುಳ |
| ಅರಣ್ಯ ಇಲಾಖೆ ಅಧಿಕಾರಿಗಳು | 23 | 23 | 21 |
| ಆದಿವಾಸಿಯೇತರರು | 21 | 34 | 42 |
| ಎಸ್ಟೇಟ್ ಮಾಲಿಕ/ವ್ಯವಸ್ಥಾಪಕ | 16 | 25 | 24 |
| ಬಡ್ಡಿ ವ್ಯಾಪಾರಿಗಳು | 11 | 6 | 14 |
| ಕಂದಾಯ ಅಧಿಕಾರಿಗಳು | 10 | 8 | 9 |
| ಪೋಲೀಸ್ + ಎಸ್.ಟಿ.ಎಫ್ | 10 | 8+1 | 8+2 |

*(ಅಲಾಸಿಯಸ್ ಇರುದಯಂ ಹಾಗೂ ಜಯಶ್ರೀ ಮಂಗುಭಾಯಿ, ಆದಿವಾಸಿಗಳು ಮಾತನಾಡುತ್ತಾರೆ: ತಮಿಳುನಾಡಿನಲ್ಲಿ ಆದಿವಾಸಿಗಳ ವಿರುದ್ಧ ದೌರ್ಜನ್ಯ, ಬೆಂಗಳೂರಿನ: ಬುಕ್ಸ್ ಫಾರ್ ಚೇಂಜ್, 2003, ಪುಟ 13)*

**"ಪರಿಶಿಷ್ಟ ಮಹಿಳೆಯರ ಮೇಲೆ ಆಗುವ ದೌರ್ಜನ್ಯಗಳನ್ನು ಅಂತ್ಯಗೊಳಿಸಿ ಉತ್ತರದಾಯಿತ್ವವನ್ನು ಖಚಿತಪಡಿಸಿಕೊಳ್ಳಲು ದೌರ್ಜನ್ಯ ತಡೆ ಕಾಯ್ದೆಯ ಪರಿಣಾಮಕಾರಿ ಅನುಷ್ಠಾನಕ್ಕಾಗಿ ಮೇಲ್ವಿಚಾರಣೆ ಮಾಡಲು ಗಣರಾಜ್ಯ ಸೂಕ್ತ ಕ್ರಮ ಕೈಗೊಳ್ಳಬೇಕಾಗಿ ಸಮಿತಿ ಶಿಫಾರಸ್ಸು ಮಾಡುತ್ತದೆ".**

*ಸಿಇಡಿಎಡಬ್ಲ್ಯು ಭಾರತ ಸರ್ಕಾರದ 2ನೇ–3ನೇ ವರದಿಯಲ್ಲಿ ಅಂತಿಮ ಟಿಪ್ಪಣಿ, ಸಿಇಡಿಎಡಬ್ಲ್ಯು/ಸಿ/ಐಎನ್‌ಡಿ/ಸಿಓ/3,2007, ಪ್ಯಾರಾ 29*

### 7. ದೌರ್ಜನ್ಯ ತಡೆಯ ಇತಿಮಿತಿ: ಪರಿಷ್ಕರಣೆಗೆ ಅಗತ್ಯತೆ!

ಕಾಯ್ದೆಯು 22 ರೀತಿಯ ದೌರ್ಜನ್ಯದ ಅಪರಾಧಗಳನ್ನು ತಿಳಿಸುತ್ತದೆ, ಸಮಯ ಸರಿದಂತೆ ದೌರ್ಜನ್ಯದ ಸ್ವರೂಪ ಬದಲಾಗುತ್ತವೆ ಹಾಗೂ ಹೊಸ ರೀತಿಯಲ್ಲಿ ಹೆಚ್ಚು ಹೆಚ್ಚು ದೌರ್ಜನ್ಯಗಳು ಸೃಷ್ಟಿಯಾಗುತ್ತವೆ. ಕಾಯ್ದೆಯಲ್ಲಿ ಸೇರಿಸದೇ ಇರುವ ಇಂತಹ ಸಾಮಾನ್ಯ ದೌರ್ಜನ್ಯಗಳು:

| | |
|---|---|
| *1. ಸ್ವ–ಇಚ್ಛೆಯಿಂದ ಗಾಯ ಅಥವಾ ತೀವ್ರ ಗಾಯ* | ಪರಿಶಿಷ್ಟರ ಮೇಲಾಗುವ ದೌರ್ಜನ್ಯ ಪ್ರಕರಣಗಳಲ್ಲಿ ಹೆಚ್ಚು ವರದಿಯಾಗುವ ಅಪರಾಧಗಳು ಗಾಯ, ಹಲ್ಲೆ(ಸಾಮಾನ್ಯವಾಗಿ ಹಲ್ಲೆ ಇತರೆ ದೌರ್ಜನ್ಯಗಳ ಜೊತೆ ಸೇರಿಕೊಳ್ಳುತ್ತದೆ), ಈ ಅಪರಾಧಗಳನ್ನು ಕಾಯ್ದೆಯಲ್ಲಿ ವಿವರಿಸಿಲ್ಲ! |
| *2. ಕೊಲೆ ಹಾಗೂ ಸಾಮೂಹಿಕ ಕೊಲೆ* | |
| *3. ಅತ್ಯಾಚಾರ, ಸಾಮೂಹಿಕ ಅತ್ಯಾಚಾರ ಮತ್ತು ಗುಂಪುಗೂಡಿ ಅತ್ಯಾಚಾರ* | |
| *4. ಅಪಹರಣ ಮತ್ತು ಕಿಡ್ನಾಪ್* | ಈ ಅಪರಾಧ ಒಮ್ಮೆ ಆದ ನಂತರ ತೀವ್ರತರ ಅಪರಾಧಗಳಾದ ಹಿಂಸೆ ಅಥವಾ ಬಲವಂತದ ಕೂಲಿ ಅಥವಾ ಬಲವಂತದ ವಿವಾಹಕ್ಕೆ ಎಡೆಮಾಡಿಕೊಡುತ್ತದೆ. |
| *5. ಪರಿಶಿಷ್ಟರ ಮನೆ ಧ್ವಂಸಗೊಳಿಸಿ ನಿರ್ನಾಮ ಅಥವಾ ಸ್ಥಿರಾಸ್ತಿ ಮತ್ತು ಚರಾಸ್ತಿಯ ಕಳ್ಳತನ* | ಪರಿಶಿಷ್ಟರ ವಿರುದ್ಧ ಹಿಂಸೆ ಜರುಗಿದ ನಂತರ ಸಾಮಾನ್ಯವಾಗಿ ಮನೆಗಳು ಧ್ವಂಸಕ್ಕೊಳಗಾಗಿ ನಿರ್ನಾಮ ಆಗುತ್ತವೆ ಅಥವಾ ಕಳ್ಳತನಗಳಾಗುತ್ತವೆ. ಇದರಿಂದ ದೌರ್ಜನ್ಯಕ್ಕೆ ಬಲಿಯಾದವರು ಪ್ರಕರಣವನ್ನು ಕಾಯ್ದೆಯನ್ವಯ ಮುಂದುವರಿಸಲು ಆರ್ಥಿಕ ಶಕ್ತಿ ಕಳೆದುಕೊಳ್ಳುತ್ತಾರೆ. |
| *6. ದೌರ್ಜನ್ಯಕ್ಕೊಳಗಾದ ಪರಿಶಿಷ್ಟರ ವಿರುದ್ಧ ಪ್ರತ್ಯಾರೋಪ ದೂರುಗಳನ್ನು ದಾಖಲಿಸುವ ಪ್ರವೃತ್ತಿ* | ಪರಿಶಿಷ್ಟರಲ್ಲದ ದುಷ್ಕರ್ಮಿಗಳು ಈ ರೀತಿ ಮಾಡುತ್ತಾರೆ. ಕೆಲವೊಮ್ಮೆ ಪೋಲೀಸರ ಸಹಾಯದಿಂದ ಹೀಗೆ ಮಾಡುತ್ತಾರೆ, ಇದರಿಂದಾಗಿಯಾವಾಗಲೂ ಪರಿಶಿಷ್ಟರು ಬಂಧನಕ್ಕೊಳಗಾಗುತ್ತಾರೆ ಹಾಗೂ ದೌರ್ಜನ್ಯದ ಕೇಸ್ ವಾಪಸ್ ಪಡೆಯುವವರೆಗೂ ಕಿರುಕುಳ ಅನುಭವಿಸುತ್ತಾರೆ. |
| *7. ಪರಿಶಿಷ್ಟರಿಗೆ ಒಪ್ಪಿದಂತೆ/ಕರಾರಿನ ಪ್ರಕಾರ ಕನಿಷ್ಟ ವೇತನ ನೀಡಲು ನಿರಾಕರಣೆ* | |
| *8. ದೈಹಿಕವಾಗಿ ಮಲ ಹೊರುವವರಿಗೆ ಉದ್ಯೋಗ* | |
| *9. ಸಾಲ ನೀಡುವ ನೆಪದಲ್ಲಿ ಮೋಸ* | ಪರಿಶಿಷ್ಟರನ್ನು ಜೀತದಾಳಾಗಿ ಅಥವಾ ಸಾಲದ ಹೊರೆಯಲ್ಲಿ ಸಿಕ್ಕಿಸಲು ಹೀಗೆ ಮಾಡುತ್ತಾರೆ |
| *10. ಶೈಕ್ಷಣಿಕ ಸಂಸ್ಥೆಗಳಲ್ಲಿ ದೊರೆತ ಅವಕಾಶಗಳನ್ನು ನೀಡಲು ನಿರಾಕರಣೆ ಅಥವಾ ಮಿತಿ* | ಹೆಚ್ಚಿರುವ ಜಾತಿ/ಜನಾಂಗೀಯ ಬೇಧಭಾವ ಮತ್ತು ಶೈಕ್ಷಣಿಕ ಸಂಸ್ಥೆಗಳಲ್ಲಿ ಪರಿಶಿಷ್ಟರ ಮಕ್ಕಳ ಮೇಲೆ ಹಿಂಸೆ. ಪ್ರಾಥಮಿಕ ಶಾಲೆಯಿಂದ ಹಿಡಿದು ಐಐಟಿ/ಐಐಎಂಗಳಲ್ಲಿ ಇದನ್ನು ಕಾಣಬಹುದು ಹಾಗೂ ಮಧ್ಯಾಹ್ನದ ಬಿಸಿಯೂಟ ಕಾರ್ಯಕ್ರಮದಲ್ಲಿಯೂ ಈ ಬೇಧಭಾವ ಕಾಣಬಹುದು. |
| *11 ಅರಣ್ಯವಾಸಿಗಳು ಅರಣ್ಯದ ಹಕ್ಕು ಸವಿಯಲು ಪಕ್ಷಪಾತ ಅಥವಾ ಅಡೆತಡೆ.* | ಪರಿಶಿಷ್ಟ ಪಂಗಡಗಳ ಮತ್ತು ಇತರೆ ಸಾಂಪ್ರದಾಯಿಕ ಅರಣ್ಯವಾಸಿಗಳ (ಅರಣ್ಯ ಹಕ್ಕುಗಳ ಮಾನ್ಯತೆ) ಕಾಯ್ದೆ 2006 ಮತ್ತು ನಿಯಮ 3(1) ಹಾಗೂ (4)ರನ್ವಯ ಅರಣ್ಯದ ಹಕ್ಕುಗಳು ಇವರ ಹಕ್ಕುಗಳೆಂದು ವ್ಯಾಖ್ಯಾನ ಮಾಡಲಾಗಿದೆ. |

| | |
|---|---|
| *12. ಊರಿಗೆ ಸೇರಿದ ಆಸ್ತಿಯಲ್ಲಿ ದೊರೆಯುವ ಸಂಪನ್ಮೂಲಗಳನ್ನು ಇತರರ ಜೊತೆ ಸಮನಾಗಿ ಬಳಸಲು ಅಡೆತಡೆ, ಅಥವಾ ಕಿರು ಅರಣ್ಯ ಉತ್ಪನ್ನ ಅಥವಾ ಮರ-ಮುಟ್ಟುಗಳ ಹೊರತಾಗಿ ಇತರೆ ಅರಣ್ಯ ಉತ್ಪನ್ನಗಳನ್ನು ಒಂದೋ ಕಾನೂನಿನನ್ವಯ ಅಥವಾ ಸಾಂಪ್ರದಾಯಿಕ ಹಕ್ಕುಗಳ ಮೂಲಕ ಸವಿಯಲು ಅಡೆತಡೆ* | |
| *13. ಪರಿಶಿಷ್ಟರ ಜನರು ತಮ್ಮ ರುದ್ರಭೂಮಿ ಬಳಸಲು ಅಡೆತಡೆ* | |
| *14. ಡಾ. ಬಿ.ಆರ್. ಅಂಬೇಡ್ಕರ್ ಪ್ರತಿಮೆಗೆ ಅಗೌರವ, ಪ್ರತಿಮೆಗೆ ಹಾನಿ ಅಥವಾ ವಿರೂಪ* | ಡಾ. ಬಿ.ಆರ್. ಅಂಬೇಡ್ಕರ್ ಒಬ್ಬ ಪ್ರಮುಖ ರಾಜಕೀಯ ಧುರೀಣ, ದಲಿತರ ಹಕ್ಕುಗಳನ್ನು ದೊರಕಿಸಿಕೊಟ್ಟ ಅಪ್ರತಿಮ ವೀರ ಮತ್ತು ಸಂವಿಧಾನ ಶಿಲ್ಪಿ. ಇಂತಹ ಧೀಮಂತ ನಾಯಕರ ಪ್ರತಿಮೆಯನ್ನು ನಾಶಗೊಳಿಸುವ ಪ್ರವೃತ್ತಿ ಪರಿಶಿಷ್ಟರಿಗೆ ಸಾರ್ವಜನಿಕವಾಗಿ ಮಾಡುವ ಅವಮಾನ ಎಂಬುದನ್ನು ಸ್ಪಷ್ಟವಾಗಿ ತೋರಿಸುತ್ತವೆ. |

*(ಪರಿಶಿಷ್ಟ ಜಾತಿ ಮತ್ತು ಪಂಗಡಗಳ ರಾಷ್ಟ್ರೀಯ ಆಯೋಗ, ಪರಿಶಿಷ್ಟ ಜಾತಿ ಪಂಗಡಗಳ ಮೇಲೆ ದೌರ್ಜನ್ಯ: ಕಾರಣಗಳು ಮತ್ತು ಪರಿಹಾರ, ನವದೆಹಲಿ, 1990, ಪುಟ 36; ಪರಿಶಿಷ್ಟ ಜಾತಿ ಮತ್ತು ಪಂಗಡಗಳ (ದೌರ್ಜನ್ಯ ತಡೆ) ಕಾಯ್ದೆಯ ಬಲವರ್ಧನೆಗೆ, ರಾಷ್ಟ್ರೀಯ ಒಕ್ಕೂಟ ಸಲ್ಲಿಸಿದ ವಾದ ಮಂಡನೆ 11-09-2009, ನವದೆಹಲಿ)*

**15. ಸಾಮಾಜಿಕ ಅಥವಾ ಆರ್ಥಿಕ ಬಹಿಷ್ಕಾರ-ಬೆದರಿಕೆ ತಂತ್ರ**

- ದೌರ್ಜನ್ಯ ತಡೆ ಕಾಯ್ದೆಯ ನಿಯಮ 3ರಲ್ಲಿ ಸಾಮಾಜಿಕ-ಆರ್ಥಿಕ ಬಹಿಷ್ಕಾರ, ಸಾಮಾಜಿಕ-ಆರ್ಥಿಕ ಬೆದರಿಕೆಗಳನ್ನು ತಿಳಿಸಿಲ್ಲ. ವಾಸ್ತವತೆಯಲ್ಲಿ ಪರಿಶಿಷ್ಟರು ನ್ಯಾಯಸಮ್ಮತ ಬೇಡಿಕೆಯಿಟ್ಟರೆ ಅಥವಾ ಅನ್ಯಾಯದ ವಿರುದ್ಧ ಮಾತನಾಡಿದರೆ ಅಥವಾ ತಮ್ಮ ಹಕ್ಕುಗಳನ್ನು ಪ್ರತಿಪಾದಿಸಿದರೆ ಪರಿಶಿಷ್ಟರು ಈ ಸಮಸ್ಯೆಗಳನ್ನು ಎದುರಿಸುತ್ತಾರೆ *(ಪಿ.ಎಸ್. ಕೃಷ್ಣನ್, ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ, ಪರಿಶಿಷ್ಟ ಜಾತಿಯವರ ಮೇಲೆ ದೌರ್ಜನ್ಯದ ತಡೆ ವರದಿಯಲ್ಲಿ ತಿಳಿಸಿರುವಂತೆ, ನವದೆಹಲಿ, 2004, ಪುಟ. 292)*
- ದೌರ್ಜನ್ಯ ತಡೆ ಕಾಯ್ದೆಯ *3(1)(v), (xiv)* ಮತ್ತು *(xv)* ನಿಯಮಗಳಿಗೆ ವಿಶಾಲವಾದ ಅರ್ಥವ ನೀಡುವ ಮೂಲಕ ಸಾಮಾಜಿಕ-ಆರ್ಥಿಕ ಬಹಿಷ್ಕಾರವನ್ನು ಕಾಯ್ದೆಯ ವ್ಯಾಪ್ತಿಗೆ ತರಲು ಕೋರ್ಟುಗಳೂ ಪ್ರತಿರೋಧ ತೋರಿವೆ. ಎಫ್.ಐ.ಆರ್. ಮಾಡುವಾಗ ಈ ನಿಯಮಗಳನ್ನು ಸೇರಿಸುವುದೇ ಇಲ್ಲ, ಕೋರ್ಟುಗಳೂ ಇವುಗಳನ್ನು ಚರ್ಚಿಸುವುದಿಲ್ಲ. ಆದ್ದರಿಂದ, ಬಹಿಷ್ಕಾರದ ಕೇಸು ದಾಖಲಾದರೂ, ಅದನ್ನು ನಿರ್ದಿಷ್ಟವಾಗಿ ತಿಳಿಸದೇ, ನೋಡುವುದಕ್ಕೆ ಹಿಂಸೆ ಮತ್ತು ಬೆದರಿಕೆಯನ್ನಷ್ಟೇ ಸೂಚಿಸುತ್ತವೆ, ಬಹಿಷ್ಕಾರ, ಸಣ್ಣ ಮಟ್ಟದ ದೌರ್ಜನ್ಯವೆಂದು ಕಣ್ಣಿಗೆ ಕಾಣುತ್ತದೆ. *(ನವಸರ್ಜನ್ ಟ್ರಸ್ಟ್, ಗುಜರಾತಿನಲ್ಲಿ ಪರಿಶಿಷ್ಟರ ಮೇಲೆ ಸಾಮಾಜಿಕ-ಅರ್ಥಿಕ ಬಹಿಷ್ಕಾರ, ಅಹ್ಮದಾಬಾದ್, 2009, ಪುಟ 48)*

## I. ಅಳತೆಗೋಲು?

- ವ್ಯಕಿಯೊಬ್ಬರ ಹಕ್ಕುಗಳನ್ನು ದುಷ್ಕರ್ಮಿಯು ತನ್ನ ಅಧಿಕಾರದ ಹಿನ್ನೆಲೆಯಲ್ಲಿ ಮಾಡಿದ್ದರೂ ಪರಿಣಾಮಕಾರಿ ಪರಿಹಾರ ದೊರೆಯತಕ್ಕದ್ದು. *(ಅನುಚ್ಚೇದ 2(3)(a) ಐಸಿಸಿಪಿಆರ್)*
- ಕಾನೂನಿಗೆ ಎಲ್ಲರೂ ಸಮಾನರು, ಯಾವುದೇ ತಾರತಮ್ಯಕ್ಕೆ ಒಳಗಾಗದೇ ಕಾನೂನಿನ ರಕ್ಷಣೆ ಪಡೆಯುವ ಅರ್ಹತೆ ಎಲ್ಲರಿಗೂ ಇದೆ. *(ಅನುಚ್ಚೇದ 26, ಐಸಿಸಿಪಿಆರ್; ಅನುಚ್ಚೇದ 14, ಸಂವಿಧಾನ)*
- ಕಾನೂನು ಬಾಹಿರ ಚಟುವಟಿಕೆಗಳಿಂದ ಎಲ್ಲರನ್ನೂ ರಕ್ಷಿಸಬೇಕಾದ್ದು ಕಾನೂನು ಪರಿಪಾಲನೆ ಮಾಡುವ ಅಧಿಕಾರಿಗಳ ಕರ್ತವ್ಯ, ಅದನ್ನವರು ಸರಿಯಾಗಿ ಮತ್ತು ಕಡ್ಡಾಯವಾಗಿ *(ಅನುಚ್ಚೇದ 1 ಕಾನೂನು ಪರಿಪಾಲಕರಿಗೆ ನೀತಿ ಸಂಹಿತೆ 1979)*
- ಜನ್ಮಾಧಾರಿತ ತಾರತಮ್ಯಗಳು ಆಚರಣೆಯಿರುವ ಎಲ್ಲಾ ಪ್ರದೇಶಗಳಲ್ಲಿ ಸೂಕ್ತ ಪೋಲೀಸ್ ಸೇವೆಯನ್ನು ನಿಯೋಜಿಸಬೇಕು, ತಾರತಮ್ಯಕ್ಕೊಳಗಾದವರು ನೀಡಿದ ದೂರನ್ನು ಆ ಕ್ಷಣವೇ ಪಡೆಯಲು ಇದರಿಂದ ಸಾಧ್ಯ. *(ಪ್ಯಾರಾ 10 ಸಿಇಆರ್‌ಡಿ ಸಾಮಾನ್ಯ ಶಿಫಾರಸ್ಸುಗಳು XXXI 2005)*
- ಜನಾಂಗೀಯ ಸಮಸ್ಯೆಗಳಲ್ಲಿ ನೊಂದವರ ದೂರು ತಕ್ಷಣ ದಾಖಲಾಗಬೇಕು, ಆ ಕ್ಷಣ, ಸ್ವತಂತ್ರ, ನಿಷ್ಪಕ್ಷಪಾತ ಮತ್ತು ಪರಿಣಾಮಕಾರಿ ತನಿಖೆ ಕೈಗೊಳ್ಳಬೇಕು, ಸಂಬಂಧಿಸಿದ ದಾಖಲೆಗಳನ್ನು ನಿರ್ವಹಿಸಬೇಕು. *(ಸಿಇಆರ್‌ಡಿ ಸಾಮಾನ್ಯ ಶಿಫಾರಸ್ಸುಗಳು XXXI 2005, ಪ್ಯಾರಾ 11).*
- ಜನಾಂಗೀಯ ದ್ವೇಶದ ಯಾವುದೇ ದೂರನ್ನು ಪೋಲೀಸ್ ಸ್ವೀಕರಿಸದಿದ್ದರೆ ಆ ಪೋಲೀಸ್ ಅಧಿಕಾರಿ ಮೇಲೆ ಶಿಸ್ತುಕ್ರಮ ಅಥವಾ ದಂಡನೆ ವಿಧಿಸುವುದು ಮತ್ತು ಭ್ರಷ್ಟಾಚಾರ ಕಂಡರೆ ದಂಡನೆ ಹೆಚ್ಚಿಸಬೇಕು *(ಪ್ಯಾರಾ 12 ಸಿಇಆರ್‌ಡಿ ಸಾಮಾನ್ಯ ಶಿಫಾರಸ್ಸುಗಳು XXXI 2005)*
- ಪರಿಶಿಷ್ಟರಲ್ಲದ ಅಧಿಕಾರಿ, ಉದ್ದೇಶಪೂರಕವಾಗಿ ಕಾಯ್ದೆಯ ಕರ್ತವ್ಯವನ್ನು ನಿರ್ಲಕ್ಷಿಸಿದರೆ ಅವರಿಗೆ ಶಿಕ್ಷೆಯಾಗಬೇಕು.*( ದೌರ್ಜನ್ಯ ತಡೆ ಕಾಯ್ದೆ ಸೆಕ್ಷನ್ 4)*
- ಈ ಕಾಯ್ದೆಯಡಿಯ ದೌರ್ಜನ್ಯ ಪ್ರಕರಣವನ್ನು ಡೆಪ್ಯುಟಿ ಸೂಪರಿಂಟೆಂಡೆಂಟ್ ಅಥವಾ ಮೇಲ್ಪಟ್ಟ ಅಧಿಕಾರಿ ತನಿಖೆ ನಡೆಸಬೇಕು ಮತ್ತು 30 ದಿನಗಳಲ್ಲಿ ತನಿಖೆಯ ವರದಿ ಸಲ್ಲಿಸಬೇಕು *(ದೌರ್ಜನ್ಯ ತಡೆ ಕಾಯ್ದೆ, ನಿಯಮ 7)*

**ಹೆಚ್ಚು ಮಾಹಿತಿಗೆ ನಿಯಮ/ಕಲಂ/ಅನುಚ್ಚೇದಗಳು**–(1) ಅನುಚ್ಚೇದ 5(ಬಿ) ಐಸಿಇಆರ್‌ಡಿ; (2) ಪ್ಯಾರಾ 24–26, ಸಿಇಆರ್‌ಡಿ ಸಾಮಾನ್ಯ ಶಿಫಾರಸ್ಸುಗಳು XXIX 2002; (3) ಪ್ಯಾರಾ 5 ಮತ್ತು 13 ಸಿಇಆರ್‌ಡಿ ಸಾಮಾನ್ಯ ಶಿಫಾರಸ್ಸುಗಳು XXXI 2005; (4) ಅನುಚ್ಚೇದ 7 ಮತ್ತು 8 ಕಾನೂನು ಪರಿಪಾಲಕರಿಗೆ ನೀತಿ ಸಂಹಿತೆ 1979).

## II. ನಿಜಸ್ಥಿತಿ?

> **"ಸಾಮಾಜಿಕ ಅಪರಾಧಗಳನ್ನು ತಡೆಯುವ ವಿಶೇಷ ಕಾಯ್ದೆಗಳ ಯಶಸ್ಸು ಮತ್ತು ಕೀರ್ತಿ ಅದನ್ನು ಅನುಷ್ಠಾನಗೊಳಿಸುವ ವ್ಯವಸ್ಥೆಗೆ ಸಲ್ಲಬೇಕೆನ್ನುವುದು ಎಲ್ಲರೂ ಒಪ್ಪಿಕೊಂಡಿರುವ ವಿಚಾರ".**
> *ನ್ಯಾಯಮೂರ್ತಿ ಪುಣ್ಣಯ್ಯ ಆಯೋಗ–ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ವಿರುದ್ಧ ಅಸ್ಪೃಶ್ಯತೆಯ ಆಚರಣೆಯ ವಿಚಾರಣೆ, ಆಂಧ್ರಪ್ರದೇಶ, 2001, ಪುಟ 140*

ಗೃಹಸಚಿವಾಲಯದ ಪ್ರಮುಖ ಭಾಗ ಪೋಲೀಸ್ ಇಲಾಖೆ ಮುಖ್ಯ ಪಾತ್ರ ಆಯೋಗದ ಹೇಳಿಕೆಯಿಂದ ತಿಳಿಯುತ್ತದೆ. ಅದರಲ್ಲಿಯೂ ಶೋಷಿತ ಪರಿಶಿಷ್ಟರ ಜೀವನಕ್ಕೆ ಭದ್ರತೆ ನೀಡುವಲ್ಲಿ ಪೋಲೀಸ್ ಇಲಾಖೆಯ ಪಾತ್ರ ಮಹತ್ವವಾಗಿದೆ. ಇಷ್ಟು ಮುನ್ನೆಚ್ಚರಿಕೆ ವ್ಯವಸ್ಥೆ ಇದ್ದರೂ ಪರಿಶಿಷ್ಟರ ಮೇಲೆ ದೌರ್ಜನ್ಯ ಆಗುತ್ತಿದೆ. ದೌರ್ಜನ್ಯವಾದಾಗ ದೂರು ದಾಖಲಿಸುವ, ತನಿಖೆ ಮಾಡುವ ಮತ್ತು ಅಪರಾಧಿಗಳನ್ನು ಬಂಧಿಸಿ ಚಾರ್ಜ್‌ಶೀಟ್ ಹಾಕುವ ಸಂಪೂರ್ಣ ಜವಾಬ್ದಾರಿ ಪೋಲಿಸರದ್ದಾಗಿದೆ.

### ದೌರ್ಜನ್ಯ ತಡೆ ಕಾಯ್ದೆ ಜಾರಿಯಾಗಿ ಇಪ್ಪತ್ತು ವರ್ಷಗಳಲ್ಲಿ ಪೋಲೀಸರು ಕರ್ತವ್ಯವನ್ನು ಪರಿಪಾಲಿಸಿದ್ದಾರೆಯೇ?

> **"ನಾಗರಿಕ ಸಮಾಜದಲ್ಲಿ ದುರ್ಬಲರ ಮೇಲೆ ಮುಂದುವರೆದ ದೌರ್ಜನ್ಯಗಳು ರಾಷ್ಟ್ರದ ದುರಂತ. ಈ ದೌರ್ಜನ್ಯಗಳನ್ನು ನಿಭಾಯಿಸುವಾಗ ಸೂಕ್ಷ್ಮತೆಯ ಕೊರತೆ ಹಾಗೂ ಉದಾಸೀನತೆಗಳು ವರದಿಯಾಗುತ್ತಿರುವುದು ಅಘಾತಕಾರಿ ಅಂಶ"**
> *ಪ್ರಧಾನ ಮಂತ್ರಿ ಮನಮೋಹನ ಸಿಂಗ್, 10ನೇ ಅಂತರ–ರಾಜ್ಯಗಳ ಸಭೆಯಲ್ಲಿ ಮಾಡಿದ ಭಾಷಣ, ನವದೆಹಲಿ, 2006*

***ಪೋಲೀಸರ ಉದಾಸೀನತೆ ಮತ್ತು ಪೂರ್ವಾಗ್ರಹ ಭಾವನೆ: ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ***

ಪರಿಶಿಷ್ಟರು ದೂರು ನೀಡದಿರುವಂತೆ ಪೋಲೀಸರು ಅನೇಕ ತಂತ್ರ ಹೂಡುತ್ತಾರೆ. ಆರೋಪಿಯನ್ನು ಕಾನೂನಿನಿಂದ ರಕ್ಷಿಸಿ ವಿಚಾರಣೆಯಲ್ಲಿ ತಪ್ಪಿಸಿಕೊಳ್ಳಲು ದೌರ್ಜನ್ಯದ ಗಂಭೀರತೆಯನ್ನು ತಗ್ಗಿಸುತ್ತಾರೆ. ಕೆಲವು ಪ್ರಕರಣಗಳಲ್ಲಿ ಪೋಲೀಸರೇ ಹಿಂಸೆಯನ್ನು ಪ್ರಚೋದಿಸುತ್ತಾರೆ. ಇಂತಹ ಭಾವಶೂನ್ಯತೆ ಮತ್ತು ಪೂರ್ವಾಗ್ರಹ ಭಾವನೆ ಸರ್ಕಾರದ ಎಲ್ಲಾ ಹಂತದಲ್ಲಿ ಮತ್ತು ಜಿಲ್ಲಾಡಳಿತದಲ್ಲಿಯೂ ವ್ಯಾಪಕವಾಗಿದೆ. *(ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ, ಪರಿಶಿಷ್ಟ ಜಾತಿಯವರ ವಿರುದ್ಧ ದೌರ್ಜನ್ಯ ತಡೆಯ ವರದಿ, ನವದೆಹಲಿ, 2002, ಪುಟ ಪ್ಯಾರಾ 113–4)*

***ಪೋಲೀಸರ ಕರ್ತವ್ಯ ನಿರ್ಲಕ್ಷ್ಯ: ಜನಾಂಗೀಯ ತಾರತಮ್ಯದ ನಿರ್ಮೂಲನೆಗೆ ಸಂಯುಕ್ತ ರಾಷ್ಟ್ರಗಳ ಸಮಿತಿ***

"ಪರಿಶಿಷ್ಟರ ಮೇಲೆ ದೌರ್ಜನ್ಯ ಮತ್ತು ಪಕ್ಷಪಾತ ಪ್ರಕರಣಗಳಲ್ಲಿ ನಿರಾಪರಾಧ ಹೆಚ್ಚು ಸಾಬೀತಾಗುತ್ತಿದೆ, ಅಪರಾಧ ಕಡಿಮೆ ಸಾಬೀತಾಗುತ್ತಿದೆ, ತೀರ್ಮಾನ ಆಗದೇ ಇರುವ ಪ್ರಕರಣಗಳು ಇನ್ನೂ ಹೆಚ್ಚಾಗುತ್ತಿವೆ, ಇದು ಕಳವಳಕಾರಿ ವಿಚಾರ. ಪೋಲೀಸರು ಸರಿಯಾಗಿ ಪ್ರಕರಣ ದಾಖಲಿಸದಿರುವುದು ಮತ್ತು ತನಿಖೆ ಮಾಡದಿರುವುದು ಇದಕ್ಕೆ ಕಾರಣ ಎನ್ನುವುದನ್ನು ಈ ಸಮಿತಿ ಗಣನೆಗೆ ತೆಗೆದುಕೊಳ್ಳುತ್ತದೆ". *(ಸಿಇಆರ್‌ಡಿ ಸಮಿತಿ ಭಾರತದ ಕುರಿತು ತನ್ನ ವರದಿಯಲ್ಲಿ, ಸಿಇಆರ್‌ಡಿ/ಸಿ/ಭಾರತ/ಸಿಒ/19, 2007, ಪ್ಯಾರಾ 26)*

## ದೌರ್ಜನ್ಯ ಪ್ರಕರಣಗಳನ್ನು ನಾಲ್ಕು ಹಂತದಲ್ಲಿ ನಿಭಾಯಿಸಲಾಗುತ್ತದೆ, ಇಲ್ಲಿ ಪೋಲೀಸರು ಏನು ಮಾಡುತ್ತಾರೆ?

### 1ನೇ ಹಂತ: ಪ್ರಥಮ ಮಾಹಿತಿ ವರದಿ (ಎಫ್ಐಆರ್)

### ಪ್ರತಿಕ್ರಿಯೆ 1

### ಕೇಸು ದಾಖಲಿಸುವುದಿಲ್ಲ

- ***ಪೋಲೀಸ್ ಜಿಗುಟುತನ!*** ಕೇಸು ದಾಖಲಿಸಲೇಬೇಕೆಂದು ಸರ್ವೋಚ್ಚ ನ್ಯಾಯಾಲಯ ನಿರ್ದೇಶನ ನೀಡಿದೆ. ಆದರೂ ನ್ಯಾಯಾಧೀಶರು ಆದೇಶ ನೀಡುವವರೆಗೂ ಪೋಲಿಸರು ಎಫ್ಐಆರ್ ದಾಖಲಿಸುವುದಿಲ್ಲ. ನ್ಯಾಯಧೀಶರು ಆದೇಶಿಸಿದ ಮೇಲೂ ಪೋಲೀಸರು ಕ್ರಮ ಕೈಗೊಳ್ಳುವುದಿಲ್ಲ. ಹೀಗೆಂದು ನ್ಯಾಯಾಧೀಶರ ಗಮನಕ್ಕೆ ತಂದು, ಅವರು ಪೋಲೀಸ್ ಸೂಪರಿಂಟೆಡೆಂಟುಗಳನ್ನು ತರಾಟೆಗೆ ತೆಗೆದುಕೊಂಡ ಮೇಲಷ್ಟೇ ಎಫ್.ಐ.ಆರ್ ದಾಖಲಾಗುತ್ತದೆ. *(ಮಾನವ ಹಕ್ಕುಗಳ ಕಾವಲುಪಡೆ, ಹಾಳಾದ ವ್ಯವಸ್ಥೆ (ಬ್ರೋಕನ್ ಸಿಸ್ಟಂ): ಭಾರತದ ಪೋಲೀಸ್ ವ್ಯವಸ್ಥೆಯ, ನಿಷ್ಕ್ರಿಯತೆ, ನಿಂದನೆ ಮತ್ತು ಜಿಗುಟುತನ, ನ್ಯೂಯಾರ್ಕ್, 2009, ಪುಟ 45)*
- ಸಿಪಿಐ(ಎಂ) ಪಕ್ಷದ ರಾಜ್ಯ ಕಾರ್ಯದರ್ಶಿಯೊಬ್ಬರ ಪ್ರಕಾರ ರಾಜಸ್ಥಾನ ರಾಜ್ಯದ ಅರಣ್ಯವಾಸಿಗಳ ಮೇಲಿನ ದೌರ್ಜನ್ಯಗಳಲ್ಲಿ, "ಎಲ್ಲಾ ಕೇಸು ದಾಖಲಾದ ಮೇಲೂ ಕ್ರಮ ಕೈಗೊಳ್ಳುವುದಿಲ್ಲ ಹಾಗೂ ಕಾಗ್ನಿಜೇಬಲ್(ಕಾಣುವ) ಅಪರಾಧಗಳನ್ನು ದಾಖಲಿಸುವುದಿಲ್ಲ. ಅರಣ್ಯವಾಸಿಗಳ ಮೇಲಿನ ದೌರ್ಜನ್ಯಗಳಲ್ಲಿ (ಬಹುತೇಕ ಭೂಮಿಯ ಒಡೆತನಕ್ಕೆ ಸಂಬಂಧಿಸಿದ) ಶಿಕ್ಷೆಯ ಪ್ರಮಾಣವೂ ಅತ್ಯಂತ ಕಡಿಮೆ." *('ಹಾಸ್ಟೈಲ್ ಆಕ್ಟ್ಸ್', ಫ್ರಂಟ್‌ಲೈನ್, 4-12-2009, ಪುಟ 13)*
- ಪರಿಶಿಷ್ಟರ ಮೇಲಿನ ದೌರ್ಜನ್ಯದ ಅನೇಕ ಪ್ರಕರಣಗಳಲ್ಲಿ ಪೋಲೀಸರು ಉದ್ದೇಶಪೂರ್ವಕವಾಗಿ ದೌರ್ಜನ್ಯ ತಡೆ ಕಾಯ್ದೆಯನ್ನು ನಿರ್ಲಕ್ಷಿಸಿದ್ದಾರೆ ಮತ್ತು ಎಫ್ಐಆರ್ ದಾಖಲಿಸದಿರುವುದು ಸತ್ಯ. ಈ ಅಂಶವನ್ನು ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಸಚಿವಾಲಯ ಹಾಗೂ ರಾಜ್ಯಗಳಲ್ಲಿ ಗೃಹ ಸಚಿವಾಲಯ ಸ್ಥಾಪಿಸಿರುವ ಮೇಲ್ವಿಚಾರಣೆ ಸಲಹಾ-ಸಮಿತಿಗಳು ಗಣನೆಗೆ ತೆಗೆದುಕೊಂಡಿವೆ. *('ಆಲ್ವೇಸ್ ವಿಕ್ಟಿಮ್ಸ್' ಫ್ರಂಟ್‌ಲೈನ್, 4-12-2009, ಪುಟ 6)*

**ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಸಚಿವಾಲಯದ ಸಲಹಾ ಸಮಿತಿ ಕೆಳಕಂಡ ಶಿಫಾರಸ್ಸುಗಳನ್ನು ಮಾಡಿದೆ:**

- ದೌರ್ಜನ್ಯ ಪ್ರಕರಣದಲ್ಲಿ ಎಫ್ಐಆರ್ ದಾಖಲಿಸಲು ನಿರಾಕರಿಸುವ ಪರಿಶಿಷ್ಟರಲ್ಲದ ಯಾವುದೇ ಅಧಿಕಾರಿ ಮೇಲೆ ಉದ್ದೇಶಪೂರ್ವಕವಾಗಿ ನಿರ್ಲಕ್ಷ ಮಾಡಿದ್ದಕ್ಕೆ, ದೌರ್ಜನ್ಯ ಕಾಯ್ದೆಯ ಸೆಕ್ಷನ್ 4ರಲ್ಲಿ ಶಿಕ್ಷೆಯ ಕ್ರಮವನ್ನು ಕೈಗೊಳ್ಳಬಹುದು.
- ದೌರ್ಜನ್ಯ ಕೇಸುಗಳಲ್ಲಿ ಎಫ್.ಐ.ಆರ್ ದಾಖಲಿಸಲು ದೌರ್ಜನ್ಯಕ್ಕೆ ಒಳಗಾದವರು ಜಾತಿ ಪ್ರಮಾಣ ಪತ್ರ ನೀಡಬೇಕೆಂದು ಪೋಲೀಸ್ ಅಧಿಕಾರಿ ಕೇಳುವಂತಿಲ್ಲ *(ಸಂಖ್ಯೆ. 11011/8/2006–ಪಿಸಿಆರ್(ಡೆಸ್ಕ್), ದಿನಾಂಕ 14/03/2006)*
- ಕಾಯ್ದೆಯ ಅನುಷ್ಠಾನಕ್ಕಾಗಿ ಪೋಲಿಸರನ್ನು ಸೂಕ್ಷ್ಮಮತಿಗಳನ್ನಾಗಿಸಬೇಕು *(ಸಂಖ್ಯೆ. 11012/3/2004.ಪಿಸಿಆರ್ (ಡೆಸ್ಕ್), ದಿನಾಂಕ 28/12/2004)*
- ದೌರ್ಜನ್ಯಪೀಡಿತವೆನ್ನಲಾದ ಪ್ರದೇಶಗಳಲ್ಲಿ ಕನಿಷ್ಠ ವಿಶೇಷ ಪೋಲಿಸ್ ಠಾಣೆಗಳನ್ನು ಸ್ಥಾಪಿಸಬಹುದು ಮತ್ತು ಪೋಲೀಸರನ್ನು ನಿಯೋಜಿಸಿ ಮುನ್ನೆಚ್ಚರಿಕೆ ಕ್ರಮಗಳನ್ನು ಕೈಗೊಳ್ಳಬಹುದು *(ಆದೇಶ ಸಂಖ್ಯೆ. 110201/1/2003–ಪಿಸಿಆರ್(ಡೆಸ್ಕ್), ದಿನಾಂಕ 7/10/2003)*

***ಆದರೆ ರಾಜ್ಯ/ಕೇಂದ್ರಾಡಳಿತ ಸರ್ಕಾರಗಳಿಗೆ ನೀಡಿದ ಈ ಸಲಹೆಗಳನ್ನು ಯಾವ ರೀತಿ ಪರಿಪಾಲಿಸಿವೆ?***

ಪೋಲೀಸರು ದೌರ್ಜನ್ಯ ಪ್ರಕರಣಗಳು ದಾಖಲಾಗದಿರಲು ಏನು ಮಾಡುತ್ತಾರೆ?

- ದೌರ್ಜನ್ಯಕ್ಕೊಳಗಾದ ಪರಿಶಿಷ್ಟರನ್ನು ನಿರ್ಲಕ್ಷಿಸುವ ಮೂಲಕ
- ಪರಿಶಿಷ್ಟರನ್ನು ಹೆದರಿಸಿ, ರಾಜಿ ಮಾಡಿಸಿ ಪ್ರಕರಣ ದಾಖಲಿದಂತೆ ಮಾಡುತ್ತಾರೆ.
- ಹಣ ಕೊಡಿಸಿ ರಾಜಿ ಮಾಡಿಕೊಳ್ಳುವಂತೆ ಒತ್ತಡ ಹೇರುತ್ತಾರೆ
- ದೌರ್ಜನ್ಯಕ್ಕೊಳಗಾದವರನ್ನು ಸುಮ್ಮನೆ ಇರುವಂತೆ ಹೆದರಿಸುತ್ತಾರೆ ಇಲ್ಲವೇ ಅವರ ಮೇಲೆ ಇನ್ನಷ್ಟು ಹಿಂಸೆಯಾಗುವಂತೆ ಪ್ರಚೋದನೆ ನೀಡುತ್ತಾರೆ.
- ದುಷ್ಕರ್ಮಿಗಳಿಗೆ ಶಿಕ್ಷೆ ತಪ್ಪಿಸಲು ದೌರ್ಜನ್ಯ ತಡೆ ಕಾಯ್ದೆಯಲ್ಲಿ ಕೇಸು ದಾಖಲಿಸಲು ನಿರಾಕರಿಸುತಾರೆ.
- ದುಷ್ಕರ್ಮಿಗಳೊಟ್ಟಿಗೆ ಕೈಜೋಡಿಸಿ, ದೌರ್ಜನ್ಯಕ್ಕೊಳಗಾದವರು ರಾಜಿಯಾಗುವಂತೆ ಮಾಡಲು ಅವರ ಮೆಲೆ ಸುಳ್ಳು ಆರೋಪ ಹೊರಿಸಿ ಕೇಸು ದಾಖಲಿಸಿ ಒತ್ತಡ ತರುತ್ತಾರೆ.
- ದೌರ್ಜನ್ಯಕ್ಕೆ ಒಳಗಾದವರ ಪ್ರಕರಣಗಳನ್ನು ಕೈಬಿಡಲು ದುಷ್ಕರ್ಮಿಗಳಿಂದ ಲಂಚ ಪಡೆಯುತ್ತಾರೆ
- ಕಾನೂನಿನಂತೆ ಕ್ರಮ ಜರುಗಿಸದೆ ದುಷ್ಕರ್ಮಿ ನಿರಾಪರಾಧಿಯೆಂದು ಘೋಷಿಸುವುದು.
- ಕ್ರಮಬದ್ಧವಾದ ನ್ಯಾಯ ದೊರಕಿಸಿವುದರ ಬದಲಿಗೆ ದುಷ್ಕರ್ಮಿಯನ್ನು ಹೊಡೆದು ಬಡಿಯುತ್ತಾರೆ.
- ದೌರ್ಜನ್ಯವಾದ ಸ್ಥಳಕ್ಕೆ ತಡವಾಗಿ ಬರುತ್ತಾರೆ

*(ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ, ವರದಿ–ಪರಿಶಿಷ್ಟ ಜಾತಿಯವರ ವಿರುದ್ಧ ದೌರ್ಜನ್ಯ ತಡೆ, ನವ ದೆಹಲಿ, 2002, ಪುಟ, ಪ್ಯಾರಾ 113–4; ಸಾಕ್ಷಿ, ಮಾನವ ಹಕ್ಕುಗಳ ಕಾವಲುಪಡೆ–ಆಂಧ್ರ ಪ್ರದೇಶ., ದಲಿತ ಮಾನವ ಹಕ್ಕುಗಳ ಮೇಲ್ವಿಚಾರಣೆ 2000, ಸಿಕಂದರಾಬಾದ್, 2000, ಪುಟ, ಪ್ಯಾರಾ 96–7; ಮಾನವ ಹಕ್ಕುಗಳ ಕಾವಲುಪಡೆ, ಬ್ರೋಕನ್ ಪೀಪಲ್: ಭಾರತದಲ್ಲಿ ಅಸ್ಪೃಶ್ಯರ ವಿರುದ್ಧ ಜಾತಿಯ ಹಿಂಸಾಚಾರ, ನ್ಯೂಯಾರ್ಕ್, 1999, ಪುಟ, ಪ್ಯಾರಾ 189–91; ಎಂಎ ಬ್ರಿಟೋ, ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಗಳ (ದೌರ್ಜನ್ಯ ತಡೆ) ಕಾಯ್ದೆ 1989ರ ಅನುಷ್ಠಾನ (ತಮಿಳ್), ಮಧುರೈ: ಡಾಕ್ಟರ್ ಅಂಬೇಡ್ಕರ್ ಸಾಂಸ್ಕೃತಿಕ ಅಕಾಡೆಮಿ, 2007, ಪುಟಪ್ಯಾರಾ 167–8, ಅಲಾಸಿಯಸ್ ಇರುದಯಂ ಮತ್ತು ಇತರರು, ದಲಿತ ಮಹಿಳೆಯರು ಮಾತನಾಡಿದರು: ಭಾರತದಲ್ಲಿ ದಲಿತ ಮಹಿಳೆಯರ ವಿರುದ್ಧ ಹಿಂಸಾಚಾರ, ಚೆನ್ನೈ: ಐಡಿಇಎಎಸ್, ಎನ್‌ಸಿಡಿಹೆಚ್ಆರ್ ಮತ್ತು ಎನ್‌ಎಫ್‌ಡಿಡಬ್ಲ್ಯು, 2006, ಪುಟ, ಪ್ಯಾರಾ 299–501)*

*ದೌರ್ಜನ್ಯಕ್ಕೊಳಗಾದವರ ಮೌನ*

"ಕಾನೂನು ಮತ್ತು ಸಿಗುವ ಪರಿಹಾರ ಗೊತ್ತಿಲ್ಲದೆ, ಜಾತಿ ಹಿಂದೂವಾದಿಗಳ ದ್ವೇಷಕ್ಕೆ ಹೆದರಿ, ಪೋಲೀಸ್ ಮತ್ತು ನ್ಯಾಯಾಂಗದಲ್ಲಿ ಅಪನಂಬಿಕೆಯಿಂದ ಪರಿಶಿಷ್ಟರು ಅನ್ಯಾಯಕ್ಕೊಳಗಾದರೂ ಕಾನೂನು ಬಾಹಿರ ರಾಜಿಗೆ ಮೌನವಾಗಿ ಸಮ್ಮತಿಸುತ್ತಿದ್ದಾರೆ.

*ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ, ವರದಿ–ಪರಿಶಿಷ್ಟ ಜಾತಿಯವರ ವಿರುದ್ಧ ದೌರ್ಜನ್ಯ ತಡೆ, ನವ ದೆಹಲಿ, 2002, ಪುಟ 91*

*ಪ್ರಕರಣಗಳು ದಾಖಲಾಗುವುದಿಲ್ಲ ಏಕೆ? ಇಲಾಖೆಯೇ ಸತ್ಯಾಂಶ ಮರೆಮಾಚುತ್ತದೆ*

**"ಕೇಸು ದಾಖಲಾಗದಿರುವುದು ಜಾತಿ ಪಕ್ಷಪಾತ ಮತ್ತು ಭ್ರಷ್ಟಾಚಾರವನ್ನು ಪ್ರತಿಬಿಂಬಿಸುತ್ತದೆ, ಜೊತೆಗೆ, ಪೋಲೀಸ್ ಠಾಣೆಯೊಂದರಲ್ಲಿ ಅಪರಾಧಗಳನ್ನು ತಗ್ಗಿಸುವಂತೆ ಪೋಲೀಸರ ಮೇಲೆ ಸದಾಕಾಲ ಇರುವ ಒತ್ತಡವೂ ಒಂದು ಅಂಶ. ಗುಜರಾತಿನ ಸರ್ಕಾರೇತರ ಸಂಸ್ಥೆಯೊಂದು ವರದಿ ಮಾಡಿರುವಂತೆ, ಪೋಲೀಸ್ ದಾಖಲೆಯಂತೆ, ನಾಲ್ಕು ವರ್ಷಗಳ ಕಾಲ ಕೇಸುಗಳನ್ನು ಸರಿಯಾಗಿ ದಾಖಲಿಸಿದಕ್ಕಾಗಿ ದೌರ್ಜನ್ಯ ಕೇಸುಗಳಲ್ಲಿ ಶೇ 95% ಏರಿಕೆಯಾಯಿತು. ಆದರೆ, ಪೋಲಿಸರು ನೀಡಿದ ವರದಿಗಳಲ್ಲಿ ಅಪರಾಧ ಪ್ರಮಾಣ 1.35% ತಗ್ಗಿದೆ ಎನ್ನಲಾಗಿತ್ತು. ಅಪರಾಧದ ಪ್ರಮಾಣ ಹೆಚ್ಚಾಗುವುದು ಪೋಲಿಸ್ ಆಡಳಿತದಲ್ಲಿ ಒಳ್ಳೆಯ ಲಕ್ಷಣವಲ್ಲ. ಹಿರಿಯ ಪೋಲಿಸ್ ಅಧಿಕಾರಿಗಳು ತಮ್ಮ ಕೆಳ ಅಧಿಕಾರಿಗಳು ಸರಿಯಾಗಿ ಕೆಲಸ ಮಾಡುತ್ತಿಲ್ಲ ಎಂದು ಭಾವಿಸುತ್ತಾರೆ."**

*(ಮಾನವ ಹಕ್ಕುಗಳ ರಾಷ್ಟ್ರೀಯ ಆಯೋಗ, ಪರಿಶಿಷ್ಟ ಜಾತಿಯವರ ವಿರುದ್ಧ ದೌರ್ಜನ್ಯ ತಡೆ, ನವದೆಹಲಿ, 2002, ಪುಟ 33)*

## ಪ್ರತಿಕ್ರಿಯೆ 2

## ದೌರ್ಜನ್ಯ ಪ್ರಕರಣಗಳನ್ನು, ದೌರ್ಜನ್ಯ ತಡೆ ಕಾಯ್ದೆಯಲ್ಲಿ ದಾಖಲಿಸುವ ಬದಲಿಗೆ ಐ.ಪಿ.ಸಿಯಡಿಯಲ್ಲಿ ದಾಖಲಿಸುತ್ತಾರೆ.

- ರಾಷ್ಟ್ರೀಯ ಅಪರಾಧ ದಾಖಲೆ ಬ್ಯೂರೋ ಪ್ರಕಾರ, 1992–2000 ಅವಧಿಯಲ್ಲಿ ಶೇ. 67% ಅಪರಾಧಗಳು ಮತ್ತು 2001–2007ರಲ್ಲಿ 64.9% ಅಪರಾಧಗಳನ್ನು ದೌರ್ಜನ್ಯ ತಡೆ ಕಾಯ್ದೆಯಲ್ಲಿ ದಾಖಲಾಗಿಲ್ಲ *(ಎನ್‌ಸಿಆರ್‌ಬಿ, ಭಾರತದಲ್ಲಿ ಅಪರಾಧಗಳು 1992–2007, 1993–2008, ನವದೆಹಲಿ)*
- **ಗುಜರಾತ್:** 11 ಜಿಲ್ಲೆಗಳ ದೌರ್ಜನ್ಯ ಪೀಡಿತ ಪ್ರದೇಶಗಳಲ್ಲಿ ಅಧ್ಯಯನ ಮಾಡಲಾಗಿ 1990–1993ರಲ್ಲಿ ಶೇ. 36% ದೌರ್ಜನ್ಯ ಕೇಸುಗಳನ್ನು ದೌರ್ಜನ್ಯ ತಡೆ ಕಾಯ್ದೆಯಲ್ಲಿ ದಾಖಲು ಮಾಡಲಿಲ್ಲ ಎಂಬ ಸಂಗತಿ ಬಹಿರಂಗಗೊಂಡಿದೆ. ಶೇ. 84.4% ಪ್ರಕರಣಗಳನ್ನು ಈ ಕಾಯ್ದೆಯ ಬದಲಾಗಿ, ಘಟನೆಯ ಭೀಕರತೆಯಿಂದ ತಪ್ಪು ನಿಯಮಗಳಲ್ಲಿ ದಾಖಲಿಸಲಾಗಿದೆ. *(ಮಾರ್ಟಿನ್ ಮ್ಯಾಕ್ವಾನ್ ಮತ್ತು ಹರ್ಷದ್ ದೇಸಾಯಿ, ಗುಜರಾತಿನಲ್ಲಿ ಪರಿಶಿಷ್ಟರ ಮೇಲಿನ ದೌರ್ಜನ್ಯ: ಸಾಕ್ಷ್ಯ ವರದಿ ಮತ್ತು ಮೌಲ್ಯಮಾಪನ, ಸೆಂಟರ್ ಫಾರ್ ಸೋಶಿಯಲ್ ಸ್ಟಡೀಸ್ 1997, ಪುಟ 78)*

**ದೌರ್ಜನ್ಯ ತಡೆ ಕಾಯ್ದೆಯಲ್ಲಿ ಪ್ರಕರಣ ದಾಖಲಿಸದಿರಲು–ಪೋಲೀಸ್ ತಂತ್ರ**

**(i) ಅಡ್ಡದಾರಿಯ ತಂತ್ರದಲ್ಲಿ** ಎರಡು ವಿಧಾನಗಳಿವೆ:

- ಐ.ಪಿಸಿ ಮತ್ತು ಸಿಪಿಆರ್ ಕಾಯ್ದೆಯಲ್ಲಿ ದಾಖಲಿಸುವುದು, ಇದರಿಂದ ದೌರ್ಜನ್ಯ ತಡೆ ಕಾಯ್ದೆಗಿಂತ ಕಡಿಮೆ ಶಿಕ್ಷೆ ಆಗುತ್ತದೆ, ಹಾಗೂ ದೌರ್ಜನ್ಯಕ್ಕೆ ಒಳಗಾದ ಜನರಿಗೆ ಪರಿಹಾರ ಸಿಗುವುದಿಲ್ಲ.
- ಕೆಲವು ದೌರ್ಜನ್ಯಗಳು ಸಿಪಿಆರ್ ಕಾಯ್ದೆಯಲ್ಲಿ ದಾಖಲಿಸಲು ಆಗದಿದ್ದರೆ ಐ.ಪಿ.ಸಿ ಅಡಿ, ಎಫ್.ಐ.ಆರ್ ದಾಖಲಿಸುತ್ತಾರೆ. ಐ.ಪಿ.ಸಿಯಲ್ಲಿ ಸಹ ಶಿಕ್ಷೆಯ ತೀವ್ರತೆ ದೌರ್ಜನ್ಯ ತಡೆ ಕಾಯ್ದೆಗಿಂತ ಕಡಿಮೆ ಇರುತ್ತದೆ. ಹೀಗೆ ಈ ಕಾಯ್ದೆಯ ಅನುಷ್ಠಾನವನ್ನು ಗಂಭೀರವಾಗಿ ತೆಗೆದುಕೊಳ್ಳುವುದಿಲ್ಲ. *(ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ, ಪರಿಶಿಷ್ಟ ಜಾತಿಯವರ ವಿರುದ್ಧ ದೌರ್ಜನ್ಯ ತಡೆಯ ವರದಿ, ನವದೆಹಲಿ, 2002, ಪುಟ.45)*

**(ii) ವಾಸ್ತವಾಂಶ ತಿರುಚುವ ತಂತ್ರ:** ದೌರ್ಜನ್ಯಕ್ಕೆ ಪರಿಶಿಷ್ಟರು ಜಾತಿ ನಿಂದನೆ ಮಾಡಿದರೆಂದು ಸ್ಪಷ್ಟವಾಗಿ ತಿಳಿಸಲಿಲ್ಲವೆಂದು ಪೋಲೀಸರು ಹೇಳುತ್ತಾರೆ. ಈ ರೀತಿಯ ಅಗತ್ಯ ಇಲ್ಲದಿರುವ ಕಾರಣ ಕಾಯ್ದೆಯನ್ನು ತಿರುಚಿ ಅರ್ಥೈಸಲಾಗುತ್ತದೆ. ಕಾಯ್ದೆಯ ಸೆಕ್ಷನ್ 3(1)(x)ರಲ್ಲಿ ಇದರ ಅಗತ್ಯವಿದೆ ಬೇರೆ ಸೆಕ್ಷನ್‌ಗಳಲ್ಲಿ ಇಲ್ಲ. *(ಸಾಕ್ಷಿ ಮಾನವ ಹಕ್ಕುಗಳ ಕಾವಲುಪಡೆ – ಆಂಧ್ರಪ್ರದೇಶ, ದಲಿತ ಮಾನವ ಹಕ್ಕುಗಳ ಮೇಲ್ವಿಚಾರಣೆ 2000, ಸಿಕಂದರಾಬಾದ್, 2000, ಪುಟ 98)*

**ದೌರ್ಜನ್ಯ ತಡೆ ಕಾಯ್ದೆಯಲ್ಲಿ ಎಫ್.ಐ.ಆರ್ ದಾಖಲಾಗದಿದ್ದರೆ ಪರಿಣಾಮ**

- ದೌರ್ಜನ್ಯ ಪ್ರಕರಣಗಳಲ್ಲಿ ಹೆಚ್ಚು ಅನುಭವ ಮತ್ತು ಸೂಕ್ಷ್ಮತೆಯಿಲ್ಲದ ಸಬ್‌ಇನ್ಸ್‌ಪೆಕ್ಟರ್ ಅಥವಾ ಇನ್ಸ್‌ಪೆಕ್ಟರ್‌ಗಳು ತನಿಖೆ ಮಾಡುತ್ತಾರೆ.
- ದುಷ್ಕರ್ಮಿಗಳಿಗೆ ಕಡಿಮೆ ಶಿಕ್ಷೆಯಾಗುತ್ತದೆ
- ದೌರ್ಜನ್ಯಕ್ಕೊಳಗಾದವರಿಗೆ ಯಾವ ಪರಿಹಾರವೂ ಸಿಗುವುದಿಲ್ಲ
- ದುಷ್ಕರ್ಮಿಗಳಿಗೆ ಬೇಲ್ ಸಿಗುವ ಸಾಧ್ಯತೆ ಹೆಚ್ಚು

**"ದೌರ್ಜನ್ಯ ತಡೆ ಕಾಯ್ದೆ ಎಷ್ಟು ಪರಿಣಾಮಕಾರಿಯೋ ಅಷ್ಟು ಅನುಷ್ಠಾನ ಆಗಿಲ್ಲವೆಂದು ನನಗೆ ಹೇಳಿದ್ದಾರೆ. ದೌರ್ಜನ್ಯ ತಡೆ ಕಾಯ್ದೆ ಅತಿ ಬಲಿಷ್ಟ ಕಾಯ್ದೆ, ಇದರ ಬದಲಿಗೆ ಐ.ಪಿ.ಸಿಯಲ್ಲಿ ಕೇಸುಗಳು ದಾಖಲಾಗುತ್ತವೆ. ಎಲ್ಲಕ್ಕಿಂತ ಹೆಚ್ಚಾಗಿ ಮಾಮೂಲಿ ಅಪರಾಧ ಮತ್ತು ದೌರ್ಜನ್ಯ ತಡೆ ಕಾಯ್ದೆಯಲ್ಲಿ ಬರುವ ಕೇಸುಗಳಲ್ಲಿ ವ್ಯತ್ಯಾಸ ಕಡಿಮೆಯಾಗಿಲ್ಲ.**

*ಪ್ರಧಾನ ಮಂತ್ರಿ ಮನಮೋಹನ್ ಸಿಂಗ್, ಅಂತರ ರಾಜ್ಯಗಳ ಸಭೆಯಲ್ಲಿ, ನವದೆಹಲಿ, 2006*

## ದೌರ್ಜನ್ಯ ತಡೆ ಕಾಯ್ದೆಯಡಿಯಲ್ಲಿ ಸರಿಯಾದ ಕಲಂಗಳಡಿಯಲ್ಲಿ ಪ್ರಕರಣಗಳನ್ನು ದಾಖಲು ಮಾಡಿಕೊಳ್ಳದೇ ಇರುವುದು

- ದೌರ್ಜನ್ಯದ ಅನೇಕ ಪ್ರಕರಣಗಳಲ್ಲಿ, ಉದ್ದೇಶಪೂರಕವಾಗಿ ಪೋಲೀಸರು ಕಾಯ್ದೆಯ ತಪ್ಪು ಸೆಕ್ಷನ್‌ಗಳನ್ನು ಹಾಕುತ್ತಾರೆ. ಕೊಲೆ, ಅತ್ಯಾಚಾರ, ಆಸ್ತಿ ನಾಶ, ಭೂಮಿಯ ಒಡೆತನ ಕಸಿದುಕೊಂಡ, ಕುಡಿಯುವ ನೀರಿನ ಮೂಲ ಮಾಲಿನ್ಯಗೊಳಿಸಿದ ಗಂಭೀರ ಸ್ವರೂಪದ ಕೇಸುಗಳಲ್ಲಿ ಸೆಕ್ಷನ್ 3(1)(x) ಅಡಿಯಲ್ಲಿ ಕೇಸು ದಾಖಲಿಸುತ್ತಾರೆ. ಇದರಿಂದ ಪರಿಶಿಷ್ಟರನ್ನು ಅವಮಾನ ಮಾಡಿದರೆ, ಚುಚ್ಚಿ ಮಾತನಾಡಿದರೆ ಸಿಗುವ ಸಣ್ಣ ಶಿಕ್ಷೆ ಆಗುತ್ತದೆ. *(ಪರಿಶಿಷ್ಟರ ವಿರುದ್ಧ ದೌರ್ಜನ್ಯಕ್ಕೆ ಜನರ ಆಯೋಗ, ಕರಡು ವೀಕ್ಷಣೆ, ಮತ್ತು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರ ವಿರುದ್ಧ ದೌರ್ಜನ್ಯಕ್ಕೆ ಪರಿಣಾಮಕಾರಿ ಕ್ರಮ ಕೈಗೊಳ್ಳಲು ಸಲಹೆಗಳು, ನವದೆಹಲಿ, 2008, ಪುಟ2)*
- ಆಯೋಗಕ್ಕೆ 112 ಕೇಸುಗಳು ಬಂದಿವೆ. ಅದರಲ್ಲಿ ದೌರ್ಜನ್ಯ ತಡೆ ಮತ್ತು ಪಿಸಿಆರ್ ಕಾಯ್ದೆಯನ್ನು ಕೇವಲ 49 (43.8%) ಕೇಸುಗಳಿಗೆ ಸರಿಯಾಗಿ ಬಳಸಿದ್ದರು, ಉಳಿದ 63 ಕೇಸುಗಳಲ್ಲಿ (56.3%), ಈ ಕಾಯ್ದೆಗಳ ಸರಿಯಾದ ಸೆಕ್ಷನ್ ಬಳಸಿರಲಿಲ್ಲ ಅಥವಾ ತಪ್ಪು ಸೆಕ್ಷನ್ ಬಳಸಿದ್ದರು. *(ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ರಾಷ್ಟ್ರೀಯ ಆಯೋಗ, ಎರಡನೇ ವರದಿ 1993–94, ನವದೆಹಲಿ, 1996, ಪ್ಯಾರಾ 7.35)*

*ಗುಜರಾತ್ ಅಧ್ಯಯನ*

- ಸೆಕ್ಷನ್ 3(1) (iv) : ಪರಿಶಿಷ್ಟರ ಭೂಮಿ ಹಕ್ಕು ಉಲ್ಲಂಘನೆ.... ***181 ರಲ್ಲಿ 37 (20.4%) ಪ್ರಕರಣಗಳಿಗೆ ಮಾತ್ರ ಬಳಸಲಾಗಿದೆ.***
- ಸೆಕ್ಷನ್ 3(1)(v) : ಪರಿಶಿಷ್ಟರ ಮನೆ–ಸೈಟ್, ಕೃಷಿ, ನೀರು ಮತ್ತು ಕುಡಿಯುವ ನೀರಿನ ಜಗಳ.... ***170 ರಲ್ಲಿ 113 (66.5%) ಪ್ರಕರಣಗಳಿಗೆ ಮಾತ್ರ ಬಳಸಲಾಗಿದೆ)***
- ಸೆಕ್ಷನ್ 3(1)(xi) : ಪರಿಶಿಷ್ಟ ಮಹಿಳೆಯ ಚಾರಿತ್ರವನ್ನು ಕೆದಕುವ ಅಪರಾಧ....***189 ರಲ್ಲಿ 92(48.7%) ಪ್ರಕರಣಗಳಿಗೆ ಬಳಸಲಾಗಿದೆ***
- ಸೆಕ್ಷನ್ 3(2)(iii) : ಪರಿಶಿಷ್ಟರ ಸೊತ್ತುಗಳಿಗೆ ಬೆಂಕಿ ಹಚ್ಚುವ ಅಪರಾಧ..... ***37 ರಲ್ಲಿ ಕೇವಲ 1 (2.7%) ಪ್ರಕರಣಕ್ಕೆ ಮಾತ್ರ ಬಳಸಲಾಗಿದೆ***
- ಸೆಕ್ಷನ್ 3(2)(v) : ಆತ್ಮಹತ್ಯೆಗೆ ಪ್ರಚೋದನೆ ತೀವ್ರ ಗಾಯ, ಅತ್ಯಾಚಾರ, ರಾಬರಿ, ಕೊಲೆ, ಅಪಹರಣ ಇತ್ಯಾದಿ....***190 ರಲ್ಲಿ 10(5.5%) ಪ್ರಕರಣಗಳಿಗೆ ಬಳಸಲಾಗಿದೆ***
- ಸೆಕ್ಷನ್ 3(2)(vii) : ದೌರ್ಜನ್ಯಕ್ಕೆ ಕಾರಣವಾಗುವ ಸರ್ಕಾರಿ ಅಧಿಕಾರಿ.....***26 ರಲ್ಲಿ ಒಂದು ಕೇಸನ್ನೂ ಈ ಸೆಕ್ಷನ್ ಅಡಿಯಲ್ಲಿ ದಾಖಲಿಸಿಲ್ಲ***

*(ಮಾರ್ಟಿನ್ ಮಾಕವನ್ ಮತ್ತು ಹರ್ಷದ್ ದೇಸಾಯಿ, ಗುಜರಾತಿನಲ್ಲಿ ಪರಿಶಿಷ್ಟರ ವಿರುದ್ಧ ದೌರ್ಜನ್ಯ 1990–93: ಸಾಕ್ಷ್ಯ ವರದಿ ಹಾಗೂ ಮೌಲ್ಯಮಾಪನ, ಅಹ್ಮದಾಬಾದ್: ಸಾಮಾಜಿಕ ಅಧ್ಯಯನ ಕೇಂದ್ರ, 1997, ಪುಟ, ಪ್ಯಾರಾ 81–2)*

ತಮಿಳುನಾಡಿನ ಅಧ್ಯಯನ

ದೌರ್ಜನ್ಯ ತಡೆ ಕಾಯ್ದೆಯಲ್ಲಿ ಸರಿಯಾದ ಸೆಕ್ಷನ್ ಬಳಸದಿರುವ ಕೇಸುಗಳು...***386 ದೌರ್ಜನ್ಯಗಳಲ್ಲಿ 171(44.3%) ಕ್ಕೆ ಮಾತ್ರ ಬಳಸಲಾಗಿದೆ***

- ಸೆಕ್ಷನ್ 3(1)(x) : ಈ ಸೆಕ್ಷನ್ ಪ್ರಕಾರ ಅತಿ ಕಡಿಮೆ ಶಿಕ್ಷೆಯಾಗುತ್ತದೆ... ***ಬಹುತೇಕ ಎಫ್.ಐ.ಆರ್‌ಗಳಲ್ಲಿ(289) ಬಳಸಲಾಗಿದೆ (74.9%)***
- ಸೆಕ್ಷನ್ 3(1)(xi) : ಪರಿಶಿಷ್ಟ ಮಹಿಳೆಯ ಚಾರಿತ್ರಕ್ಕೆ ಭಂಗ....***50 ರಲ್ಲಿ ಕೇವಲ 9(18%) ಕ್ಕೆ ಬಳಸಲಾಗಿದೆ***
- ಸೆಕ್ಷನ್ 3(1)(xiv) : ಪರಿಶಿಷ್ಟರು ಸಾರ್ವಜನಿಕ ಸ್ಥಳ ಬಳಸದಂತೆ ತಡೆದಿರುವ ಪ್ರಕರಣ.... ***32 ರಲ್ಲಿ ಕೇವಲ 2(6.3%) ಪ್ರಕರಣಗಳಿಗೆ ಬಳಸಲಾಗಿದೆ***
- ಸೆಕ್ಷನ್ 3(2)(v) : ಪರಿಶಿಷ್ಟರ ಕೊಲೆ.... ***41 ರಲ್ಲಿ ಕೇವಲ 11 (26.8%)ಕ್ಕೆ ಮಾತ್ರ ಬಳಸಲಾಗಿದೆ***

*(ಎಂ.ಎ. ಬ್ರಿಟ್ಟೋ, ದೌರ್ಜನ್ಯ ಕಾಯ್ದೆ ಅನುಷ್ಠಾನ 1989 (ತಮಿಳ್), ಮಧುರೈ: ಡಾಕ್ಟರ್ ಅಂಬೇಡ್ಕರ್ ಸಾಂಸ್ಕೃತಿಕ ಅಕಾಡೆಮಿ, 2007 ಪುಟ 179)*

*ಆಂಧ್ರಪ್ರದೇಶದ ಅಧ್ಯಯನ*

**ಆಂಧ್ರಪ್ರದೇಶದಲ್ಲಿ, 1992–2002 ಅವಧಿಗೆ ಪರಿಶಿಷ್ಟರ ಮೇಲೆ ಆಗಿರುವ 101 ದೌರ್ಜನ್ಯಗಳ ಅಧ್ಯಯನ:**

- ಹೆಚ್ಚಿನ ಪ್ರಕರಣಗಳಲ್ಲಿ (43.6%) ಎಫ್.ಐ.ಆರ್ ದಾಖಲಿಸುವಾಗ ಸರಿಯಾದ ಸೆಕ್ಷನ್ ಬಳಸಿಲ್ಲ.
- 1/5 ರಷ್ಟು ಪ್ರಕರಣಗಳಲ್ಲಿ (17.8%) ಸರಿಯಾದ ಕಾಯ್ದೆ ಮತ್ತು ಸೆಕ್ಷನ್ ಬಳಸಿ ಕೇಸು ದಾಖಲಿಸಿಲ್ಲ.
- ಸುಮಾರು 1/3ರಷ್ಟು ಕೇಸುಗಳನ್ನು (28.7%) ದಾಖಲಿಸದಿರುವುದು ಅಘಾತಕಾರಿ.
- ಕರ್ತವ್ಯ ನಿರ್ಲಕ್ಷತೆಗಾಗಿ ದೌರ್ಜನ್ಯ ಕಾಯ್ದೆಯ ಸೆಕ್ಷನ್ 4ರಲ್ಲಿ 10 ಕೇಸುಗಳು ದಾಖಲಾಗಿವೆ.

*(ಸಾಕ್ಷಿ ಮಾನವ ಹಕ್ಕುಗಳ ಕಾವಲುಪಡೆ–ಆಂಧ್ರಪ್ರದೇಶ, ದಲಿತ ಮಾನವ ಹಕ್ಕುಗಳ ಮೇಲ್ವಿಚಾರಣೆ 2000–2003, ಸಿಕಂದರಾಬಾದ್, 2003, ಪುಟ 76)*

**ದೌರ್ಜನ್ಯ ತಡೆ ಕಾಯ್ದೆಯ ಸರಿಯಾದ ಸೆಕ್ಷನ್ ಬಳಸದಿದ್ದರೆ ಆಗುವ ಪರಿಣಾಮಗಳು?**

- ಅಪರಾಧದ ಗಂಭೀರತೆ ತಗ್ಗುವುದರಿಂದ ಕಡಿಮೆ ಶಿಕ್ಷೆ ಗ್ಯಾರಂಟಿ
- ಅಪರಾಧದ ಗಂಭೀರತೆ ತಗ್ಗುವ ಸೆಕ್ಷನ್ ಅಡಿ ಕೇಸು ದಾಖಲಿಸಿದರೆ ದೌರ್ಜನ್ಯಕ್ಕೆ ಒಳಗಾದವರು ದೊರೆಯುವ ಹೆಚ್ಚಿನ ಪರಿಹಾರ ಸಿಗುವುದಿಲ್ಲ
- ಇದರಿಂದಾಗಿ ಮುಂದಿನ ಎಲ್ಲಾ ಕೇಸುಗಳಲ್ಲಿ ಕರ್ತವ್ಯ ನಿರ್ಲಕ್ಷಿಸಲು ಪೋಲೀಸರಿಗೆ ಉತ್ತೇಜನ ದೊರೆಯುತ್ತದೆ.
- ಮುಂದೆ ಪ್ರಬಲ ಜಾತಿಯವರು ಮಾಡುವ ದೌರ್ಜನ್ಯದಲ್ಲಿ ಪೋಲೀಸರು ಕೈ ಜೋಡಿಸಲೂ ಉತ್ತೇಜನ ದೊರೆಯುತ್ತದೆ.

**ಪ್ರಥಮ ಮಾಹಿತಿ ವರದಿಯನ್ನು ಸರಿಯಾದ ಕಾಯ್ದೆ ಕಲಂಗಳ ಅಡಿಯಲ್ಲಿ ದಾಖಲು ಮಾಡಿದರೆ ಖಂಡಿತವಾಗಿಯೂ ಪ್ರಕರಣಗಳ ಕುರಿತು ಕೋರ್ಟುಗಳಲ್ಲಿ ಬಲವಾಗಿ ಸಮರ್ಥಿಸಿಕೊಳ್ಳಬಹುದು ಹಾಗೂ ಆರೋಪವನ್ನು ಸಾಬೀತುಪಡಿಸಬಹುದು**

*ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣದ ಸಂಸತ್ತು ಸಮಿತಿ, 4ನೇ ವರದಿ 2004–05, ನವದೆಹಲಿ, 2005, ಪ್ಯಾರಾ 3.19*

## ಪ್ರತಿಕ್ರಿಯೆ 4: ಸುಳ್ಳು ಆರೋಪ ಹೊರಿಸಿ ಪರಿಶಿಷ್ಟರ ಮೇಲೆ ಪ್ರತಿಕೇಸು

- ದೌರ್ಜನ್ಯಕ್ಕೊಳಗಾದವರು ಕೇಸು ದಾಖಲಿಸಲು ಒತ್ತಾಯಿಸಿದರೆ ಅವರ ಮೇಲೆಯೇ ಕೇಸು ದಾಖಲಿಸುವ ವಿಶಿಷ್ಟ ತಂತ್ರ ತಮಿಳುನಾಡಿನ ಪೋಲೀಸರು ಕಂಡುಕೊಂಡಿದ್ದಾರೆ. *(ಎಂ.ಎ. ಬ್ರಿಟ್ಟೋ, ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡಗಳ (ದೌರ್ಜನ್ಯ ತಡೆ) ಕಾಯ್ದೆ 1989ರ ಅನುಷ್ಠಾನ (ತಮಿಳ್), ಮಧುರೈ, ಡಾಕ್ಟರ್ ಅಂಬೇಡ್ಕರ್ ಸಾಂಸ್ಕೃತಿಕ ಅಕಾಡೆಮಿ, 2007, ಪುಟ 167)*

**ನ್ಯಾಯಮೂರ್ತಿ ಪುಣ್ಣಯ್ಯ ಆಯೋಗದ ವರದಿ:**
**ಆರೋಪಿ ಮತ್ತು ಪೋಲೀಸರು ಶಾಮೀಲಾಗಿ, ದೌರ್ಜನ್ಯಕ್ಕೊಳಗಾದ ಪರಿಶಿಷ್ಟರನ್ನು ನಿರ್ಬಂಧಿಸುತ್ತಾರೆ**

- ಠಾಣೆಯಲ್ಲಿ ಪೋಲೀಸ್ ಮುಖ್ಯಸ್ಥರಲ್ಲಿ ದೌರ್ಜನ್ಯಕ್ಕೊಳಗಾದ ಪರಿಶಿಷ್ಟರು ದೂರು ಸಲ್ಲಿಸಿ ಎಫ್.ಐ.ಆರ್ ದಾಖಲಿಸಿದರೆ, ಆರೋಪಿಗಳನ್ನು ಬಂಧಿಸುವ ಬದಲಿಗೆ, ಆರೋಪಿಗಳಿಂದಲೇ ಪ್ರತ್ಯಾರೋಪದ ಕೇಸು ದಾಖಲಿಸುಂತೆ ಮಾಡಿಸಿ ಪರಿಶಿಷ್ಟರನ್ನೇ ಮತ್ತಷ್ಟು ತೊಂದರೆಗೆ ಸಿಲುಕಿಸಲು ನೋಡುತ್ತಾರೆ.
- ಪ್ರತ್ಯಾರೋಪದ ಕೇಸುಗಳು ಹೆಚ್ಚುತ್ತಿವೆ ಹಾಗೂ ಇವು ಸರ್ಕಾರದ ಕೇಸುಗಳಾಗಿ(ಪೋಲೀಸರ ಕೇಸುಗಳು) ಪ್ರಾಬಲ್ಯ ಸಾಧಿಸುತ್ತಿವೆ. ಹೀಗಿರುವಲ್ಲಿ ಪರಿಶಿಷ್ಟರನ್ನು ಹಿಂಸೆಗೊಳಮಾಡುವ ವಿಧ್ವಂಸಕ ಪ್ರತ್ಯಾರೋಪ ಕೇಸುಗಳಲ್ಲಿ, ಸರ್ಕಾರವೇ ಪರಿಶಿಷ್ಟರನ್ನು ರಕ್ಷಿಸುವ ಜವಾಬ್ದಾರಿ ಹೊರಬೇಕು....*(ನ್ಯಾಯ ಮೂರ್ತಿ ಪುಣ್ಣಯ್ಯ ಆಯೋಗದ ವರದಿ–ಪರಿಶಿಷ್ಟ ಜಾತಿ ಮತ್ತು ಪಂಗಡಗಳವರ ಮೇಲೆ ಅಸ್ಪೃಷ್ಯತೆ ವಿರುದ್ಧ ವಿಚಾರಣೆ, ಆಂಧ್ರಪ್ರದೇಶ 2001, ಪುಟ 145)*

## 2ನೇ ಹಂತ: ಕೇಸುಗಳ ತನಿಖೆ

**ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆ(ಪಿ.ಐ.ಎಲ್):** ಸಾಕ್ಷಿ, ಮಾನವ ಹಕ್ಕುಗಳ ಕಾವಲುಪಡೆ ಸಂಸ್ಥೆ ಸಲ್ಲಿಸಿದ ರಿಟ್ ಅರ್ಜಿ ಸಂಖ್ಯೆ 1019/2006ರಲ್ಲಿ ಆಂಧ್ರಪ್ರದೇಶ ಉಚ್ಚ ನ್ಯಾಯಾಲಯ ಮಧ್ಯಂತರ ಆದೇಶ ನೀಡಿತು. ಇದರಲ್ಲಿ ದೌರ್ಜನ್ಯ ತಡೆ ಕಾಯ್ದೆಯಲ್ಲಿ ದಾಖಲಾದ ಕೇಸುಗಳ ಬಗ್ಗೆ ಪೋಲೀಸ್ ನಿರ್ದೇಶಕರು ನೀಡಿರುವ ಅಂಕಿಅಂಶಗಳಲ್ಲಿ ಕೆಳಕಂಡ ಅಂಶಗಳನ್ನು ಪರಿಗಣಿಸಿದೆ:

- 1 ಕೇಸು ಆರು ವರ್ಷಗಳಿಂದ ತನಿಖೆಯಾಗದೇ ಬಾಕಿಯಿದೆ
- 53 ಕೇಸುಗಳು ಮೂರರಿಂದ ಐದು ವರ್ಷ ತನಿಖೆಯಾಗದೇ ಬಾಕಿಯಿದೆ
- 190 ಕೇಸುಗಳು ಸುಮಾರು ಎರಡು ವರ್ಷಗಳಿಂದ ಬಾಕಿಯಿದೆ
- 805 ಕೇಸುಗಳು ಸುಮಾರು ಒಂದು ವರ್ಷ ತನಿಖೆಯಾಗದೆ ಬಾಕಿಯಿದೆ

***⇒ ಪೋಲೀಸರ ಈ ನಿರ್ಲಕ್ಷ್ಯ ದೌರ್ಜನ್ಯ ಕಾಯ್ದೆಯ ಸೆಕ್ಷನ್ 4ರ ಸ್ಪಷ್ಟ ಉಲ್ಲಂಘನೆ, ಹಾಗಿದ್ದರೂ ಯಾರೊಬ್ಬ ಪೋಲೀಸ್ ಅಧಿಕಾರಿಗೂ ಶಿಕ್ಷೆ ಆಗಿಲ್ಲ.***

ದೌರ್ಜನ್ಯ ತಡೆ ಕಾಯ್ದೆ ಮತ್ತು ನಿಯಮಗಳು ಪರಿಣಾಮಕಾರಿಯಾಗಿ ಅನುಷ್ಠಾನಗೊಳ್ಳಬೇಕೆಂದು ಪ್ರತಿಪಾದಿಸಿರುವ ಈ ರಿಟ್ ಅರ್ಜಿಗೆ ಉತ್ತರವಾಗಿ ಪೋಲೀಸ್ ಅಧಿಕಾರಿಗಳ ಅಫಿಡವಿಟ್ ಈ ಸತ್ಯಾಂಶ ಹೇಳುತ್ತದೆ: ಈ ಕಾಯ್ದೆಯಡಿ, 1995–2006 ಅವಧಿಗೆ 21,000 ಕೇಸುಗಳು ದಾಖಲಾಗಿವೆ. ಈ ಕೇಸುಗಳಲ್ಲಿ ***14,000ಕ್ಕೂ ಹೆಚ್ಚಿನವುಗಳಿಗೆ ಚಾರ್ಜ್ ಶೀಟ್ ಸಲ್ಲಿಸಿಲ್ಲ. ಆದರೆ ದೌರ್ಜನ್ಯ ತಡೆ ಕಾಯ್ದೆಯು ಎಫ್.ಐ.ಆರ್ ದಾಖಲಿಸಿದ 30 ದಿನಗಳಲ್ಲಿ ತನಿಖೆ ಪೂರ್ಣಗೊಳ್ಳಬೇಕೆಂದು ಸ್ಪಷ್ಟವಾಗಿ ತಿಳಿಸುತ್ತದೆ.*** *(ಮನಿ ಹರ್ಷಲ್ಸ್, ಫ್ರಂಟ್‌ಲೈನ್, 4–12–2009, ಪುಟ 20)*

### ಏಕಿಷ್ಟು ಕೇಸುಗಳ ತನಿಖೆ ಬಾಕಿ? ಮೂರು ಪೋಲೀಸ್ ತಂತ್ರಗಳು

1. **ತನಿಖೆಯ ಗಡುವು ಉಲ್ಲಂಘನೆ:** ಎಫ್.ಐ.ಆರ್ ದಾಖಲಾಗಿ 30 ದಿನಗಳಲ್ಲಿ ತನಿಖೆಯಾಗಬೇಕು. ಕ್ರಮವಾಗಿ ಕೇಸು ದಾಖಲಾಗಿದ್ದರೂ ***ತನಿಖೆಯಲ್ಲಿ ಜಡತನ,*** *ನಿಧಾನಗತಿಯ ವಿಚಾರಣೆ ಮತ್ತು ಶಿಕ್ಷೆ ಬಹುತೇಕ ಇಲ್ಲವೇ ಇಲ್ಲ."* *(ಮಾನವ ಹಕ್ಕುಗಳ ರಾಷ್ಟ್ರೀಯ ಆಯೋಗ, ಪರಿಶಿಷ್ಟ ಜಾತಿಯ ವಿರುದ್ಧ ದೌರ್ಜನ್ಯ ತಡೆ ವರದಿ, ನವದೆಹಲಿ, 2002, ಪುಟ 68)*
   - ***ಸಿಬ್ಬಂಧಿ ಕೊರತೆ, ದೀರ್ಘ ವಿಳಂಬ ಯಾ ಅಲ್ಪಗುಣಮಟ್ಟದ ತನಿಖೆ:*** ಡೆಪ್ಯುಟಿ ಸೂಪರಿಂಟೆಂಡೆಂಟ್‌ಗಳ ಕೊರತೆ ಅಥವಾ ಕೈಗೆ ಸಿಗುವುದಿಲ್ಲ; ದೌರ್ಜನ್ಯ ಕೇಸುಗಳನ್ನೇ ತನಿಖೆ ಮಾಡಲು ವಿಶೇಷ ಸಿಬ್ಬಂಧಿಗಳಿಲ್ಲ. *(ರಾಜ್ಯಪಾಲರ ಸಮಿತಿ, ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಕಲ್ಯಾಣ ಮತ್ತು ಹಕ್ಕುಗಳ ವರದಿ, ನವದೆಹಲಿ, 2001, ಪುಟ ಪ್ಯಾರಾ 68–9)*
   - ***ಆರೋಪಿಗೆ ಶಿಕ್ಷೆ ತಪ್ಪಿಸಲು ತನಿಖೆಗೆ ಇರುವ 30ದಿನದ ಮಿತಿಯಲ್ಲಿ ಉಲ್ಲಂಘನೆ:*** ದೌರ್ಜನ್ಯ ಪ್ರಕರಣಗಳಲ್ಲಿ ಸಾಮಾನ್ಯವಾಗಿ ಪೋಲೀಸರು ತನಿಖೆಯನ್ನು ವಿಳಂಬ ಮಾಡುತ್ತಾರೆ, ಪ್ರಬಲ ಜಾತಿಯವರ ಹೇಳಿಕೆಗಳನ್ನು ಮಾತ್ರ ದಾಖಲಿಸಿಕೊಳ್ಳುತ್ತಾರೆ. ನಿಯೋಜಿತಗೊಳ್ಳದ ಯಾ ಅಸಮರ್ಥ ಅಧಿಕಾರಿ ತನಿಖೆ ಮಾಡುವಂತೆ ನೋಡಿಕೊಳ್ಳುತ್ತಾರೆ, ಇದರಿಂದಾಗಿ ತಾಂತ್ರಿಕ ಆಧಾರದಲ್ಲಿ ಆರೋಪಿಗಳು ದೋಷ ಮುಕ್ತರಾಗುತ್ತಾರೆ. *(ಪರಿಶಿಷ್ಟರ ಮೇಲಿನ ದೌರ್ಜನ್ಯದ ವಿರುದ್ಧ ಜನರ ಆಯೋಗ, ಕರಡು ವೀಕ್ಷಣೆ ಮತ್ತು ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದವರ ವಿರುದ್ಧ ದೌರ್ಜನ್ಯವನ್ನು ತಡೆಗಟ್ಟಲು ಪರಿಣಾಮಕಾರಿ ಕ್ರಮಗಳಿಗೆ ಸಲಹೆಗಳು, ನವದೆಹಲಿ, 2008, ಪುಟ. 2)*
   - ***ದೌರ್ಜನ್ಯಕ್ಕೆ ಒಳಗಾದ ಪರಿಶಿಷ್ಟರ ಕುರಿತು ಪೂರ್ವಾಗ್ರಹ ಭಾವನೆಯಿಂದ ತನಿಖೆಯ ನಿರಾಕರಣೆ:*** "ಪರಿಶಿಷ್ಟರ ದೂರುಗಳನ್ನು ನಿರ್ಲಕ್ಷಿಸುತ್ತಾರೆ, ನಿರುತ್ಸಾಹಕ್ಕೀಡು ಮಾಡಿ ದೂರನ್ನು ತಿರಸ್ಕರಿಸುತ್ತಾರೆ, ದೌರ್ಜನ್ಯಕ್ಕೆ ಒಳಗಾದವರಿಗೆ ಬೆಲೆ ನೀಡದೆ, ದೌರ್ಜನ್ಯ ಎಸಗಿದವರ ಮಾತಿಗೆ ಮನ್ನಣೆ, ಕಳಪೆ ತನಿಖೆ, ಆರೋಪಿ ತಪ್ಪಿಸಿಕೊಳ್ಳಲು ಉದ್ದೇಶಪೂರಕವಾಗಿ ಸನ್ನಿವೇಶ ಸೃಷ್ಟಿಸುತ್ತಾರೆ. ಕೇಸು ಮುಂದುವರಿಸದಿರಲು ದೌರ್ಜನ್ಯಕ್ಕೆ ಒಳಗಾದವರನ್ನು ಕಂಗೆಡಿಸುತ್ತಾರೆ, ತ್ವರಿತವಾಗಿ ತನಿಖೆ ಮಾಡದೆ, ದೌರ್ಜನ್ಯದ ಮೊದಲು ಹಾಗೂ ನಂತರ ರಕ್ಷಣೆ ನೀಡುವುದಿಲ್ಲ. ಇವೆಲ್ಲವೂ ಪರಿಶಿಷ್ಟರ ಮೇಲಿರುವ ಪೂರ್ವಾಗ್ರಹ ಮನೋಭಾವನೆಯನ್ನು ತೋರಿಸುತ್ತದೆ". *(ಮಾನವ ಹಕ್ಕುಗಳ ರಾಷ್ಟ್ರೀಯ ಆಯೋಗ, ಪರಿಶಿಷ್ಟ ಜಾತಿಯ ವಿರುದ್ಧ ದೌರ್ಜನ್ಯ ತಡೆಯ ವರದಿ, ನವದೆಹಲಿ, 2002, ಪುಟ. 131)*

2. **ರಾಜಿಗಾಗಿ ಮನವೊಲಿಕೆ ಯಾ ಒತ್ತಡ:** ಅಧ್ಯಯನವೊಂದರಂತೆ ತಮಿಳುನಾಡಿನ 386 ದೌರ್ಜನ್ಯ ಪ್ರಕರಣಗಳಲ್ಲಿ ಕೇವಲ 157 ಕೇಸುಗಳನ್ನು ಡಿಎಸ್‌ಪಿ ತನಿಖೆ ಮಾಡಿದ್ದಾರೆ, ಅವುಗಳಲ್ಲಿ ಕೇವಲ 34 ಕೇಸುಗಳ(21.9%) ತನಿಖೆ ತೃಪ್ತಿದಾಯಕವಾಗಿದೆ. ಉಳಿದ ಪ್ರಕರಣಗಳಲ್ಲಿ, ಡಿಎಸ್‌ಪಿ ಪಕ್ಷಪಾತ ಹಾಗೂ ಪೂರ್ವಾಗ್ರಹ ಮನೋಭಾವನೆ ತೋರಿದ್ದು ದೌರ್ಜನ್ಯಕ್ಕೆ ಒಳಗಾದವರನ್ನು ಆರೋಪಿಯ ರಾಜಿ ಮಾಡಿಕೊಳ್ಳುವಂತೆ ಅಥವಾ ಕೇಸನ್ನು ಹಿಂಪಡೆಯುವಂತೆ ಬೆದರಿಸಿದ್ದಾರೆ ಅಥವಾ ಬಲವಂತಪಡಿಸಿದ್ದಾರೆ. *(ಎಂ.ಎ. ಬ್ರಿಟ್ಟೋ, ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಗಳ (ದೌರ್ಜನ್ಯ ತಡೆ) ಕಾಯ್ದೆಯ ಅನುಷ್ಠಾನ (ತಮಿಳ್), ಮಧುರೈ: ಡಾಕ್ಟರ್ ಅಂಬೇಡ್ಕರ್ ಸಾಂಸ್ಕೃತಿಕ ಅಕಾಡೆಮಿ, 2007, ಪುಟ 198).*

3. **ಕಳಪೆ ತನಿಖೆ**
   - ***ತಮಿಳುನಾಡಿನಲ್ಲಿ:*** ಅಧ್ಯಯನದ 386 ದೌರ್ಜನ್ಯ ಪ್ರಕರಣಗಳಲ್ಲಿ ಡಿಎಸ್‌ಪಿ ಅಥವಾ ಹಿರಿಯ ಅಧಿಕಾರಿಗಳು ಕೇವಲ 42% ಪ್ರಕರಣಗಳಲ್ಲಿ ತನಿಖೆ ಮಾಡಿದ್ದಾರೆ. ಸಾಮಾನ್ಯವಾಗಿ ಕಿರಿಯ ಪೋಲೀಸ್ ಅಧಿಕಾರಿಗಳು ತನಿಖೆ ಮಾಡಿ, ವರದಿ ತಯಾರಿಸಿ ಡಿಎಸ್‌ಪಿಯಿಂದ ಸಹಿ ಹಾಕಿಸುತ್ತಾರೆ. 386ರಲ್ಲಿ 146 ಪ್ರಕರಣಗಳಿಗೆ ಕ್ರಮವಾಗಿ ತನಿಖೆ ಮಾಡಿಲ್ಲ, ಘಟನೆ ಜರುಗಿ ಸ್ವಲ್ಪ ಸಮಯದ ನಂತರ ಕೇವಲ ಪ್ರಾಥಮಿಕ ವಿಚಾರಣೆಯನ್ನು ಕಿರಿಯ ಪೋಲೀಸ್ ಅಧಿಕಾರಿಗಳು ಮಾಡಿದ್ದಾರೆ. *(ಎಂ.ಎ. ಬ್ರಿಟ್ಟೋ, ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ದೌರ್ಜನ್ಯ ತಡೆ) ಕಾಯ್ದೆಯ ಅನುಷ್ಠಾನ (ತಮಿಳ್), ಮಧುರೈ: ಡಾಕ್ಟರ್ ಅಂಬೇಡ್ಕರ್ ಸಾಂಸ್ಕೃತಿಕ ಅಕಾಡೆಮಿ, 2007, ಪುಟ 195–6)*
   - ***ಗುಜರಾತಿನಲ್ಲಿ:*** ದಿನಾಂಕ 30–01–1989ರಿಂದ 31–12–2006 ಅವಧಿಗೆ, ಗುಜರಾತಿನ 25 ಜಿಲ್ಲೆಗಳಲ್ಲಿ ಪರಿಶಿಷ್ಟರ ಮೇಲೆ ದೌರ್ಜನ್ಯಗಳಾಗಿರುವ 19,080 ಕೇಸುಗಳು ದಾಖಲಾಗಿವೆ. ಇದರಲ್ಲಿ 7,468 ಕೇಸುಗಳಿಗೆ (39.1%) ಡಿಎಸ್‌ಪಿಗಿಂತ ಕಿರಿಯ ಅಧಿಕಾರಿಗಳು ತನಿಖೆ ನಡೆಸಿದ್ದಾರೆ. *(ಡಿಎಸ್‌ಪಿ ಕಛೇರಿಗಳಿಂದ ಪಡೆದ ಅಂಕಿ ಅಂಶಗಳು, ಗುಜರಾತ್, ಮಾಹಿತಿ ಹಕ್ಕು ಅರ್ಜಿಯ ಮೂಲಕ, ನವಸರ್ಜನ್ ಟ್ರಸ್ಟ್, ಅಹ್ಮದಾಬಾದ್, 2008)*

## ಕೇಸು ಮುಚ್ಚಿಹಾಕಲು ತ್ರಿ-ತಂತ್ರ

- 1997-2007 ಅವಧಿಗೆ ದೌರ್ಜನ್ಯ ಕಾಯ್ದೆಯ *21.7%* **ಪ್ರಕರಣಗಳನ್ನು ಪೋಲೀಸರು ಮುಚ್ಚಿಹಾಕಿದ್ದಾರೆ** *(ಎನ್‌ಸಿಆರ್‌ಬಿ, ವಾರ್ಷಿಕ ವರದಿಗಳು 1997-2007, ನವದೆಹಲಿ, 1998-2008)*
- ರಾಜ್ಯಸ್ಥಾನ ಕೇಸುಗಳನ್ನು ವಿಲೇವಾರಿ ಮಾಡುವಲ್ಲಿ ಮೊದಲ ರ್‍ಯಾಂಕ್ ಪಡೆದಿದೆ-99.4%. ಆದರೂ, ಪೋಲೀಸರು ಕೇಸುಗಳನ್ನು ಮುಚ್ಚಿಹಾಕಿರುವುದರಲ್ಲಿ 1992-1995 ಅವಧಿಗೆ ರಾಜಾಸ್ಥಾನ ರಾಜ್ಯ ಮೊದಲ ರ್‍ಯಾಂಕ್ ಪಡೆದಿದೆ-55%. *(ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಗಳ ರಾಷ್ಟ್ರೀಯ ಆಯೋಗ, 3ನೇ ವರದಿ 1994-95 ಮತ್ತು 1995-96, ನವದೆಹಲಿ, 1998, ಪುಟಪ್ಯಾರಾ. 208-220)*
- ***ಕೇಸು ಮುಚ್ಚಿಹೋಗಲು ಕಾರಣ -ವಿಳಂಬನೀತಿ:*** ಕೆಲವು ಜಿಲ್ಲೆಗಳಲ್ಲಿ ಹೆಚ್ಚಿನ ಕೇಸುಗಳು ಸುಳ್ಳೆಂದು ಮುಚ್ಚಿರುವ ಉದಾಹರಣೆಗಳಿವೆ. ಇತ್ಯರ್ಥವಾಗುವುದು ತಡವಾಗುವುದರಿಂದ, ದೌರ್ಜನ್ಯಕ್ಕೆ ಒಳಗಾದವರು ಮತ್ತು ಆರೋಪಿಗಳು ರಾಜಿಯಾಗುತ್ತಾರೆಂದು ಎಸ್‌ಪಿ/ಡಿಎಸ್‌ಪಿ ಕಾರಣ ತಿಳಿಸಿದ್ದಾರೆ. *(ಸಮಾಜ ಕಲ್ಯಾಣ ಇಲಾಖೆ, ಆಂಧ್ರಪ್ರದೇಶ ಸರ್ಕಾರ, ದೌರ್ಜನ್ಯ ತಡೆ ಕಾಯ್ದೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಮೇಲೆ ದೌರ್ಜನ್ಯದ ವೀಡಿಯೋ ಗೋಷ್ಠಿ, 21-03-2009, ಆರ್‌ಸಿ ಸಂಖ್ಯೆ ಹೆಚ್2/8193/2008-2)*

## 3ನೇ ಹಂತ: ಆರೋಪಿಯ ಬಂಧನ

**ಆರೋಪಿಯನ್ನು ಬಂಧಿಸುವುದಿಲ್ಲ ಅಥವಾ ಬಂಧನದಲ್ಲಿ ವಿಳಂಬ**

- **ಪರಿಶಿಷ್ಟ ಜಾತಿ ಮತ್ತು ಪಂಗಡಗಳ ರಾಷ್ಟ್ರೀಯ ಆಯೋಗವು** ದೌರ್ಜನ್ಯ ತಡೆ ಕಾಯ್ದೆಯ ಅನುಷ್ಠಾನದ ಕುರಿತು ಉತ್ತರ ಪ್ರದೇಶದಲ್ಲಿ ಒಂದು ಅಧ್ಯಯನವಾಯಿತು. ಇದರಲ್ಲಿ 1,311 ದೌರ್ಜನ್ಯ ಪ್ರಕರಣಗಳನ್ನು ವಿಶ್ಲೇಷಿಸಿದೆ, ಇದು ಎಫ್.ಐ.ಆರ್ ದಾಖಲಿಸುವುದಕ್ಕೆ ವಿಳಂಬ, ತನಿಖೆ ಮಾಡುವವರು ಭೇಟಿ ಮಾಡುವಲ್ಲಿ ವಿಳಂಬ, ಆರೋಪಿಯನ್ನು ಬಂಧಿಸದಿರುವುದು, ಚಾರ್ಜ್ ಶೀಟ್ ಸಲ್ಲಿಕೆಗೆ ವಿಳಂಬ ಹಾಗೂ ಪರಿಹಾರ ಮತ್ತು ನಷ್ಟಪರಿಹಾರ ಸಮಯಕ್ಕೆ ನೀಡದಿರುವುದು. ಇದರಲ್ಲಿ ಆರೋಪಿಯನ್ನು ಬಂಧಿಸದಿರುವ ನಿರ್ಲಕ್ಷತೆ ಕಣ್ಣಿಗೆ ರಾಚುತ್ತದೆ; ಇದರಿಂದ ಆರೋಪಿಗಳು ಕೋರ್ಟಿನಲ್ಲಿ ಶರಣಾಗಲು ದಾರಿ ಮಾಡಿದಂತಾಗಿದೆ ಮತ್ತು ದೌರ್ಜನ್ಯ ಕೇಸಿನಲ್ಲಿ ತಕ್ಷಣ ನಿರ್ಬಂಧಿಸಿದರೆ ಆಗುವ ಪರಿಣಾಮವನ್ನು ಕೋರ್ಟ್ ಪ್ರಕ್ರಿಯೆಯ ಮೂಲಕ ದಾರಿ ತಪ್ಪಿಸಿದಂತಾಗಿದೆ. *(ಮಾನವ ಹಕ್ಕುಗಳ ರಾಷ್ಟ್ರೀಯ ಆಯೋಗ, ಪರಿಶಿಷ್ಟ ಜಾತಿಯವರ ಮೇಲಿನ ದೌರ್ಜನ್ಯ ತಡೆ ವರದಿ, ನವದೆಹಲಿ, 2002, ಪುಟ 123)*
- ***ಗುಜರಾತಿನಲ್ಲಿ:*** 1990-1993 ಅವಧಿಗೆ 11 ದೌರ್ಜನ್ಯ-ಪೀಡಿತ ಜಿಲ್ಲೆಗಳ ಅಧ್ಯಯನದಲ್ಲಿ, ಕೊಲೆ ಪ್ರಕರಣದ ಕೇಸು ದಾಖಲಾಗಿ ಆರೋಪಿಯನ್ನು ಬಂಧಿಸುವ ತನಕ ಸರಾಸರಿ 121.2 ಘಂಟೆಗಳಷ್ಟು ತಡ ಕಂಡುಬಂದಿದೆ; ಅತ್ಯಾಚಾರ ಪ್ರಕರಣದಲ್ಲಿ ಸರಾಸರಿ 532.9 ಘಂಟೆಯ ತಡ; ಮತ್ತು ತೀವ್ರ ಪ್ರಕರಣಗಳಲ್ಲಿ ಸರಾಸರಿ 862.4 ವಿಳಂಬವಾಗಿದೆ! *(ಮಾರ್ಟಿನ್ ಮ್ಯಾಕ್ವಾನ್ ಮತ್ತು ಹರ್ಷದ್ ದೇಸಾಯಿ, ಗುಜರಾತಿನಲ್ಲಿ ಪರಿಶಿಷ್ಟರ ಮೇಲಿನ ದೌರ್ಜನ್ಯ: ಸಾಕ್ಷ್ಯ ವರದಿ ಮತ್ತು ಮೌಲ್ಯಮಾಪನ, ಸೆಂಟರ್ ಫಾರ್ ಸೋಶಿಯಲ್ ಸ್ಟಡೀಸ್ 1997, ಪುಟ 85)*
- **ತಮಿಳುನಾಡಿನಲ್ಲಿ:** ಬಂಧನದ ಅಂಕಿ ಅಂಶ ಪಡೆಯಲು 371 ಕೇಸುಗಳಿಗೆ ಸಾಧ್ಯವಾಗಿದೆ. ಇದರಲ್ಲಿ ಶೇ.25.6% ರಷ್ಟು ಕೇಸಿನಲ್ಲಿ ಕಡೆಗೂ ಆರೋಪಿಯನ್ನು ಬಂಧಿಸಲಿಲ್ಲ, ಶೇ.25.9% ರಷ್ಟು ಕೇಸಿನಲ್ಲಿ ಎಫ್.ಐ.ಆರ್ ದಾಖಲಿಸಿದ ತಕ್ಷಣ ಆರೋಪಿಯ ಬಂಧನವಾಗಿದೆ. ಶೇ. 20.7% ಕೇಸುಗಳಲ್ಲಿ ಘಟನೆಯಾಗಿ ವಾರದಿಂದ, ವರ್ಷದ ನಂತರ ಬಂಧಿಸಲಾಗಿದೆ. 23 ಪ್ರಕರಣಗಳಲ್ಲಿ (6%) ಆರೋಪಿಗಳು ಉಚ್ಚ ನ್ಯಾಯಾಲಯದಲ್ಲಿ ನಿರೀಕ್ಷಣಾ ಜಾಮೀನು ಪಡೆಯುವಲ್ಲಿ ಯಶಸ್ವಿಯಾಗಿದ್ದಾರೆ. *(ಎಂ.ಎ. ಬ್ರಿಟ್ಟೋ, ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಗಳ (ದೌರ್ಜನ್ಯ ತಡೆ) ಕಾಯ್ದೆಯ ಅನುಷ್ಠಾನ 1989 (ತಮಿಳ್), ಮಧುರೈ: ಡಾಕ್ಟರ್ ಅಂಬೇಡ್ಕರ್ ಸಾಂಸ್ಕೃತಿಕ ಅಕಾಡೆಮಿ, 2007 ಪುಟ 205)*

> **"ದೌರ್ಜನ್ಯ ಕೇಸುಗಳಲ್ಲಿ ದುಷ್ಕರ್ಮಿಗಳನ್ನು ಬಂಧಿಸಲು ಸಬ್-ಇನ್ಸ್‌ಪೆಕ್ಟರ್ ಅಥವಾ ಸರ್ಕಲ್-ಇನ್ಸ್‌ಪೆಕ್ಟರ್ ತಯಾರಿರುವುದಿಲ್ಲ, ವಿಶೇಷವಾಗಿ ದೌರ್ಜನ್ಯದ ಮಟ್ಟ ಹೆಚ್ಚಿದ್ದರೆ, ದುಷ್ಕರ್ಮಿಗಳು ಹೆಚ್ಚಿನ ಸಂಖ್ಯೆಯಲ್ಲಿದ್ದರೆ, ಎಫ್.ಐ.ಆರ್ ದಾಖಲಾಗಿದ್ದರೂ ಬಂಧಿಸುವುದಿಲ್ಲ".**
>
> *ನ್ಯಾಯಮೂರ್ತಿ ಪುಣ್ಣಯ್ಯ ಆಯೋಗ-ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಮೇಲೆ ಅಸ್ಪೃಶ್ಯತೆಯ ವಿಚಾರಣೆ, ಆಂಧ್ರಪ್ರದೇಶ, 2001, ಪುಟ 62*

**ಯಾಕಾಗಿ ಪೋಲೀಸರು ಬಂಧಿಸುವುದಿಲ್ಲ ಅಥವಾ ವಿಳಂಬ ಮಾಡುತ್ತಾರೆ?**

- ಹಿಂಸಾಚಾರದ ಗಂಭೀರತೆಯನ್ನು ತಗ್ಗಿಸಲು
- ಆರೋಪಿಗಳನ್ನು ಬಂಧನ ಮತ್ತು ಶಿಕ್ಷೆಯಿಂದ ತಪ್ಪಿಸಲು
- ಸರ್ಕಾರಿ ಸಿಬ್ಬಂಧಿಗಳ ಬಂಧನವನ್ನು ತಡೆಯಲು
- ಸ್ಥಳೀಯ ರಾಜಕಾರಣಿಗಳ ಬಂಧನ ತಡೆಯಲು

*(ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ, ವರದಿ-ಪರಿಶಿಷ್ಟ ಜಾತಿಯವರ ಮೇಲೆ ದೌರ್ಜನ್ಯ ತಡೆ, ನವದೆಹಲಿ, 2002, ಪುಟ 114)*

## 4ನೇ ಹಂತ: ಚಾರ್ಜ್ ಶೀಟ್

**ಪರಿಶಿಷ್ಟ ಜಾತಿ ಮತ್ತು ಪಂಗಡಗಳವರ ಕಲ್ಯಾಣ ಮತ್ತು ಹಕ್ಕುಗಳ ವಿಚಾರಕ್ಕೆ ರಾಜ್ಯಪಾಲರುಗಳ ಸಮಿತಿಯ** ಒಂದು ವರದಿಯ ಪ್ರಕಾರ *(ನವದೆಹಲಿ, 2001, ಅಂಕಣ 5.1)*, **1990-99ರ ಅವಧಿಗೆ ದೌರ್ಜನ್ಯ ಕಾಯ್ದೆಯಲ್ಲಿ ದಾಖಲಾದ ಪ್ರಕರಣಗಳಲ್ಲಿ:**

| | |
|---|---|
| ಪ್ರತಿ ವರ್ಷ ದಾಖಲಾದ ಸರಾಸರಿ ಪ್ರಕರಣಗಳು: | **29,713** |
| ಪ್ರತಿ ವರ್ಷ ತನಿಖೆ ಮಾಡಿದ ಸರಾಸರಿ ಪ್ರಕರಣಗಳು: | **26,706 (ದಾಖಲಾದ 89.9% ಪ್ರಕರಣಗಳು)** |
| ಪ್ರತಿ ವರ್ಷ ಚಾರ್ಜ್ ಶೀಟ್ ಹಾಕಲಾದ ಸರಾಸರಿ ಪ್ರಕರಣಗಳು: | **18,212 (ತನಿಖೆಗೊಂಡ 61.3% ಪ್ರಕರಣಗಳು)** |
| ಪ್ರತಿ ವರ್ಷ ಚಾರ್ಜ್ ಶೀಟ್ ಹಾಕಿದ ನಂತರ ಬಾಕಿಯಿರುವ ಸರಾಸರಿ ಪ್ರಕರಣಗಳು: | **8,494 (ತನಿಖೆಗೊಂಡ 31.8% ಪ್ರಕರಣಗಳು)** |

**1997–2007ರಲ್ಲಿ ಪರಿಶಿಷ್ಟರ ಮೇಲಾದ ಅಪರಾಧ ಕೇಸುಗಳ ವಿಲೇವಾರಿ**

| | ಎಲ್ಲಾ ಕಾಯಿದೆ ಅಡಿಯಲ್ಲಿ ದಾಖಲಾದ ಕೇಸುಗಳ ಸಂಖ್ಯೆ | ದೌರ್ಜನ್ಯ ತಡೆ ಕಾಯ್ದೆಯಡಿಯಲ್ಲಿ ದಾಖಲಾದ ಕೇಸುಗಳು |
|---|---|---|
| ವಿಚಾರಣೆ ಮುಗಿದಿರುವ | 3,05,647 | 1,34,534 |
| ಅಂತಿಮ ವರದಿ ಸಲ್ಲಿಕೆ | 17,028(5.6%) | 7,932 (5.9%) |
| ಆರೋಪ ಪಟ್ಟಿ ಸಲ್ಲಿಕೆ | 2,33,213 (76.3%) | 97.341 (72.4%) |
| 10 ವರ್ಷಗಳಲ್ಲಿ ತನಿಖೆ ಮುಗಿಸಿ ಆರೋಪ ಪಟ್ಟಿ | 72,434(23.7%) | 37,193(27.7%) |
| ಸಲ್ಲಿಕೆಯ ಬಾಕಿ ವರ್ಷವೊಂದರಲ್ಲಿ ತನಿಖೆ | 7,243 (26% ಸರಾಸರಿ | 3,719 (30.4% |
| ಮುಗಿಸಿ ಆರೋಪ ಪಟ್ಟಿ ಸಲ್ಲಿಕೆಯ ಸರಾಸರಿ ಬಾಕಿ | ತನಿಖೆಯಾದ ಪ್ರಕರಣಗಳು) | ಸರಾಸರಿ ತನಿಖೆಯಾದ ಪ್ರಕರಣಗಳು) |

*• ದೌರ್ಜನ್ಯ ತಡೆ ಮತ್ತು ಪಿ.ಸಿ.ಆರ್ ಕಾಯ್ದೆಯ ಅಂಕಿ ಅಂಶಗಳು (1997–2007ರವರೆಗೆ); ಐ.ಪಿ.ಸಿಯ ಅಂಕಿ ಅಂಶಗಳು ಕೇವಲ 2001–2007ರವರೆಗೆ (ಎನ್‌ಸಿಆರ್‌ಬಿ, ವಾರ್ಷಿಕ ವರದಿಗಳು 1997–2007, ನವದೆಹಲಿ, 1998–2000)*

**1990–99 ಮತ್ತು 1997–2000 ಅವಧಿಗೆ, ಎಡಭಾಗದಲ್ಲಿರುವ ಅಂಕಿ ಅಂಶಗಳು ಈ ಸತ್ಯಾಂಶ ತಿಳಿಸುತ್ತವೆ:**

- 1997–2007ರವರೆಗೆ, ದೌರ್ಜನ್ಯ ತಡೆ ಕಾಯ್ದೆಯಲ್ಲಿ ಹಾಕಿದ ಚಾರ್ಜ್ ಶೀಟ್ ಪ್ರಮಾಣ ಬಹುತೇಕ ಇತರೆಲ್ಲಾ ಕಾನೂನುಗಳಲ್ಲಿ ಹಾಕಿದ ಚಾರ್ಜ್ ಶೀಟ್‌ಗಳಿಗೆ ಸಮನಾಗಿದೆ.
- ಎರಡು ಕಾಲದ ಅವಧಿಯನ್ನು ವಿಶ್ಲೇಷಿಸಿದರೆ (1990–99 ಮತ್ತು 1997–2007), ಕಾಯ್ದೆಯ ಅಡಿಯಲ್ಲಿ ದಾಖಲಾದ ಸರಾಸರಿ ಪ್ರಕರಣಗಳು ಹಾಗೂ ಆ ವರ್ಷದ ಚಾರ್ಜ್ ಶೀಟ್ ಬಾಕಿಯಲ್ಲಿ 31.8%ರಿಂದ 30.4%ಕ್ಕೆ ತಗ್ಗಿದೆ.

⇒ ***ಪ್ರತಿ ವರ್ಷವೂ ಕೇಸುಗಳಲ್ಲಿ ಕಾಲು ಭಾಗ ಚಾರ್ಜ್ ಶೀಟ್ ಬಾಕಿಯಿರುವುದು ಸತ್ಯ. ಇದು 30ದಿನಗಳ–ತನಿಖೆ ಗಡುವನ್ನು ಮೀರಿದೆಯೆಂದು ತೋರಿಸುತ್ತದೆ, ಅಲ್ಲವೇ?***

**"ಸಮಿತಿ, ದೌರ್ಜನ್ಯ ಕೇಸುಗಳನ್ನು ಪರಿಶೀಲಿಸುವಾಗ ಮತ್ತು ನಂತರ, ಯಾವೊಬ್ಬ ಅಧಿಕಾರಿಗೂ ಮಾಡಿದ ಅಪರಾಧಕ್ಕೆ ಶಿಕ್ಷೆಯಾಗಿರುವ ಕೇಸು ನಮ್ಮ ಮುಂದೆ ಬರಲಿಲ್ಲ. ಆದ್ದರಿಂದ, ಕಾಯ್ದೆ ಅನುಷ್ಠಾನಗೊಳಿಸುವ ವ್ಯವಸ್ಥೆಯಲ್ಲಿ ಗುರುತರ ನ್ಯೂನತೆಗಳಿವೆಯೆಂದು ಸಮಿತಿ ಭಾವಿಸಿದೆ."**
*(ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಕಲ್ಯಾಣಕ್ಕೆ ಸಂಸತ್ತು ಸಮಿತಿ, 14ನೇ ವರದಿಯಲ್ಲಿ 2006–07, ನವದೆಹಲಿ, 2006, ಪುಟ, ಪ್ಯಾರಾ 9–10)*

## ಅಲ್ಪತೃಪ್ತಿಯ ಅಥವಾ ಪರವಾಗಿಲ್ಲವೆನ್ನಬಹುದಾದ ಸಾಧನೆ: ಕಾರಣ? ಕಾರಣವಿಲ್ಲದ ವಿಳಂಬ

- **ಸರ್ವೋಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿರುವ ಸಾರ್ವಜನಿಕ ಹಿತಾಸಕ್ತಿ ಅರ್ಜಿಯ ಅಂಕಿ ಅಂಶಗಳು:** ಕೇಸು ದಾಖಲಾಗಿ 30 ದಿನಗಳಲ್ಲಿ ಶೇ.9.3% ಕೇಸುಗಳಿಗೆ ಚಾರ್ಜ್ ಶೀಟ್ ಹಾಕಲಾಗಿದೆ. ಸಿ.ಆರ್.ಪಿ.ಸಿಯ 90 ದಿನಗಳ ಮಿತಿಯಂತೆ ಪರಿಗಣಿಸಿದರೆ ಶೇ.22.1% ಕೇಸುಗಳಿಗೆ ಸಮಯದೊಳಗೆ ಹಾಕಲಾಗಿದೆ. ಶೇ.40.7% ಪ್ರಕರಣಗಳಲ್ಲಿ 90ದಿನದಿಂದ 1 ವರ್ಷದ ಒಳಗಾಗಿ ಚಾರ್ಜ್‌ಶೀಟ್ ಹಾಕಲಾಗಿದೆ ಮತ್ತು 27.9% ಪ್ರಕರಣಗಳಲ್ಲಿ ತನಿಖಾಧಿಕಾರಿ ಚಾರ್ಜ್ ಶೀಟ್ ಸಲ್ಲಿಸಲು ವರ್ಷಕ್ಕಿಂತ ಹೆಚ್ಚು ಸಮಯ ತೆಗೆದುಕೊಂಡಿದ್ದಾರೆ. *(ಸಾರ್ವಜನಿಕ ಹಿತಾಸಕ್ತಿ ಅರ್ಜಿ, ಸಾಕ್ಷಿ ಮಾನವ ಹಕ್ಕುಗಳ ಕಾವಲುಪಡೆ–ಆಂಧ್ರಪ್ರದೇಶ ಮತ್ತು ದಲಿತ ಹಕ್ಕುಗಳ ಕೇಂದ್ರ–ರಾಜಸ್ಥಾನ (ಡಬ್ಲ್ಯು.ಸಿ 104/2006, ಪುಟ 17)*
- **ಆಂಧ್ರಪ್ರದೇಶ ಪೋಲಿಸ್ ಇಲಾಖೆ:** ರಾಜ್ಯ ಉನ್ನತ ನ್ಯಾಯಲಯದ ರಿಟ್ ಸಂಖ್ಯೆ 1019/2005ರಲ್ಲಿ ಸಾಕ್ಷಿ ಮಾನವ ಹಕ್ಕುಗಳ ಕಾವಲು ಪಡೆ–ಆಂಧ್ರ ಪ್ರದೇಶ ಹಾಕಿದ್ದ ಸಾರ್ವಜನಿಕ ರಿಟ್ ಅರ್ಜಿಗೆ ಉತ್ತರವಾಗಿ ರಾಜ್ಯ ಪೋಲೀಸ್ ಇಲಾಖೆ 14,452 ಪ್ರಕರಣಗಳಲ್ಲಿ ಚಾರ್ಜ್ ಶೀಟ್ ವಿಳಂಬವಾಗಿದ್ದು ಈ ಕಾರಣಗಳನ್ನು ತಿಳಿಸಿದೆ:

i. 3,381 ಪ್ರಕರಣಗಳಲ್ಲಿ–ಅನುಮೋದನೆ, ಕಾನೂನು ಅಭಿಪ್ರಾಯ ಮತ್ತು ಹಿರಿಯ ಅಧಿಕಾರಿಗಳ ಆದೇಶ ಪಡೆಯುವಲ್ಲಿ ವಿಳಂಬ;
ii. 1,464 ಪ್ರಕರಣಗಳಲ್ಲಿ–ಹೆಚ್ಚು ಸಾಕ್ಷಿಗಳು ಇರುವುದರಿಂದ;
iii. 1,893 ಪ್ರಕರಣಗಳಲ್ಲಿ–ಜಾತಿ ಪ್ರಮಾಣ ಪತ್ರ ಪಡೆಯಲು ವಿಳಂಬ;
iv. 2,972 ಪ್ರಕರಣಗಳಲ್ಲಿ–ದಾಖಲೆ ಮತ್ತು ಸಾಕ್ಷಿ ಸಂಗ್ರಹಣೆ ವಿಳಂಬ;
v. 1,462 ಪ್ರಕರಣಗಳಲ್ಲಿ–ಗಾಯ, ವೈದ್ಯಕೀಯ ಪ್ರಮಾಣ ಪತ್ರ ಹಾಗೂ ಮರಣೋತ್ತರ ವರದಿ ಪಡೆಯುವಲ್ಲಿ ವಿಳಂಬ;
vi. 1,006 ಪ್ರಕರಣಗಳಲ್ಲಿ–ಆರೋಪಿಯು ಕಣ್ಮರೆಯಾಗಿದ್ದರಿಂದ;
vii. 752 ಪ್ರಕರಣಗಳಲ್ಲಿ–ದೌರ್ಜನ್ಯಕ್ಕೊಳಗಾದವರು/ಸಾಕಿಗಳನ್ನು ಹುಡುಕುವಲ್ಲಿ ಮತ್ತು ವಿಚಾರಣೆ ಮಾಡುವಲ್ಲಿ ವಿಳಂಬ;
viii. 813 ಪ್ರಕರಣಗಳಲ್ಲಿ–ಅಧಿಕಾರಿಗಳ ಎಡೆಬಿಡದ ಕಾರ್ಯ/ ಒತ್ತಡದಿಂದ ವಿಳಂಬ;
ix. 375 ಪ್ರಕರಣಗಳಲ್ಲಿ–ಅಧಿಕಾರಿಯ ವರ್ಗಾವಣೆ;
x. 78 ಪ್ರಕರಣಗಳಲ್ಲಿ–ಸಿಐಡಿ/ಸಿಬಿಐಡಿ ತನಿಖೆ ಮಾಡುತ್ತಿರುವ ಕಾರಣ;
xi. 58 ಪ್ರಕರಣಗಳಲ್ಲಿ–ಕೇಸು ಡೈರಿಗಳು ದೊರೆಯದಿರುವ ಕಾರಣ

- **ತಮಿಳುನಾಡು:** ಚಾರ್ಜ್ ಶೀಟು ಹಾಕಿರುವ 344 ದೌರ್ಜನ್ಯ ಪ್ರಕರಣಗಳಲ್ಲಿ, 60 ಕೇಸುಗಳಿಗೆ 'ಸತ್ಯಾಂಶದ ತಪ್ಪುಗ್ರಹಿಕೆ' ಎಂದು ಬರೆಯಲಾಗಿದೆ, 32 ಪ್ರಕರಣಗಳಲ್ಲಿ 30 ದಿನದ ಒಳಗಾಗಿ ಚಾರ್ಜ್ ಶೀಟ್ ಸಲ್ಲಿಸಲಾಗಿದೆ (9.4%). ಕೆಲವು ಪ್ರಕರಣಗಳಲ್ಲಿ ಚಾರ್ಜ್ ಶೀಟ್ ಸಲ್ಲಿಸಲು ಪೋಲೀಸರು ಕೋರ್ಟಿನಿಂದ ಎರಡು ವರ್ಷಗಳ ವಾಯಿದೆ ಪಡೆದಿದ್ದಾರೆ! *(ಎಂ.ಎ. ಬ್ರಿಟ್ಟೋ, ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಗಳ (ದೌರ್ಜನ್ಯ ತಡೆ) ಕಾಯ್ದೆಯ ಅನುಷ್ಠಾನ 1989 (ತಮಿಳ್), ಮಧುರೈ: ಡಾಕ್ಟರ್ ಅಂಬೇಡ್ಕರ್ ಸಾಂಸ್ಕೃತಿಕ ಅಕಾಡೆಮಿ, 2007 ಪುಟ 205)*
- 1992–1995 ಅವಧಿಗೆ **ಹರಿಯಾಣದಲ್ಲಿ** ವಿಲೇವಾರಿಯಾದ 96.3% ದೌರ್ಜನ್ಯ ಪ್ರಕರಣಗಳಲ್ಲಿ 68.8% ಪ್ರಕರಣಗಳಿಗೆ ಮಾತ್ರ ಚಲನ್ ಬರೆಯಲಾಗಿದೆ. **ತಮಿಳುನಾಡಿನಲ್ಲಿ** ವಿಲೇವಾರಿ ಪ್ರಮಾಣ 89.8% ಆದರೆ 60% ಚಲನ್ ಬರೆಯಲಾಗಿದೆ. ಬಿಹಾರದಲ್ಲಿ ವಿಲೇವಾರಿ ಪ್ರಮಾಣ 86.5% ಇದ್ದು ಚಲನ್ ಬರೆದ ಪ್ರಮಾಣ 67.5%. *(ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡಗಳ ರಾಷ್ಟ್ರೀಯ ಆಯೋಗ, 3ನೇ ವರದಿ 1994–95 ಮತ್ತು 1995–96, ನವದೆಹಲಿ, 1998, ಪುಟ 208)*

### ಅಕಾರಣ ವಿಳಂಬದ ಪರಿಣಾಮ

- ಆರೋಪ ಪಟ್ಟಿ (ಚಾರ್ಜ್ ಶೀಟ್) ಸಮಯಕ್ಕೆ ಸಲ್ಲಿಸದಿರುವುದರಿಂದ ಕೇಸ್ ಇತ್ಯರ್ಥವಾಗುವಲ್ಲಿ ತಡವಾಗಿ ದೌರ್ಜನ್ಯಕ್ಕೊಳಗಾದವರಿಗೆ ನ್ಯಾಯ ಸಿಗಲು ವಿಳಂಬವಾಗಿ, ನಕಾರಾತ್ಮಕ ಪರಿಣಾಮ ಉಂಟಾಗುತ್ತದೆ ಪ್ರಕರಣಕ್ಕೆ ಹಿನ್ನಡೆಯಾಗುತ್ತದೆ (ಉದಾ: ಪೋಲೀಸರು ದುಷ್ಕರ್ಮಿಗಳೊಟ್ಟಿಗೆ ಷಾಮೀಲಾಗಿ ಸಾಕ್ಷಾಧಾರಗಳನ್ನು ತಿರುಚಲು ಅವಕಾಶವಾಗುತ್ತದೆ). ಒತ್ತಡದ ಪರಿಣಾಮವೂ ಪರಿಶಿಷ್ಟರಿಗೆ ನೀಡಿದ ಹಿಂಸೆಯ ಕುರಿತು ಮಾತನಾಡದಿರಲು, ದುಷ್ಕರ್ಮಿಗಳ ಬೆದರಿಕೆ ಅಥವಾ ಬಲವಂತದಿಂದ ಕೇಸು ಹಿಂಪಡೆಯುವಂತೆ ಮಾಡಲಾಗುತ್ತದೆ.
- ದೌರ್ಜನ್ಯ ತಡೆ ಕಾಯ್ದೆಯಲ್ಲಿ 30 ದಿನಗಳಲ್ಲಿ ಚಾರ್ಜ್ ಶೀಟ್ ಸಲ್ಲಿಸದಿದ್ದರೆ ಮತ್ತು ಐ.ಪಿ.ಸಿಯಲ್ಲಿ 90 ದಿನಗಳಲ್ಲಿ ಚಾರ್ಜ್ ಶೀಟ್ ಸಲ್ಲಿಸದಿದ್ದರೆ ಪ್ರಕರಣಕ್ಕೆ ಹಿನ್ನಡೆಯಾಗುತ್ತದೆ. ಇದರಿಂದ ಅತ್ಯಾಚಾರ, ಕೊಲೆ ಮತ್ತು ತೀವ್ರ ಗಾಯದ ವಿಶೇಷ ಪ್ರಕರಣಗಳಲ್ಲಿ ಜೀವಾವಧಿ ಶಿಕ್ಷೆಗೆ ಒಳಗಾಗುವ ಆರೋಪಿಗಳಿಗೆ ಜಾಮೀನು ದೊರೆಯುವುದು ಗ್ಯಾರಂಟಿಯಾಗುತ್ತದೆ.

> **"ಪ್ರಕರಣಗಳಲ್ಲಿ, ಪೋಲೀಸರು ಕಾರಣವಿಲ್ಲದೆ ಚಲನ್ ಬರೆಯಲು ತಡ ಮಾಡುವುದರಿಂದ ದೌರ್ಜನ್ಯಕ್ಕೊಳಗಾದವರಿಗೆ ನಿಜವಾದ ನ್ಯಾಯ ಸಿಗುವುದಿಲ್ಲ ಮತ್ತು ಆರೋಪಿಗೆ ಆಗುವ ಶಿಕ್ಷೆಯ ಮೇಲೆ ಸಹ ಶೂನ್ಯ ಪರಿಣಾಮ ಬೀರುತ್ತದೆ."**
>
> *ಪರಿಶಿಷ್ಟ ಜಾತಿ ಮತ್ತು ಪಂಗಡಗಳ ರಾಷ್ಟ್ರೀಯ ಆಯೋಗ, 3ನೇ ವರದಿ 1994–95 ಮತ್ತು 1995–96, ನವದೆಹಲಿ, 1998, ಪುಟ, ಪ್ಯಾರಾ 208–09*

- ಹೀಗೆ ಚಾರ್ಜ್ ಶೀಟ್ ಹಾಕಲು ತಡ ಮಾಡುವುದರಿಂದ ಕೋರ್ಟ್ ಆದೇಶಗಳ ಮೇಲೆ ಗಾಢ ಪರಿಣಾಮಗುತ್ತದೆ, ಕೋರ್ಟುಗಳು ಚಾರ್ಜ್ ಶೀಟ್ ಹಾಕಲಿಲ್ಲ ಎನ್ನುವ ಒಂದೇ ಕಾರಣಕ್ಕೆ ಆರೋಪಿಗಳನ್ನು ಬಿಡುಗಡೆ ಮಾಡಬಹುದಾಗಿದೆ. *(ಎಂ.ಎ. ಬ್ರಿಟ್ಟೋ, ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಗಳ (ದೌರ್ಜನ್ಯ ತಡೆ) ಕಾಯ್ದೆಯ ಅನುಷ್ಠಾನ 1989 (ತಮಿಳ್), ಮಧುರೈ: ಡಾಕ್ಟರ್ ಅಂಬೇಡ್ಕರ್ ಸಾಂಸ್ಕೃತಿಕ ಅಕಾಡೆಮಿ, 2007 ಪುಟ 205)*

***ದೌರ್ಜನ್ಯ ತಡೆ ಕಾಯ್ದೆ ಅನುಷ್ಠಾನಕ್ಕೆ ಪೋಲೀಸರಿಗಿರುವ ಭಾವಶೂನ್ಯತೆ ಮತ್ತು ಪೂರ್ವಾಗ್ರಹ ಮನೋಭಾವನೆಗೆ ಕಾರಣ?***

- ಪೋಲೀಸ್ ಮತ್ತು ಕಂದಾಯ ಅಧಿಕಾರಿಗಳಲ್ಲಿ ಹೆಚ್ಚಿನವರು ಪ್ರಬಲ ಜಾತಿಯ ಹಿನ್ನೆಲೆಯವರಿದ್ದಾರೆ.
- ಪರಿಶಿಷ್ಟರ ಮೇಲೆ ಆಗುವ ದೌರ್ಜನ್ಯ ಮತ್ತು ಪಕ್ಷಪಾತವನ್ನು ಗಂಭೀರವಾಗಿ ಪರಿಗಣಿಸಲು ಪೋಲೀಸರಲ್ಲಿ ಸೂಕ್ಷ್ಮತೆ ಬೆಳೆಸಿಲ್ಲ. ಬದಲಾಗಿ ಪರಿಶಿಷ್ಟರು ಪ್ರಬಲರ ಮಾತು ಕೇಳದಿರುವುದೇ ತಪ್ಪು ಎನ್ನುವ ಮನೋಭಾವನೆ ಹೊಂದಿರುತ್ತಾರೆ. ಪರಿಶಿಷ್ಟರ ಮೇಲಿನ ದೌರ್ಜನ್ಯ ಮತ್ತು ಪಕ್ಷಪಾತ ಒಂದು ಅಪರಾಧವೆಂದು ಅವರು ಪರಿಗಣಿಸುವುದೇ ಇಲ್ಲ
- ಅನೇಕ ಅಧಿಕಾರಿಗಳಿಗೆ ದೌರ್ಜನ್ಯ ತಡೆ ಕಾಯ್ದೆ ಕುರಿತು ಮಾಹಿತಿಯಿಲ್ಲ.

***ಭಾರತದ ವರದಿಯಲ್ಲಿ ಸಿಇಆರ್‌ಡಿಯ ಶಿಫಾರಸ್ಸುಗಳು***

**ಪರಿಶಿಷ್ಟರಿಗೆ ಪರಿಣಾಮಕಾರಿ ರಕ್ಷಣೆ ಸಿಗಬೇಕು; ದೌರ್ಜನ್ಯ ತಡೆ ಕಾಯ್ದೆಯ ದೂರು ಮತ್ತು ಕ್ರಿಮಿನಲ್ ಕಾನೂನುಗಳನ್ನು ಸರಿಯಾಗಿ ದಾಖಲಿಸಿ ತನಿಖೆ ಕೈಗೊಳ್ಳಬೇಕು. ದುಷ್ಕರ್ಮಿಗಳನ್ನು ವಿಚಾರಣೆಗೊಳಪಡಿಸಿ ಶಿಕ್ಷೆ ವಿಧಿಸುವಂತಾಗಬೇಕು ಹಾಗೂ ದೌರ್ಜನ್ಯಕ್ಕೆ ಬಲಿಯಾದವರಿಗೆ ಸೂಕ್ತ ಪರಿಹಾರ ಮತ್ತು ಪುನರ್ವಸತಿ ಕಲ್ಪಿಸಬೇಕು; ಪೋಲೀಸ್, ನ್ಯಾಯಧೀಶರು ಮತ್ತು ಪ್ರಾಸಿಕ್ಯೂಟರುಗಳಿಗೆ ದೌರ್ಜನ್ಯ ತಡೆ ಕಾಯ್ದೆಯ ತರಬೇತಿ ಕಡ್ಡಾಯವಾಗಬೇಕು; ಕಾಯ್ದೆ ಅನುಷ್ಠಾನ ಮಾಡಬೇಕಿರುವ ಅಧಿಕಾರಿಗಳು ದೌರ್ಜನ್ಯದ ಪ್ರಕರಣಗಳಲ್ಲಿ ರಕ್ಷಣೆ, ತನಿಖೆ ಅಥವಾ ಕರ್ತವ್ಯ ನಿರ್ಲಕ್ಷಿಸಿದರೆ ಶಿಸ್ತು ಅಥವಾ ಕ್ರಿಮಿನಲ್ ಕ್ರಮ ಕೈಗೊಳ್ಳಬೇಕು.**

*ಸಿಇಆರ್‌ಡಿ/ಸಿ/ಐಎನ್‌ಡಿ/ಸಿಒ/19, 5 ಮೇ 2007, ಪ್ಯಾರಾ 14 ಮತ್ತು 26*

# 20 ವರ್ಷಗಳ ಅನುಷ್ಠಾನ ವ್ಯವಸ್ಥೆ –ನ್ಯಾಯಾಂಗ

## I. ಅಳತೆಗೋಲು

- ವ್ಯಕ್ತಿಯೊಬ್ಬರ ಹಕ್ಕು ಉಲ್ಲಂಘನೆಯಾದರೆ, ಅವರಿಗೆ ಪರಿಣಾಮಕಾರಿ ಪರಿಹಾರ ಸಿಗಬೇಕು ಮತ್ತು ಆ ಪರಿಹಾರ ಮಾನ್ಯತೆಯಿರುವ ನ್ಯಾಯಾಂಗ, ಆಡಳಿತ ಅಥವಾ ಶಾಸನಳ ಮೂಲಕ ಸಿಗುವಂತಿರಬೇಕು. *(ಅನುಚ್ಚೇದ 2(3) ಐಸಿಸಿಪಿಆರ್)*
- ಜನಾಂಗೀಯ ಬೇಧಭಾವ ಆದಲ್ಲಿ, ರಾಜ್ಯವು ಪರಿಣಾಮಕಾರಿ ರಕ್ಷಣೆ ಮತ್ತು ಪರಿಹಾರ ನೀಡಬೇಕು *(ಅನುಚ್ಚೇದ. 6 ಐಸಿಇಆರ್‌ಡಿ)* ಹಾಗೂ ನ್ಯಾಯ ನೀಡುವ ಸಂಸ್ಥೆಗಳು ಎಲ್ಲರನ್ನೂ ಸಮಾನವಾಗಿ ಕಾಣಬೇಕು. *(ಅನುಚ್ಚೇದ 5(ಎ)ಐಸಿಇಆರ್‌ಡಿ)*
- ಕಾನೂನಿನ ಎದುರು ಎಲ್ಲರೂ ಸಮಾನರು ಮತ್ತು ಕಾನೂನು ಯಾವುದೇ ಪಕ್ಷಪಾತಕ್ಕೆ ಅವಕಾಶ ನೀಡದೆ ಎಲ್ಲರಿಗೂ ಸಮಾನ ರಕ್ಷಣೆ ನೀಡುತ್ತದೆ. *(ಅನುಚ್ಚೇದ 26 ಐಸಿಸಿಪಿಆರ್; ಅನುಚ್ಚೇದ 14 ಭಾರತದ ಸಂವಿಧಾನ)*
- ಪ್ರಕರಣಗಳ ವಿಲೇವಾರಿಗೆ ಅನಗತ್ಯ ಕಾಲಹರಣ ಮಾಡದೆ ತ್ವರಿತವಾಗಿ ವಿಲೇವಾರಿ ಮತ್ತು ಆದೇಶ ನೀಡುತ್ತಾ ದೌರ್ಜನ್ಯಕ್ಕೆ ಬಲಿಯಾದವರ ಅಗತ್ಯಗಳನ್ನು ಪೂರೈಸಬೇಕು. *(ಅನುಚ್ಚೇದ 6(ಇ) ದೌರ್ಜನ್ಯಕ್ಕೆ ಬಲಿಯಾದವರಿಗೆ ದೊರಕಬೇಕಿರುವ ನ್ಯಾಯದ ಮೂಲ ತತ್ವಗಳ ಘೋಷಣೆ 1985)*
- ರಾಷ್ಟ್ರೀಯ ಕಾರ್ಯತಂತ್ರಗಳನ್ನು ಕಾರ್ಯಗತಗೊಳಿಸಲು ರಾಜ್ಯದ ಪ್ರಯತ್ನ: (i) ನ್ಯಾಯಾಂಗ ಮತ್ತು ಪೋಲೀಸ್ ಇಲಾಖೆಯಲ್ಲಿ ಜನಾಂಗೀಯ/ಮೂಲವಾಸಿಗಳವರು ಸರಿಯಾಗಿ ಪ್ರತಿನಿಧಿಸಬೇಕು; ಮತ್ತು (ii) ದೌರ್ಜನ್ಯ ತಡೆ, ತನಿಖೆ ಮತ್ತು ಕಾನೂನು ಕ್ರಮಗಳಿಗೆ ಮಾರ್ಗದರ್ಶನ ಒಳಗೊಂಡು ಜನಾಂಗೀಯ ಬೇಧಭಾವ ನಿರ್ಮೂಲಗೊಳಿಸಲು ಕಾರ್ಯಯೋಜನೆ ಅನುಷ್ಠಾಗೊಳಿಸಬೇಕು. *(ಪ್ಯಾರಾ 5 ಸಿಇಆರ್‌ಡಿ ಸಾಮಾನ್ಯ ಶಿಫಾರಸ್ಸುಗಳು XXXI 2005)*
- ಪರಿಶಿಷ್ಟರ ಕುರಿತು ನ್ಯಾಯಾಧೀಶರಲ್ಲಿ ಮತ್ತು ನ್ಯಾಯಾಂಗ ಸಿಬ್ಬಂಧಿಗಳಲ್ಲಿ ಪೂರ್ವಾಗ್ರಹ ಭಾವನೆ ಇರದಂತೆ, ಒತ್ತಡ ಹೇರುವ, ಸಿದ್ಧಾಂತಗಳ, ಧರ್ಮ ಮತ್ತು ಚರ್ಚುಗಳ ಪ್ರಭಾವದಿಂದ ಸೃಷ್ಟಿಯಾಗುವ ಪೂರ್ವಾಗ್ರಹ ಭಾವನೆ ಮೂಡದಂತೆ ರಾಜ್ಯವು ನೋಡಿಕೊಳ್ಳಬೇಕು. *(ಪ್ಯಾರಾಗಳು 31–32 ಸಿಇಆರ್‌ಡಿ ಸಾಮಾನ್ಯ ಶಿಫಾರಸ್ಸುಗಳು XXXI 2005)*
- *ಸರ್ವೋಚ್ಚ ನ್ಯಾಯಾಲಯ:* ತ್ವರಿತ ವಿಚಾರಣೆ ಸಾಮಾಜಿಕ ನ್ಯಾಯದ ಒಂದು ಅಂಶ...*(ಬಾಬು ಸಿಂಗ್ V/s ಉತ್ತರಪ್ರದೇಶ ರಾಜ್ಯ(1978) ಕ್ರಿ.ಲಾ.ಜ.651),* ತ್ವರಿತ ವಿಚಾರಣೆ ಒಂದು ಮೂಲಭೂತ ಹಕ್ಕು...*(ಶೀಲ ಬರ್ಸೆ V/s ಭಾರತ ಸರ್ಕಾರ (1986) ಕ್ರಿ.ಲಾ.ಜ 1736)*
- ತ್ವರಿತ ವಿಚಾರಣೆಗಾಗಿ, ಪ್ರತಿ ಜಿಲ್ಲೆಯಲ್ಲಿರುವ, ಸೆಷನ್ ನ್ಯಾಯಾಲಯವನ್ನೇ ವಿಶೇಷ ನ್ಯಾಯಾಲಯವಾಗಿ ರಾಜ್ಯ ಸರ್ಕಾರ ಘೋಷಿಸಿ ಕಾಯ್ದೆಯ ಪ್ರಕರಣಗಳನ್ನು ವಿಚಾರಣೆ ಮಾಡಿಸಬಹುದು *(ಕಲಂ. 14 ಪರಿಶಿಷ್ಟ ಜಾತಿ ಮತ್ತು ಪಂಗಡಗಳ (ದೌರ್ಜನ್ಯ ತಡೆ) ಕಾಯ್ದೆ)*
- ಪ್ರತಿ ವಿಶೇಷ ಕೋರ್ಟಿನಲ್ಲಿಯೂ ಪ್ರಕರಣ ನಿರ್ವಹಿಸಲು, ರಾಜ್ಯ ಸರ್ಕಾರ ಒಬ್ಬ ವಿಶೇಷ ಸಾರ್ವಜನಿಕ ಪ್ರಾಸಿಕ್ಯೂಟರನ್ನು ನೇಮಿಸಬೇಕು. *(ಕಲಂ. 15 ಪರಿಶಿಷ್ಟ ಜಾತಿ ಮತ್ತು ಪಂಗಡಗಳ (ದೌರ್ಜನ್ಯ ತಡೆ) ಕಾಯ್ದೆ)*

**ಹೆಚ್ಚಿನ ಮಾಹಿತಿಗೆ–** (1) ಅನುಚ್ಚೇದ 14 ಐಸಿಸಿಪಿಆರ್; (2) ಅನುಚ್ಚೇದ 15(1) ಸಿಇಡಿಎಡಬ್ಲ್ಯು; (3) ಪ್ಯಾರಾಗಳು 22–23 ಸಿಇಆರ್‌ಡಿ ಸಾಮಾನ್ಯ ಶಿಫಾರಸ್ಸುಗಳು XXIX 2002; (4) ಪ್ಯಾರಾಗಳು 9, 15 ಮತ್ತು 33 ಸಿಇಆರ್‌ಡಿ ಸಾಮಾನ್ಯ ಶಿಫಾರಸ್ಸುಗಳು XXXI 2005

## II. ನಿಜಾಂಶ?

### 1. ಇತ್ಯರ್ಥವಾಗದ ಹೆಚ್ಚಿನ ದೌರ್ಜನ್ಯ ಪ್ರಕರಣಗಳು

- 2007ರ ಅಂತ್ಯಕ್ಕೆ ದೇಶದೆಲ್ಲೆಡೆ ಕ್ರಿಮಿನಲ್ ಕೋರ್ಟುಗಳಲ್ಲಿ ಪರಿಶಿಷ್ಟರ ಮೇಲಾದ ದೌರ್ಜನ್ಯ ಪ್ರಕರಣಗಳಲ್ಲಿ ಶೇ. 79% ವಿಚಾರಣೆಗಳು ಬಾಕಿ ಇದ್ದವು. 2001ರಲ್ಲಿ ಶೇ. 85%ರಷ್ಟು ಬಾಕಿಯಿದ್ದ ಪ್ರಕರಣಗಳಲ್ಲಿ ಗಮನಾರ್ಹ ಸುಧಾರಣೆಯಾಗಿಲ್ಲ. 1997–2007 ಅವಧಿಗೆ ದೌರ್ಜನ್ಯ ತಡೆ ಕಾಯ್ದೆಯಲ್ಲಿ ದಾಖಲಾದ ಕೇಸುಗಳಲ್ಲಿ ಬಾಕಿಯಿರುವ ಪ್ರಮಾಣವೂ ಶೇ. 80%ಕ್ಕಿಂತ ಕಡಿಮೆಯಾಗಿಲ್ಲ. ಪ್ರಕರಣಗಳ ಬಾಕಿ ಸರಾಸರಿ ಶೇ.82.9% ಇದೆ. ***ದೌರ್ಜನ್ಯ ತಡೆ ಕಾಯ್ದೆ, ಪಿ.ಸಿ.ಆರ್ ಕಾಯ್ದೆ ಮತ್ತು ಐ.ಪಿ.ಸಿ ಅಡಿಯಲ್ಲಿ ಇತ್ಯರ್ಥ ಆಗದಿರುವ ಪ್ರಕರಣಗಳ ಪ್ರಮಾಣ ಹೆಚ್ಚು ಕಡಿಮೆ ಒಂದೇ ಆಗಿದೆ ಮತ್ತು ದೌರ್ಜನ್ಯ ತಡೆ ಕಾಯ್ದೆಯಲ್ಲಿರುವ ಪ್ರಕರಣಗಳ ವಿಚಾರಣೆ ತ್ವರಿತವಾಗಿ ಆಗುತ್ತಿಲ್ಲ ಎನ್ನುವುದು ಸತ್ಯ, ಏಕೆ?***

**1997–2007 ಅವಧಿಗೆ ಪರಿಶಿಷ್ಟರ ಮೇಲಾದ ದೌರ್ಜನ್ಯ ಪ್ರಕರಣಗಳಲ್ಲಿ ಬಾಕಿ ಪ್ರಮಾಣ**

| ಇಸವಿ | a) ಬಾಕಿ ವಿಚಾರಣೆ ವರ್ಷದ ಪ್ರಾರಂಭಕ್ಕೆ ಬಾಕಿ ಇದ್ದವೂ ಸೇರಿ | b) ಬಾಕಿ ವಿಚಾರಣೆ ವರ್ಷದ ಕೊನೆಗೆ ಬಾಕಿ ಇದ್ದವೂ ಸೇರಿ | ಬಾಕಿ ವಿಚಾರಣೆ ಪ್ರಮಾಣ (%) [(a)-(b)/100] |
|---|---|---|---|
| 1997 | 45,591 | 37,299 | 81.8 |
| 1998 | 47,155 | 39,447 | 83.7 |
| 1999 | 49,703 | 40,963 | 82.4 |
| 2000 | 50,908 | 43,044 | 84.6 |
| 2001 | 52,314 | 43,602 | 83.3 |
| 2002 | 53,481 | 44,061 | 82.4 |
| 2003 | 51,278 | 42,487 | 82.9 |
| 2004 | 49,180 | 40,533 | 82.4 |
| 2005 | 47,688 | 39,595 | 83.0 |
| 2006 | 46,421 | 38,576 | 83.1 |
| 2007 | 46,091 | 37,895 | 82.2 |

*(ಭಾರತದಲ್ಲಿ ಅಪರಾಧಗಳು, ದಾಖಲೆ ಬ್ಯೂರೋ, 1997–2007, 1998–2008)*

- 1998–2001ರ ಅವಧಿಗೆ ತಮಿಳುನಾಡಿನ ಹೆಚ್ಚುವರಿ ವಿಶೇಷ ಸೆಷನ್ ಕೋರ್ಟುಗಳಲ್ಲಿ ಪರಿಶಿಷ್ಟರ ಮೇಲಾದ ದೌರ್ಜನ್ಯ ಪ್ರಕರಣಗಳಲ್ಲಿ ಬಾಕಿಯಿರುವ ಪ್ರಮಾಣ ಸರಾಸರಿ ಶೇ.82.2%. 2000 ಇಸವಿಯಲ್ಲಿ ಶೇ.10.3% ಪ್ರಕರಣಗಳ ವಿಚಾರಣೆ ಪೂರ್ಣವಾಗಿದೆ. ಶಿಕ್ಷೆಯಾದ ಪ್ರಕರಣಗಳ ಪ್ರಮಾಣ, ಶೇ.10.4%.

ಆದರೆ ಇಲಾಖೆ ಮಾತ್ರ "ವಿಶೇಷ ನ್ಯಾಯಾಲಯದ ಪ್ರಕರಣಗಳ ವಿಲೇವಾರಿ ಉತ್ತೇಜನಕಾರಿಯಾಗಿದೆಯೆಂದು" ವರದಿ ಮಾಡಿದೆ *(ಆದಿ ದ್ರಾವಿಡ ಮತ್ತು ಅರಣ್ಯವಾಸಿಗಳ ಕಲ್ಯಾಣ ಇಲಾಖೆ, ಪರಿಶಿಷ್ಟ ಜಾತಿ ಮತ್ತು ಪಂಗಡಗಳ ರಾಷ್ಟ್ರೀಯ ಆಯೋಗದ ಅಧ್ಯಕ್ಷರಿಗೆ ಪರಿಶೀಲಿಸಲು ಟಿಪ್ಪಣಿಗಳು, ಚೆನ್ನೈ, 2002, ಹೇಳಿಕೆ IV)*

2. ತ್ವರಿತ ವಿಚಾರಣೆ: ವಿಶೇಷ ನ್ಯಾಯಾಲಯಗಳ ಕೊರತೆ

- ***ಎಲ್ಲಾ ಜಿಲ್ಲೆಗಳಲ್ಲಿಯೂ ವಿಶೇಷ ನ್ಯಾಯಾಲಯಗಳ ಕೊರತೆ:*** ಎಲ್ಲಾ ರಾಜ್ಯಗಳ ಎಲ್ಲಾ ಜಿಲ್ಲೆಗಳಲ್ಲಿ ಮತ್ತು ಕೇಂದ್ರಾಡಳಿತ ಪ್ರದೇಶಗಳಲ್ಲಿ ಜಿಲ್ಲಾ ಸೆಷನ್ ನ್ಯಾಯಾಲಯಗಳನ್ನೇ ವಿಶೇಷ ನ್ಯಾಯಾಲಯ ಎಂದು ಘೋಷಿಸಲಾಗಿದೆ. ಅರುಣಾಚಲ ಪ್ರದೇಶ, ಮಿಜೋರಾಂ ಮತ್ತು ನಾಗಾಲ್ಯಾಂಡ್‌ಗಳಲ್ಲಿ ಅರಣ್ಯವಾಸಿಗಳ ಪ್ರಾಬಲ್ಯ ಹೆಚ್ಚಿರುವುದರಿಂದ ಇವುಗಳನ್ನು ಹೊರತುಪಡಿಸಲಾಗಿದೆ. ಜಮ್ಮು ಮತ್ತು ಕಾಶ್ಮೀರದಲ್ಲಿ ದೌರ್ಜನ್ಯ ತಡೆ ಕಾಯ್ದೆಗೆ ಮಾನ್ಯತೆ ಇಲ್ಲ, ಆದ್ದರಿಂದ ಇವುಗಳನ್ನೂ ಹೊರತುಪಡಿಸಲಾಗಿದೆ *(ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಸಚಿವಾಲಯ, ದೌರ್ಜನ್ಯ ತಡೆ ಕಾಯ್ದೆ ಸೆಕ್ಷನ್ 21(4)ರಲ್ಲಿ ವರದಿ 2006, ನವದೆಹಲಿ 2007, ಪುಟ 7).*
- ಆದರೆ, ಕಾಯ್ದೆಯ ಸೆಕ್ಷನ್ 14ಕ್ಕೆ ವಿರುದ್ಧವಾಗಿ **113 ಜಿಲ್ಲೆಗಳಲ್ಲಿ ವಿಶೇಷ ನ್ಯಾಯಾಲಯ ಸ್ಥಾಪನೆಯಾಗಿಲ್ಲ.** *(ಪರಿಶಿಷ್ಟರ ವಿರುದ್ಧ ದೌರ್ಜನ್ಯಕ್ಕೆ ಜನರ ಆಯೋಗ, ಕರಡು ವೀಕ್ಷಣೆ ಹಾಗೂ ಪರಿಶಿಷ್ಟ ಜಾತಿ ಮತ್ತು ಪಂಗಡಗಳವರ ವಿರುದ್ಧ ದೌರ್ಜನ್ಯಕ್ಕೆ ಪರಿಣಾಮಕಾರಿ ಕ್ರಮ ಕೈಗೊಳ್ಳಲು ಸಲಹೆಗಳು, ನವದೆಹಲಿ, 2008, ಪುಟ4)*
- "ಘೋಷಿಸಿರುವ ವಿಶೇಷ ನ್ಯಾಯಾಲಯಗಳಲ್ಲಿ ಕೇಸುಗಳನ್ನು ಎಳೆಯಲಾಗುತ್ತದೆ, ಇದರಿಂದ ಸಾಕ್ಷಿಗಳಿಗೆ ಆಸಕ್ತಿ ಕುಗ್ಗುತ್ತದೆ. ಸೆಷನ್ ನ್ಯಾಯಾಲಯದಲ್ಲಿ ಇತರೆ ಪ್ರಕರಣಗಳ ವಿಚಾರಣೆಯೂ ನಡೆಯುತ್ತವೆ ಹಾಗಾಗಿ ಪರಿಶಿಷ್ಟರ ಮೇಲಾದ ದೌರ್ಜನ್ಯ ಪ್ರಕರಣಗಳಿಗೆ ನ್ಯಾಯ ಕೊಡಿಸುವ ಸ್ಥಿತಿಯಲ್ಲಿ ಸೆಷನ್ ನ್ಯಾಯಾಲಯಗಳಿಗೆ ಇಲ್ಲ... **ದೌರ್ಜನ್ಯ ಪ್ರಕರಣ** *(ಪ.ಜಾತಿ ಮತ್ತು ಪಂಗಡಗಳ ರಾಷ್ಟ್ರೀಯ ಆಯೋಗ, ನಾಲ್ಕನೇ ವರದಿ, 1997–97 ಮತ್ತು 1997–98, ನವದೆಹಲಿ, ಪ್ಯಾರಾ 9.17)*

**ರಾಜ್ಯ ಸರ್ಕಾರಗಳಿಗೆ ಕೇಂದ್ರ ಸರ್ಕಾರದ ಸಲಹೆಗಳು:**

⇒ ದೌರ್ಜನ್ಯ ಕಾಯ್ದೆಯಡಿ ತ್ವರಿತ ವಿಚಾರಣೆ ಮಾಡಲು ಕನಿಷ್ಠ ದೌರ್ಜನ್ಯಪೀಡಿತ ಜಿಲ್ಲೆಗಳಲ್ಲಿ ಪ್ರತ್ಯೇಕ ವಿಶೇಷ ನ್ಯಾಯಾಲಯ ಸ್ಥಾಪಿಸಿರಿ... *(ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಸಚಿವಾಲಯ ಆದೇಶ ಸಂಖ್ಯೆ: 11020/1/2003–ಪಿಸಿಆರ್(ಡೆಸ್ಕ್), ದಿನಾಂಕ 7/10/2003)*

⇒ ದೌರ್ಜನ್ಯ ಕಾಯ್ದೆಯಡಿ ತ್ವರಿತ ಮತ್ತು ಪರಿಣಾಮಕಾರಿ ವಿಚಾರಣೆ ಮುಗಿಸಲು ಎಲ್ಲಾ ಜಿಲ್ಲೆಗಳಲ್ಲಿ ಪ್ರತ್ಯೇಕ ವಿಶೇಷ ನ್ಯಾಯಾಲಯ ಸ್ಥಾಪಿಸಿ; ಮತ್ತು ಹಣ(ಫೀ) ಕೊಟ್ಟು ವಿಶೇಷ ಪಬ್ಲಿಕ್ ಪ್ರಾಸಿಕ್ಯೂಟರನ್ನು ನೇಮಿಸಿ ಮತ್ತು ಕಾಯ್ದೆಯ ಹೆಚ್ಚಿನ ಪ್ರಕರಣಗಳಲ್ಲಿ ನಿರ್ದೋಷಿತನ ಸಾಬೀತಾಗುತ್ತಿದೆ, ಈ ಹಿನ್ನೆಲೆಯಲ್ಲಿ ಪರಿಶೀಲಿಸಿ...*(ಗೃಹ ಸಚಿವಾಲಯ, ಆದೇಶ ಸಂಖ್ಯೆ: 24024/9/2004–ಪ.ಜಾ/ಪ.ಪಂ ಕೋಶ, ದಿನಾಂಕ: 03/02/2005)*

⇒ ದೌರ್ಜನ್ಯ ವಿಶೇಷವಾಗಿ ಹೆಚ್ಚಿರುವ ಜಿಲ್ಲೆಗಳಲ್ಲಿ ಪ್ರತ್ಯೇಕ ವಿಶೇಷ ನ್ಯಾಯಾಲಯಗಳನ್ನು ಸ್ಥಾಪಿಸಿ......*(ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಸಚಿವಾಲಯ, ಆದೇಶ ಸಂಖ್ಯೆ 11011/8/2007–ಪಿ.ಸಿ.ಆರ್ (ಡೆಸ್ಕ್), 14/03/2006)*

**ಸ್ವಲ್ಪ ಸಕಾರಾತ್ಮ ಪ್ರವೃತ್ತಿ... ಹೆಚ್ಚು ನಿರ್ಲಕ್ಷಕ್ಕೊಳಗಾಗಿದೆ**

- ***ಕೆಲವು ವಿಶೇಷ ನ್ಯಾಯಾಲಯಗಳು:*** ಈ ಕಾಯ್ದೆಯ ಪ್ರಕರಣ ಇತ್ಯರ್ಥಗೊಳಿಸಲು 35 ರಾಜ್ಯ/ಕೇಂದ್ರಾಡಳಿತ ಪ್ರದೇಶಗಳಲ್ಲಿ, 9 ರಾಜ್ಯ/ಕೇಂದ್ರಾಡಳಿತ ಪ್ರದೇಶಗಳು ಪ್ರತ್ಯೇಕ ವಿಶೇಷ ನ್ಯಾಯಾಲಯ ಸ್ಥಾಪಿಸಿವೆ. ಹೀಗೆ ಪ್ರತ್ಯೇಕ ವಿಶೇಷ ನ್ಯಾಯಾಲಯ ಸ್ಥಾಪಿಸಿರುವ ರಾಜ್ಯಗಳಲ್ಲಿಯೂ: (i) **ವಿಶೇಷ ನ್ಯಾಯಲಯಗಳಿಗಿಂತ ದೌರ್ಜನ್ಯ ಪೀಡಿತ ಜಿಲ್ಲೆಗಳು ಹೆಚ್ಚಾಗಿವೆ;** (ii) ಸುಮಾರು 50% ಜಿಲ್ಲೆಗಳಲ್ಲಿ ಇಂತಹ ನ್ಯಾಯಾಲಯಗಳನ್ನು ಸ್ಥಾಪಿಸಿಲ್ಲ.

**1997–2007ರ ಅವಧಿಗೆ**
**ಪರಿಶಿಷ್ಟರ ಮೇಲಿನ ದೌರ್ಜನ್ಯಗಳಲ್ಲಿ ಬಾಕಿ ಪ್ರಕರಣಗಳು**

| ರಾಜ್ಯ | ಗುರುತಿಸಲ್ಪಟ್ಟ ದೌರ್ಜನ್ಯಪೀಡಿತ ಜಿಲ್ಲೆಗಳು | ಜಿಲ್ಲೆಗಳಲ್ಲಿ ಪ್ರತ್ಯೇಕ ವಿಶೇಷ ನ್ಯಾಯಾಲಯ (ಒಟ್ಟು ಜಿಲ್ಲೆಗಳ%) | ವಿಶೇಷ ನ್ಯಾಯಾಲಯ ಇಲ್ಲದ ಜಿಲ್ಲೆ |
|---|---|---|---|
| ಉತ್ತರ ಪ್ರದೇಶ | 20 | 40(55.6%) | 32 |
| ಮಧ್ಯಪ್ರದೇಶ | 19 | 29(64.4%) | 16 |
| ರಾಜಸ್ಥಾನ | 0 | 17(51.5%) | 16 |
| ಆಂಧ್ರ ಪ್ರದೇಶ | 12 | 12(52.2%) | 11 |
| ಬಿಹಾರ | 33 | 11(28.9%) | 27 |
| ಗುಜರಾತ್ | 12 | 10(40.0%) | 15 |
| ಛತ್ತೀಸ್‌ಘರ್ | 0 | 7(38.9%) | 11 |
| ಕರ್ನಾಟಕ | 15 | 7(25.9%) | 20 |
| ತಮಿಳುನಾಡು | 28 | 4(13.3%) | 26 |
| ಒರಿಸ್ಸಾ | 19 | 0 | 30 |
| ಮಹಾರಾಷ್ಟ್ರ | 31 | 0 | 35 |
| ಕೇರಳ | 3 | 0 | 14 |
| ಜಾರ್ಖಂಡ | 1 | 0 | 18 |
| **ಒಟ್ಟು** | **192** | **137** | **271** |

*(ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಸಚಿವಾಲಯ, ದಿನಾಂಕ 1/12/2009* www.socialjustice.nic.in/excourt.php ಮತ್ತು www.socialjustice.nic.in/pronearea.php *ದಿನಾಂಕ 1/12/2009; ಎನ್.ಸಿ.ಆರ್.ಬಿ. ಭಾರತದಲ್ಲಿ ಕ್ರೈಂ, 1995–2007, ನವದೆಹಲಿ, 1996–2000)*

- ದೌರ್ಜನ್ಯ ಆದ ಸ್ಥಳದಲ್ಲಿ ಆ ಕ್ಷಣ ಶಿಕ್ಷೆ ವಿಧಿಸಲು **ವಿಶೇಷ ಸಂಚಾರಿ ನ್ಯಾಯಾಲಯ** ಸ್ಥಾಪಿಸಬೇಕು. ಇಲ್ಲದಿರುವುದು ದೊಡ್ಡ ನ್ಯೂನತೆ. ಸಂಚಾರಿ ನ್ಯಾಯಾಲಯ ಇರುವ ಕಡೆಗಳಲ್ಲಿ ಮತ್ತು ಆ ಕ್ಷಣ ಶಿಕ್ಷೆ ವಿಧಿಸಿರುವಲ್ಲಿ ಪ್ರದೇಶಗಳಲ್ಲಿ ಕೆಲವು ಕಾಲ ಅಸ್ಪೃಶ್ಯತೆ ಕಡಿಮೆಯಾಗಿ ಪರಿಣಾಮವಾಗಿರುವುದನ್ನು ಸ್ವತ: ನೋಡಿದ್ದೇನೆ... *(ಪಿ.ಎಸ್. ಕ್ರಿಷ್ಣನ್, ಪರಿಶಿಷ್ಟರ ವಿರುದ್ಧ ದೌರ್ಜನ್ಯ ತಡೆ ವರದಿ)*

*⇒ ಪ್ರತ್ಯೇಕ ವಿಶೇಷ ನ್ಯಾಯಾಲಯ ಇರುವ ರಾಜ್ಯಗಳಲ್ಲಿಯೂ ಪರಿಶಿಷ್ಟರ ಮೇಲಾದ ಹೆಚ್ಚಿನ ದೌರ್ಜನ್ಯ ಪ್ರಕರಣ ಬಾಕಿಯಾಗಿವೆ, ಏಕೆ? ಇದರಿಂದ ಈಗಿನ ನ್ಯಾಯಾಲಯ ವ್ಯವಸ್ಥೆ ದೌರ್ಜನ್ಯಕ್ಕೊಳಗಾದ ಪರಿಶಿಷ್ಟರಿಗೆ ತ್ವರಿತ ವಿಚಾರಣೆ ಗ್ಯಾರಂಟಿಗೊಳಿಸಲು ಪೂರ್ಣ ಅಸಮರ್ಪಕ ಎಂದು ಸೂಚಿಸುತ್ತದೆ, ಅಲ್ಲವೇ? ಹಾಗೂ ಈಗಿನ ಪ್ರತ್ಯೇಕ ವಿಶೇಷ ನ್ಯಾಯಾಲಯಗಳಲ್ಲಿ ಪರಿಶಿಷ್ಟರ ಮೇಲಿನ ದೌರ್ಜನ್ಯ ಪ್ರಕರಣಗಳಲ್ಲದೆ ಬೇರೆ ಪ್ರಕರಣಗಳು ಹೆಚ್ಚಿದ್ದು, ಪರಿಶಿಷ್ಟರಿಗೆ ಎಷ್ಟರ ಮಟ್ಟಿಗೆ ಪ್ರಾಮುಖ್ಯತೆ ಸಿಗುತ್ತದೆ?*

*⇒ ಅನುಷ್ಠಾನಕ್ಕೆ ಸಂಬಂಧಿಸಿ, ರಾಜ್ಯಗಳಲ್ಲಿರುವ ಕಾನೂನು, ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಸಚಿವಾಲಯಗಳ ಸಲಹಾ ಸಮಿತಿ ಮೇಲ್ವಿಚಾರಣೆ ಮಾಡುತ್ತಿಲ್ಲ, ಏಕೆ? ಈ ಸಲಹಾ ಸಮಿತಿ ತ್ವರಿತ ಮತ್ತು ಪರಿಣಾಮಕಾರಿ ವಿಚಾರಣೆ ಗ್ಯಾರಂಟಿಗೊಳಿಸುವಂತೆ ನೋಡಲು ಕಡ್ಡಾಯ ಆಗಬೇಕಲ್ಲವೇ?*

*⇒ ದೌರ್ಜನ್ಯ ಕಾಯ್ದೆಯಲ್ಲಿ ದಾಖಲಾಗುವ ಕೇಸುಗಳ ವಿಚಾರಣೆ ಆ ದಿನವೇ ಪೂರ್ಣಗೊಳಿಸಲು ಅಗತ್ಯವಿರುವ ವಿಶೇಷ ಪಬ್ಲಿಕ್ ಪ್ರಾಸಿಕ್ಯೂಟರ್ ಮತ್ತು ವಿಶೇಷ ತನಿಖೆ ಅಧಿಕಾರಿಗಳ ಸಹಾಯ ಪಡೆಯಲು ಸಾಧ್ಯವಾಗುವ ಹಾಗೆ ಕಾಯ್ದೆಯ ಸೆಕ್ಷನ್ 14ಕ್ಕೆ ತಿದ್ದುಪಡಿ ಆಗಬೇಕು, ಅಲ್ಲವೇ?*

### 3. ನ್ಯಾಯಾಧೀಶರು ಮತ್ತು ವಿಶೇಷ ಪಬ್ಲಿಕ್ ಪ್ರಾಸಿಕ್ಯೂಟರ್ ಕೊರತೆ

- ***ಖಾಲಿಯಿರುವ ಹುದ್ದೆಗಳು:*** "ನ್ಯಾಯಾಲಯಗಳಲ್ಲಿ ಬಹಳಷ್ಟು ನ್ಯಾಯಾಧೀಶರ ಹುದ್ದೆಗಳನ್ನು ಭರ್ತಿ ಮಾಡದಿರುವುದು ದೌರ್ಜನ್ಯ ಪ್ರಕರಣಗಳು ಬಾಕಿಯಾಗಿರುವುದಕ್ಕೆ ಬಹು ಮುಖ್ಯ ಕಾರಣ. 2001 ಜುಲೈ 1ರಂದು 1,857 ಹುದ್ದೆಗಳು ಖಾಲಿಯಿದ್ದವು". *(ಪರಿಶಿಷ್ಟರ ಕಲ್ಯಾಣಕ್ಕೆ ಸಂಸತ್ತು ಸಮಿತಿ, 4ನೇ ವರದಿ 2004–05, ನವದೆಹಲಿ, 2005, ಪ್ಯಾರಾ 3.25)*
- ***ವಿಶೇಷ ಪಬ್ಲಿಕ್ ಪ್ರಾಸಿಕ್ಯೂಟರುಗಳ ಕೊರತೆ ಅಥವಾ ಸಾಮರ್ಥ್ಯವಿಲ್ಲದ ಪಬ್ಲಿಕ್ ಪ್ರಾಸಿಕ್ಯೂಟರುಗಳು:*** ಕಾಯ್ದೆಯ ಪ್ರಕರಣಗಳನ್ನು ನಿರ್ವಹಿಸಲು ಅನೇಕ ರಾಜ್ಯಗಳಲ್ಲಿ ಪಬ್ಲಿಕ್ ಪ್ರಾಸಿಕ್ಯೂಟರುಗಳು ನೇಮಕವಾಗಿಲ್ಲ. ನೇಮಕಾತಿಯಾಗಿರುವ ಪಬ್ಲಿಕ್ ಪ್ರಾಸಿಕ್ಯೂಟರುಳಿಗೆ ಸಾಮರ್ಥ್ಯ ಮತ್ತು ಅನುಭವದ ಕೊರತೆಯಿದೆ. ಇದಕ್ಕೆ ಬಹು ಮುಖ್ಯ ಕಾರಣ ಪಬ್ಲಿಕ್ ಪ್ರಾಸಿಕ್ಯೂಟರುಗಳಿಗೆ ನೀಡುವ ಸಂಭಾವನೆ ಬಹಳ ಕಡಿಮೆ ಮತ್ತು ಸೌಲಭ್ಯದ ಕೊರತೆ, ಇದರಿಂದಾಗಿ ಕೆಲಸ ಪರಿಣಾಮಕಾರಿಯಾಗಿ ನಿರ್ವಹಿಸದಂತೆ ಆಗುತ್ತದೆ. ನೇಮಕಾತಿಯೂ ಹೆಚ್ಚಾಗಿ ರಾಜಕೀಯ ಪ್ರಭಾವಕ್ಕೆ ಒಳಪಟ್ಟಿರುತ್ತದೆ." *(ಪರಿಶಿಷ್ಟ ಜಾತಿ ಮತ್ತು ಪಂಗಡಗಳ ರಾಷ್ಟ್ರೀಯ ಆಯೋಗ, ಆರನೇ ವರದಿ 1999–2000 ಮತ್ತು 2000–01, ನವದೆಹಲಿ, 2001, ಪ್ಯಾರಾ 9.9.6; ಮಾನವ ಹಕ್ಕುಗಳ ರಾಷ್ಟ್ರೀಯ ಆಯೋಗ, ಪರಿಶಿಷ್ಟ ಜಾತಿಯವರ ಮೇಲೆ ದೌರ್ಜನ್ಯ ತಡೆ ವರದಿ, ನವದೆಹಲಿ, 2002, ಪುಟಪ್ಯಾರಾ. 25–26, 123–4)*

*⇒ ಪಬ್ಲಿಕ್ ಪ್ರಾಸಿಕ್ಯೂಟರುಗಳಿಗೆ ಕೆಳಮಟ್ಟದ ಸೌಲಭ್ಯಗಳನ್ನು ಮತ್ತು ಸಂಭಾವನೆಯನ್ನು ನೀಡುವಾಗ ಅವರು ಪರಿಣಾಮಕಾರಿಯಾಗಿ ಕಾರ್ಯ ನಿರ್ವಹಿಸಬೇಕು ಎಂದು ಹೇಗೆ ತಾನೆ ನಿರೀಕ್ಷಿಸಲು ಸಾಧ್ಯ? ನ್ಯಾಯಾಲಯಗಳಲ್ಲಿ ಬಾಕಿ ಇರುವ ಪ್ರಕರಣಗಳನ್ನು ಗಮನಿಸಿದರೆ, ಈ ನಿಟ್ಟಿನಲ್ಲಿ ನ್ಯಾಯಾಧೀಶರ ಹುದ್ದೆಗಳು ಮತ್ತು ವಿಶೇಷ ಪಬ್ಲಿಕ್ ಪ್ರಾಸಿಕ್ಯೂಟರುಗಳ ಹುದ್ದೆಗಳನ್ನು ಒಟ್ಟಿಗೇ ಭರ್ತಿ ಮಾಡುವ ಪ್ರಯತ್ನಗಳು ಆಗಬೇಕಲ್ಲವೇ? ಈ ಸತ್ಯಾಂಶಗಳನ್ನು ಗಮನಿಸಿದರೆ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಗಳ ದೌರ್ಜನ್ಯ ಪ್ರಕರಣಗಳನ್ನು ಪ್ರಾಮಾಣಿಕವಾಗಿ ಮತ್ತು ಯಶಸ್ವಿಯಾಗಿ ನಿರ್ವಹಿಸಲು ರಾಜ್ಯ ಸರ್ಕಾರಗಳಿಗೆ ಆಸಕ್ತಿಯ ಕೊರತೆ ಇರುವುದನ್ನು ತೋರಿಸುವುದಿಲ್ಲವೇ?*

*⇒ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಗಳ (ದೌರ್ಜನ್ಯ ತಡೆ) ನಿಯಮಗಳ ನಿಯಮ 4 ಹಿರಿಯ ವಕೀಲರನ್ನು ವಿಶೇಷ ಪಬ್ಲಿಕ್ ಪ್ರಾಸಿಕ್ಯೂಟರುಗಳನ್ನಾಗಿ ನಿಯಮಿಸಬೇಕು ಹಾಗೂ ಅವರ ಕಾರ್ಯಸಾಧನೆಯ ವಿಮರ್ಶೆಯನ್ನು ವರ್ಷಕ್ಕೆ ಎರಡುಬಾರಿ ಮಾಡಬೇಕು, ಜೊತೆಗೆ ವಿಶೇಷ ನ್ಯಾಯಾಲಯಗಳಲ್ಲಿ ಇರುವ ಪ್ರಕರಣಗಳ ಪ್ರಗತಿಯನ್ನು ಪ್ರತಿ ತಿಂಗಳು ಪರಿಶೀಲನೆ ಮಾಡಬೇಕು ಎಂದು ಸ್ಪಷ್ಟವಾಗಿ ತಿಳಿಸಿದ ಹೊರತಾಗಿಯೂ, ಹೆಚ್ಚಿನ ದೌರ್ಜನ್ಯ ಪ್ರಕರಣಗಳು ನ್ಯಾಯಾಲಯಗಳಲ್ಲಿ ಏಕೆ ಬಾಕಿ ಉಳಿದುಕೊಂಡಿವೆ ಹಾಗೂ ಆರೋಪ ಸಾಬೀತು ಮಾಡುವ ಪ್ರಮಾಣ ಕಡಿಮೆ ಆಗುತ್ತಿದೆ?*

### 4. ನಿರೀಕ್ಷಣಾ ಜಾಮೀನು ಕಾಯ್ದೆಯ ಸ್ಪಷ್ಟ ಉಲ್ಲಂಘನೆ

- ***ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಕಲ್ಯಾಣಕ್ಕೆ ಸಂಸತ್ತು ಸಮಿತಿ:*** ದೌರ್ಜನ್ಯ ತಡೆ ಕಾಯ್ದೆಯ ಸೆಕ್ಷನ್ 18ರನ್ವಯ ಆರೋಪಿಗೆ ನಿರೀಕ್ಷಣಾ ಜಾಮೀನು ನೀಡಬಾರದೆಂದು ಮಧ್ಯಪ್ರದೇಶ V/s ರಾಮ ಕ್ರಿಷನ್ ಬಲೋಥಿಯ ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯ ಸ್ಪಷ್ಟವಾಗಿ ತಿಳಿಸಿದೆ. ಆದ್ದರಿಂದ ದೌರ್ಜನ್ಯ ತಡೆ ಕಾಯ್ದೆಯ ಸೆಕ್ಷನ್ 3ರನ್ವಯ ಯಾವುದೇ ಪ್ರಕರಣಗಳು ದಾಖಲಾದರೆ, ಯಾವ ಸನ್ನಿವೇಶದಲ್ಲೂ ಆರೋಪಿಗೆ ಜಾಮೀನು ನೀಡಲು ನ್ಯಾಯಾಲಯಕ್ಕೆ ಅಧಿಕಾರ ಇರುವುದಿಲ್ಲ.

  **ಆದರೂ** ಗುಜರಾತಿನಲ್ಲಿ (ನಿರ್ದಿಷ್ಟವಾಗಿ ಗುಜರಾತ್, ಇತರೆಡೆ ಸಾಮಾನ್ಯವಾಗಿ) ಸೆಷನ್ ನ್ಯಾಯಾಲಯಗಳು ದೌರ್ಜನ್ಯ ಪ್ರಕರಣದ ಆರೋಪಿಗಳಿಗೆ ನಿರೀಕ್ಷಣಾ ಜಾಮೀನು ನೀಡುವುದು ಸಮಿತಿಗೆ ನೋವುಂಟು ಮಾಡಿದೆ. *(ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಕಲ್ಯಾಣಕ್ಕೆ ಸಂಸತ್ತು ಸಮಿತಿ ತನ್ನ 4ನೇ ವರದಿಯಲ್ಲಿ 2004–05, ನವದೆಹಲಿ, 2005, ಪ್ಯಾರಾಗಳು 3.11, 3.19, 3.35)*
- ಅಲಹಾಬಾದ್ ಸಾಮಾಜಿಕ ನ್ಯಾಯದ ಕೌನ್ಸಿಲ್ ಪ್ರಕಾರ, ದೌರ್ಜನ್ಯ ತಡೆ ಕಾಯ್ದೆಯಲ್ಲಿ 2004ರ ಸಾಲಿಗೆ ದಾಖಲಾದ 400 ಪ್ರಕರಣಗಳಲ್ಲಿ ಸೆಕ್ಷನ್ 18ರನ್ವಯ ನಿರೀಕ್ಷಣಾ ಜಾಮೀನು ನೀಡಲು ಅವಕಾಶ ಇಲ್ಲದಿದ್ದರೂ ಶೇ.80% ಪ್ರಕರಣಗಳಲ್ಲಿ (320 ಪ್ರಕರಣಗಳು) ನಿರೀಕ್ಷಣಾ ಜಾಮೀನು ನೀಡಲಾಗಿದೆ. *('ಆಲ್ವೇಸ್ ವಿಕ್ಟಿಮ್ಸ್, ಫ್ರಂಟ್‌ಲೈನ್, 4/12/2009, ಪು. ಪ್ಯಾರಾ. 6–7)*

### 5. ವಿಚಾರಣೆ ಮಾಡುವ ಮತ್ತು ಪ್ರಕ್ರಿಯೆಯಲ್ಲಿ ನ್ಯೂನತೆಗಳು

- ***ಮಂದಗತಿಯ ವಿಚಾರಣೆ:*** ಉತ್ತರಪ್ರದೇಶದಲ್ಲಿ ದೌರ್ಜನ್ಯ ತಡೆ) ಕಾಯ್ದೆಯ ಅಡಿಯಲ್ಲಿ ದಾಖಲಾಗಿರುವ ದೌರ್ಜನ್ಯ ಪ್ರಕರಣಗಳು, ಪ್ರತ್ಯೇಕ ವಿಶೇಷ ನ್ಯಾಯಾಲಯಗಳಲ್ಲಿ ವಿಲೇವಾರಿಯಾಗಲು ಕೇಸು ದಾಖಲಾದ ದಿನದಿಂದ ಸರಾಸರಿ 3.15 ವರ್ಷಗಳ ಸಮಯ ಬೇಕು. *(ಸಾಮಾಜಿಕ ನ್ಯಾಯ ಮತ್ತು ಅಂಗವಿಕಲರ ಕಲ್ಯಾಣ ಕೇಂದ್ರ ನಡೆಸಿದ ಅಧ್ಯಯನ, ವಾರಣಾಸಿ, 2000, ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಕಲ್ಯಾಣಕ್ಕೆ ಸಂಸತ್ತು ಸಮಿತಿ ತನ್ನ 4ನೇ ವರದಿಯಲ್ಲಿ ತಿಳಿಸಿರುವಂತೆ 2004–05, ನವದೆಹಲಿ, 2005, ಪ್ಯಾರಾ 3.23)*
- ***ಮಧ್ಯ ಪ್ರದೇಶ:*** ದೌರ್ಜನ್ಯ ತಡೆ ಕಾಯ್ದೆಯ ಅನುಷ್ಠಾನ ಸ್ಥಿತಿಗತಿ ಕುರಿತು ಪರಿಶಿಷ್ಟ ಜಾತಿ ಮತ್ತು ಪಂಗಡಗಳ ರಾಷ್ಟ್ರೀಯ ಆಯೋಗ ಒಂದು ಅಧ್ಯಯನ ಮಾಡಿತು. ಇದರಲ್ಲಿ ವಿಶೇಷ ನ್ಯಾಯಾಲಯ ನೀಡಿರುವ 82 ಆದೇಶಗಳನ್ನು ವಿಶ್ಲೇಷಿಸಿ, ವಿಚಾರಣೆ ಬಾಕಿಗೆ ಕಾರಣಗಳನ್ನು ಈ ಕೆಳಕಂಡಂತೆ ತಿಳಿಸಿದೆ:

i. 60%(ಬಹುತೇಕ) ಪ್ರಕರಣಗಳಲ್ಲಿ ತನಿಖಾಧಿಕಾರಿ ಗೈರು ಹಾಜರಿ

ii. 70% ಪ್ರಕರಣಗಳಲ್ಲಿ ಸಾಕ್ಷಿ ನೀಡಬೇಕಿರುವ ದಿನ ಸಾಕ್ಷಿಗಳು ಬರುವುದಿಲ್ಲ.

iii. 30–40% ಪ್ರಕರಣಗಳಲ್ಲಿ ಆರೋಪಿ ಮತ್ತು ದೌರ್ಜನ್ಯಕ್ಕೊಳಗಾದವರು ಬರುವುದಿಲ್ಲ.

iv. 10% ಪ್ರಕರಣಗಳಲ್ಲಿ ವಾದ–ಪ್ರತಿವಾದಗಳಿಗೆ ಹೆಚ್ಚು ಸಮಯ ಬೇಕು.

*(ಪರಿಶಿಷ್ಟ ಜಾತಿ ಮತ್ತು ಪಂಗಡಗಳ ರಾಷ್ಟ್ರೀಯ ಆಯೋಗ, ಐದನೇ ವರದಿಯಲ್ಲಿ 1998–99, ನವದೆಹಲಿ, 2000, ಪ್ಯಾರಾ 8.136)*

* **ಪಂಜಾಬ್: ಕಾಯ್ದೆಯಡಿ ವಿಚಾರಣೆ ವಿಳಂಬಕ್ಕೆ ಕಾರಣ**

i. ಕಾಯ್ದೆಯಡಿ ಘೋಷಿಸಲಾದ ವಿಶೇಷ ನ್ಯಾಯಾಲಯಗಳಿಗೆ ಕೆಲಸದ ಹೊರೆ ಹೆಚ್ಚಿದೆ, ಇದರಿಂದ ಪ್ರಕರಣಗಳು ಮುಂದೂಡಲ್ಪಡುತ್ತವೆ ಹಾಗೂ ವಿಚಾರಣೆ ಹೆಚ್ಚು ತಡವಾಗುತ್ತದೆ.

ii. ವಿಚಾರಣೆ ದಿನ ಆರೋಪಿ ಗೈರುಹಾಜರಾಗುತ್ತಾರೆ, ಆರೋಪಿಗಳನ್ನು ಪತ್ತೆಹಚ್ಚಿ, ಬಂಧಿಸುವವರೆಗೂ ವಿಚಾರಣೆ ತಡವಾಗುತ್ತದೆ.

iii. ಪ್ರಾಸಿಕ್ಯೂಷನ್ ಸಾಕ್ಷಿಗಳ ಗೈರುಹಾಜರಿಯಿಂದ ಪ್ರಾಸಿಕ್ಯೂಷನ್ ಹೇಳಿಕೆ ಪಡೆಯುವಲ್ಲಿ 4 ವರ್ಷ ತಡವಾಗುತ್ತದೆ.

iv. ವಿಶೇಷ ನ್ಯಾಯಾಲಯಗಳಲ್ಲಿ ಸಿ.ಆರ್.ಪಿ.ಸಿ ಸೆಕ್ಷನ್ 319ರನ್ವಯ ಸಮನ್‌ಗೊಂಡವರ ವಿಚಾರಣೆಗೆ ಹೆಚ್ಚು ಸಮಯ ಬೇಕು(ತನಿಖೆಯಲ್ಲಿ ಆರೋಪಿ ನಾನು ಅಪರಾಧ ಮಾಡಿಲ್ಲ ಮುಗ್ಧನೆಂದು ತಿಳಿಸಿರುತ್ತಾರೆ), ಇದರಿಂದ ನ್ಯಾಯಾಲಯ ಆರೋಪಗಳನ್ನು ಮತ್ತೊಮ್ಮೆ ಸಮನ್ ಮಾಡಿ ಆರೋಪಿಗೆ ಮತ್ತೊಮ್ಮೆ ತಿಳಿಸಿ ದಾಖಲಿಸಬೇಕು.

v. ತನಿಖೆ ಹೆಚ್ಚು ಸಮಯ ಬೇಡುತ್ತದೆ, ಹಾಗಾಗಿ ಚಲನ್ ಬರೆಯಲು 3–4 ವರ್ಷ ಬೇಕು.

*(ಹೆಚ್ಚುವರಿ ಪೋಲೀಸ್ ನಿರ್ದೇಶಕರ ಪತ್ರ ಅಪರಾಧಗಳು, ಪಂಜಾಬ್, ದಿನಾಂಕ 23/02/2007, ಸಂಖ್ಯೆ 751/ಪರಿಶಿಷ್ಟ ಜಾತಿ ಕೋಶ ಸರ್ವೋಚ್ಚ ನ್ಯಾಯಾಲಯದಲ್ಲಿ ದೌರ್ಜನ್ಯ ತಡೆ ಕಾಯ್ದೆ ಅನುಷ್ಠಾನಕ್ಕೆ ಸಾರ್ವಜನಿಕ ಹಿತಾಸಕ್ತಿ ಅರ್ಜಿಗೆ ಪ್ರತಿಕ್ರಿಯೆ(ಡಬ್ಲ್ಯುಸಿ 104/2006)*

* **ದೌರ್ಜನ್ಯ ಪ್ರಕರಣಗಳನ್ನು ನೇರವಾಗಿ ವಿಚಾರಣೆಗೆ ತೆಗೆದುಕೊಳ್ಳಲು ವಿಶೇಷ ನ್ಯಾಯಾಲಯಗಳಿಗೆ ಅಧಿಕಾರ ಇಲ್ಲ:** ಗಂಗೂಲ ಅಶೋಕ V/s ಆಂಧ್ರಪ್ರದೇಶ ರಾಜ್ಯ (2000) ಪ್ರಕರಣದಲ್ಲಿ ವಿಶೇಷ ನ್ಯಾಯಾಲಯಕ್ಕೆ ನೇರವಾಗಿ ವಿಚಾರಣೆಗೆ ತೆಗೆದುಕೊಳ್ಳಲು ಅಧಿಕಾರ ಇಲ್ಲ ಎಂದು ಸರ್ವೋಚ್ಚ ನ್ಯಾಯಾಲಯ ತಿಳಿಸಿದೆ. ಸಿ.ಆರ್.ಪಿ.ಸಿಯ ಸೆಕ್ಷನ್ 193ರ ನಿರ್ಬಂಧ ಉಲ್ಲೇಖಿಸಿ ಸರ್ವೋಚ್ಚ ನ್ಯಾಯಾಲಯ ಈ ನಿರ್ಣಯಕ್ಕೆ ಬಂದಿದೆ. ಇಲ್ಲಿ ಮ್ಯಾಜಿಸ್ಟ್ರೇಟ್ ಒಬ್ಬರು ಪ್ರಕರಣವನ್ನು ವಿಶೇಷ ನ್ಯಾಯಾಲಯಕ್ಕೆ ಒಪ್ಪಿಸದಿದ್ದಲ್ಲಿ ವಿಶೇಷ ನ್ಯಾಯಾಲಯ ನೇರವಾಗಿ ಪ್ರಕರಣವನ್ನು ಕೈಗೆತ್ತಿಕೊಳ್ಳಲು ಸಾಧ್ಯವಿಲ್ಲ. ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಕಲ್ಯಾಣಕ್ಕೆ ಸಂಸತ್ತು ಸಮಿತಿಯು ಬೇರೆ ಅಭಿಪ್ರಾಯ ವ್ಯಕ್ತಪಡಿಸುತ್ತದೆ, ಅದರಂತೆ ದೌರ್ಜನ್ಯ ತಡೆ ಕಾಯ್ದೆಯ ಕಲಂ 14ರ ಅನ್ವಯ ತ್ವರಿತವಾಗಿ ನ್ಯಾಯ ಒದಗಿಸಲು ವಿಶೇಷ ನ್ಯಾಯಾಲಯಗಳನ್ನು ಸ್ಥಾಪಿಸಿರುವುದರಿಂದ ಪ್ರಕರಣಗಳನ್ನು ನೇರವಾಗಿ ಕೈಗೆತ್ತಿಕೊಳ್ಳಲು ಅವಕಾಶ ನೀಡದಿದ್ದರೆ ಉದ್ದೇಶಿತ ಗುರಿ ಈಡೇರುವುದಿಲ್ಲ..." *(ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಕಲ್ಯಾಣಕ್ಕೆ ಸಂಸತ್ತು ಸಮಿತಿ, 14ನೇ ವರದಿಯಲ್ಲಿ 2006–2007, ನವದೆಹಲಿ, ಪುಟ 68)*

* **ದೌರ್ಜನ್ಯಕ್ಕೆ ಸಂಬಂಧಿಸಿದ ಇತರೆ ಕೇಸುಗಳ ವಿಚಾರಣೆ ಒಂದೇ ನ್ಯಾಯಾಲಯದಲ್ಲಿ ಆಗುವುದಿಲ್ಲ:** ಪರಿಶಿಷ್ಟರು ದೌರ್ಜನ್ಯಕ್ಕೆ ಒಳಗಾದಾಗ ನೀಡಿದ ಕೇಸಿಗೆ ಪ್ರತಿದೂರಿನ ವಿಚಾರಣೆ ವಿಶೇಷ ನ್ಯಾಯಲಯದಲ್ಲಿ ಆಗುವುದಿಲ್ಲ, ಬದಲಾಗಿ ಮತ್ತೊಂದು ನ್ಯಾಯಾಲಯ ವಿಚಾರಣೆ ಮಾಡುತ್ತದೆ. ಇದರಿಂದ ವಕೀಲರು ಈ ಕಾರಣಗಳನ್ನೊಡ್ಡಿ ವಿಶೇಷ ನ್ಯಾಯಾಲಯದಲ್ಲಿ ವಿಚಾರಣೆ ಮುಂದೂಡಲು ಕೋರುತ್ತಾರೆ. ಮತ್ತೊಂದು ನ್ಯಾಯಾಲಯದಿಂದ ತೀರ್ಪು ಬರುವವರೆಗೆ ವಿಶೇಷ ನ್ಯಾಯಾಲಯ ಕಾಯುವುದರಿಂದ ವಿಚಾರಣೆ ತಡವಾಗುತ್ತದೆ. *(ದೌರ್ಜನ್ಯ ತಡೆ ಕಾಯ್ದೆ ಬಲವರ್ಧನೆಗೆ ರಾಷ್ಟ್ರೀಯ ಒಕ್ಕೂಟ, ಕಾಯ್ದೆ ತಿದ್ದುಪಡಿ ಸ್ಥಿತಿಯ ಲೇಖನ, 11/9/2009ರಂದು ನವದೆಹಲಿಯಲ್ಲಿ ಸಲ್ಲಿಸಲಾಯಿತು)*

**⇒ಅನೇಕ ಕಾರಣಕ್ಕೆ ವಿಚಾರಣೆ ತಡವಾಗುವುದನ್ನು ಪರಿಗಣಿಸಿ, ಈ ಕಾಯ್ದೆಯಲ್ಲಿರುವ ಬಾಕಿ ಪ್ರಕರಣಗಳನ್ನು ಪ್ರತಿನಿತ್ಯ ವಿಲೇವಾರಿ ಮಾಡಬೇಕೆಂದು ಸೂಚಿಸುವುದಿಲ್ಲವೇ?**

**⇒ಈ ನಿಟ್ಟಿನಲ್ಲಿ ಕಾನೂನು ಸಚಿವಾಲಯ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಸಂಸತ್ತು ಸಮಿತಿಯ ಸಲಹೆ ಪಡೆದು ದೌರ್ಜನ್ಯದ ಕೇಸುಗಳನ್ನು ವಿಶೇಷ ನ್ಯಾಯಾಲಯಗಳು ನೇರವಾಗಿ ವಿಚಾರಣೆಗೆತ್ತಿಕೊಳ್ಳುವಂತಾಗಲು ಕಾಯ್ದೆಗೆ ತಿದ್ದುಪಡಿ ಮಾಡಬೇಕಲ್ಲವೇ?**

**6. ಅಪರಾಧ ಸಾಬೀತು ಕಡಿಮೆ, ನಿರಾಪರಾಧ ಹೆಚ್ಚು**

| | |
|---|---|
| 1997–2007 ಅವಧಿಗೆ ದೌರ್ಜನ್ಯ ತಡೆ ಕಾಯ್ದೆಯ ಪ್ರಕರಣಗಳಲ್ಲಿ ಹೊರಬಿದ್ದ ತೀರ್ಪುಗಳಲ್ಲಿ | ⇒ಸರಾಸರಿ ಅಪರಾಧ ತೀರ್ಪು–30.3%ಸರಾಸರಿ<br>⇒ನಿರಪರಾಧಿ ತೀರ್ಪು–69.7%ಸರಾಸರಿ |
| 1997–2007 ಅವಧಿಗೆ ಪಿ.ಸಿ.ಆರ್, ಐ.ಪಿ.ಸಿ ಇನ್ನಿತರೆ ಕಾನೂನುಗಳನ್ವಯ ಪರಿಶಿಷ್ಟರ ಮೇಲಾದ ಅಪರಾಧಗಳು ಹಾಗೂ ಹೊರಬಿದ್ದ ತೀರ್ಪುಗಳಲ್ಲಿ | ⇒ಅಪರಾಧ ನಿರ್ಣಯ–31%ಸರಾಸರಿ<br>⇒ನಿರಪರಾಧಿ ತೀರ್ಪು–69% |

* **ದೌರ್ಜನ್ಯ ತಡೆ ಕಾಯ್ದೆಯಲ್ಲಿ ದಾಖಲಾದ ಒಟ್ಟು ಪ್ರಕರಣಗಳಿಗೆ ಹೋಲಿಸಿದರೆ ಶಿಕ್ಷೆಯ ತೀರ್ಪು ಶೇ.10%ಕ್ಕಿಂತಲೂ ಕಡಿಮೆಯಿದೆ!**
* 2001–2007ರ ಅವಧಿಗೆ, ದೌರ್ಜನ್ಯ ತಡೆ ಕಾಯ್ದೆಯಲ್ಲಿ ಪರಿಶಿಷ್ಟ ಪಂಗಡಗಳವರ ಮೇಲಾದ ದೌರ್ಜನ್ಯ ಪ್ರಕರಣಗಳ ವಿಚಾರಣೆಗಳಲ್ಲಿ ಅಪರಾಧ ಸಾಬೀತು ತೀರ್ಪುಗಳ ಪ್ರಮಾಣ ಶೇ. 24.8%. ಇದು ಪರಿಶಿಷ್ಟ ಜಾತಿಯವರ ಪರವಾಗಿ ಬಂದ ನಿರ್ಣಯಗಳಿಗಿಂತ (27.4%) ಕಡಿಮೆ.
* ಐ.ಪಿ.ಸಿಯೊಡನೆ ಹೋಲಿಸಿದರೆ **2007 ಸಾಲಿಗೆ ಹೊರಬಿದ್ದ ತೀರ್ಪು ಶೇ. 42.7%ರಷ್ಟಿದೆ,** 2003–2007 ಅವಧಿಗೆ ಶಿಕ್ಷೆಯ ಪ್ರಮಾಣ ಸರಾಸರಿ ಶೇ.50.5%ರಷ್ಟಿದೆ.
* ಇದೇ ಸಂದರ್ಭದಲ್ಲಿ, ವಿಶೇಷ ಮತ್ತು ಸ್ಥಳೀಯ ಕಾಯ್ದೆಯ 20 ಪ್ರಕರಣ(ಎಸ್ಎಸ್ಎಲ್(ದೌರ್ಜನ್ಯ ತಡೆ ಕಾಯ್ದೆಯೂ ಒಂದು) ವಿಶ್ಲೇಷಿಸಿದಾಗ, **ದೌರ್ಜನ್ಯ ತಡೆ ಕಾಯ್ದೆಯಡಿ ಹೊರಬಂದ ತೀರ್ಪುಗಳ ಪ್ರಮಾಣ ಕಡಿಮೆಯಿದ್ದು ನಾಲ್ಕನೇ ಸ್ಥಾನದಲ್ಲಿದೆ(26.1%).** 2003–2007 ಸಾಲಿಗೆ ದೌರ್ಜನ್ಯ ತಡೆ ಕಾಯ್ದೆಯಲ್ಲಿ ಶಿಕ್ಷೆಯ ಪ್ರಮಾಣ ಶೇ.25% ಇದೆ. ಇನ್ನುಳಿದ ಎಲ್ಲಾ ವಿಶೇಷ ಕಾಯ್ದೆಗಳಲ್ಲಿ ನೀಡಿರುವ ಶಿಕ್ಷೆಯ ಪ್ರಮಾಣ ಶೇ.72% ಇದೆ. (ಎನ್‌ಸಿಆರ್‌ಬಿ, ಭಾರತದಲ್ಲಿ ಪಾತಕ ಅಪರಾಧ, 2003–2007, ನವದೆಹಲಿ, 2004–2008)

**ದೌರ್ಜನ್ಯ ತಡೆ ಕಾಯ್ದೆಯಲ್ಲಿ ಶಿಕ್ಷೆಯ ಪ್ರಮಾಣವು ಐ.ಪಿ.ಸಿ.ಗಿಂತಲೂ ಕಡಿಮೆಯಾಗಿದೆ... ಇದು ದೌರ್ಜನ್ಯಕ್ಕೊಳಗಾದ ಪರಿಶಿಷ್ಟರಿಗೆ ನ್ಯಾಯ ಒದಗಿಸಬೇಕಿರುವ ವ್ಯವಸ್ಥೆಯ ದುಸ್ಥಿತಿಯನ್ನು ತೋರಿಸುತ್ತದೆ. ಈ ವ್ಯವಸ್ಥೆ ನ್ಯಾಯಾಲಯದ ಅಧಿಕಾರಿ ವರ್ಗ, ಕಾನೂನಿನ ನ್ಯೂನತೆ, ದೌರ್ಜನ್ಯಕ್ಕೆ ಒಳಗಾದವರಿಗೆ ಬೆಂಬಲದ ಕೊರತೆ, ಕಾನೂನು ಮತ್ತು ಸುವ್ಯವಸ್ಥೆಯಲ್ಲಿ ಬದ್ಧತೆ ಕೊರತೆ, ಹಾಗೂ ಆರೋಪಿಗಳ ಷಾಮೀಲಾಗುವ ಪರಿಸ್ಥಿತಿಯಾಗಿದೆ.**

*ಪರಿಶಿಷ್ಟ ಜಾತಿಯವರ ರಾಷ್ಟ್ರೀಯ ಆಯೋಗ, ಮೊದಲನೇ ವರದಿ 2004–05, ನವದೆಹಲಿ, 2006, ಪ್ಯಾರಾ 6.19*

**1997–2007 ಅವಧಿಗೆ ಪರಿಶಿಷ್ಟರ ಮೇಲಾದ ದೌರ್ಜನ್ಯ ಪ್ರಕರಣಗಳ ವಿಲೇವಾರಿ**

| ಕಾಯ್ದೆ | ಸರ್ಕಾರ ವಾಪಸ್ ಪಡೆದ ಕೇಸುಗಳ ಸಂಖ್ಯೆ | ತನಿಖೆಯ ಸಂದರ್ಭದಲ್ಲಿ: | | | |
|---|---|---|---|---|---|
| | | ರಾಜಿಯಾದ ಯಾ ಹಿಂಪಡೆದ ಕೇಸು | (ಅ) ದೋಷಿ | ವಿಚಾರಣೆ ಪೂರ್ಣಗೊಂಡು ಹಾಗೂ: | |
| | | | | ನಿರ್ದೋಷಿ ಯಾ ಖುಲಾಸೆ | ಒಟ್ಟು (ಅ) + (ಆ) |
| ಪ.ಜಾತಿ/ಪ.ಪಂ (ದೌತ) ಕಾಯ್ದೆ | 198 | 12,429 | 63,513 | 1,46,269 | 2,09,782 |
| ಪಿ.ಸಿ.ಆರ್ ಕಾಯ್ದೆ | 71 | 4,339 | 15,265 | 46,765 | 62,030 |
| ಐ.ಪಿ.ಸಿ & ಇತರೆ | 164 | 13,397 | 61,713 | 1,24,458 | 1,86,171 |
| **ಒಟ್ಟು** | **433** | **30,165** | **1,40,491** | **3,17,492** | **4,57,983** |

*(ಎನ್.ಸಿ.ಆರ್.ಬಿ, ಕ್ರೈಂ ಇನ್ ಇಂಡಿಯಾ 1997–2007, ನವದೆಹಲಿ, 1998–2008)*

- ***ತಮಿಳುನಾಡು:*** ದೌರ್ಜನ್ಯ ತಡೆ ಕಾಯ್ದೆಯಲ್ಲಿ 1996–2001 ಅವಧಿಯ 386 ಕೇಸುಗಳ ಅಧ್ಯಯನವಾಯಿತು. ಕೇವಲ 75 ಪ್ರಕರಣಗಳಿಗೆ ಕೋರ್ಟು ತೀರ್ಪು ನೀಡಿತು. ಶಿಕ್ಷೆಯಾಗಿದ್ದು ಕೇವಲ 18 ಕೇಸುಗಳಿಗೆ (24%), ಅಂದರೆ ಅಧ್ಯಯನದ ಒಟ್ಟು ಶೇ. 4.7%. *(ಎಂ.ಎ. ಬ್ರಿಟ್ಟೋ, ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಗಳ (ದೌರ್ಜನ್ಯ ತಡೆ) ಕಾಯ್ದೆಯ ಅನುಷ್ಠಾನ 1989 (ತಮಿಳ್), ಮಧುರೈ: ಡಾಕ್ಟರ್ ಅಂಬೇಡ್ಕರ್ ಸಾಂಸ್ಕೃತಿಕ ಅಕಾಡೆಮಿ, 2007 ಪುಟ 231)*

**ಎನ್‌ಸಿಎಸ್‌ಸಿ ಗುಣಮಟ್ಟ V/s ರಾಜ್ಯಗಳ ಸಾಧನೆ**

ದೌರ್ಜನ್ಯ ತಡೆ ಕಾಯ್ದೆಯಲ್ಲಿ ಶಿಕ್ಷೆಯ ಪ್ರಮಾಣ ತಗ್ಗಿರುವುದಕ್ಕೆ ಪರಿಶಿಷ್ಟ ಜಾತಿಗಳ ರಾಷ್ಟ್ರೀಯ ಆಯೋಗ ತಮಿಳುನಾಡು ಸರ್ಕಾರವನ್ನು ಟೀಕೆ ಮಾಡಿತ್ತು. ಆಯೋಗದ ಪ್ರಕಾರ ಯಾವ ರಾಜ್ಯದ ಸಾಧನೆ ಉತ್ತಮವಾಗಿದೆ ಎನ್ನುವ ಪ್ರಶ್ನೆಗೆ, ಯಾವ ರಾಜ್ಯವೂ ಇಲ್ಲವೆಂದು, ಉಪಾಧ್ಯಕ್ಷರು ಉತ್ತರಿಸಿದ್ದಾರೆ.

*ತಮಿಳುನಾಡು: ದೌರ್ಜನ್ಯ ತಡೆ ಕಾಯ್ದೆಯಲ್ಲಿ ಅಲ್ಪ ಪ್ರಮಾಣದ ಶಿಕ್ಷೆ: ರಾಷ್ಟ್ರೀಯ ಆಯೋಗ, ದ ಹಿಂದು, 19/02/2020*

- ***ಗುಜರಾತ್:*** 1990–2007 ಅವಧಿಗೆ, ದೌರ್ಜನ್ಯ ತಡೆ ಕಾಯ್ದೆಯಲ್ಲಿ ಜಿಲ್ಲಾ ನ್ಯಾಯಲಯ ವಿಲೇವಾರಿ ಮಾಡಿದ 14,242 ಪ್ರಕರಣಗಳಲ್ಲಿ ಶೇ.91.8% ರಷ್ಟು ಆರೋಪಿಗಳು ಖುಲಾಸೆಯಾದರು, ಶೇ.3.9% ಕೇಸುಗಳು ರಾಜಿಯಾದವು ಮತ್ತು ಕೇವಲ 2% ರಷ್ಟು ಶಿಕ್ಷೆಯಾಯಿತು. *(ಜಿಲ್ಲಾ ಸೆಷನ್ ಕೋರ್ಟಿನ ವಿಶೇಷ ಪಬ್ಲಿಕ್ ಪ್ರಾಸಿಕ್ಯೂಟರುಗಳ ಅಂಕಿ ಅಂಶ, ನವಸರ್ಜನ್ ಟ್ರಸ್ಟ್ (ಮಾಹಿತಿ ಹಕ್ಕು ಬಳಸಿ), ಅಹಮದಾಬಾದ್, 2008)*
- ***ಆಂಧ್ರಪ್ರದೇಶ:*** ದೌರ್ಜನ್ಯ ತಡೆ ಕಾಯ್ದೆ ಅನುಷ್ಠಾನಕ್ಕೆ ಎಲ್ಲಾ 23 ಜಿಲ್ಲೆಗಳಲ್ಲಿಯೂ ವಿಶೇಷ (ಸೆಷನ್ಸ್) ನ್ಯಾಯಾಲಯ ಸ್ಥಾಪನೆಯಾಗಿದೆ. 2008ರಲ್ಲಿ ಈ ನ್ಯಾಯಾಲಯಗಳು ನೀಡಿರುವ ತೀರ್ಪುಗಳಲ್ಲಿ 8.7%ರಷ್ಟು ಆರೋಪ ಸಾಬೀತಾಗಿವೆ. ದೌರ್ಜನ್ಯಪೀಡಿತ ಪ್ರದೇಶವೆಂದು ಘೋಷಿಸಿರುವ ಆರು ಜಿಲ್ಲೆಗಳ ನ್ಯಾಯಾಲಯದಲ್ಲಿ ಕಡಿಮೆ ಆರೋಪ ಸಾಬೀತಾಗಿವೆ. *(ಪ.ಜಾತಿ/ಪ.ಪಂಗಡಗಳವರ ಮೇಲೆ ದೌರ್ಜನ್ಯವನ್ನು ಪಿಸಿಆರ್ ಮತ್ತು ದೌರ್ಜನ್ಯ ತಡೆ ಕಾಯ್ದೆಗಳಲ್ಲಿ ವೀಡಿಯೋ ಕಾನ್ಫರೆನ್ಸ್ ನಡೆಸಿದ ಸಾಮಾಜಿಕ ಕಲ್ಯಾಣ ಆಯುಕ್ತರು ಮತ್ತು ನೋಡಲ್ ಅಧಿಕಾರಿಗಳು, ಹೈದರಾಬಾದ್, 21/03/2009ರಂದು, ಆರ್‌ಸಿ, ಸಂಖ್ಯೆ ಹೆಚ್2/8193/2008–2)*

1999–2004 ಅವಧಿಗೆ ಪರಿಶಿಷ್ಟ ಮಹಿಳೆಯರ ಮೇಲಿನ 500 ಹಿಂಸೆ ಪ್ರಕರಣ ಅಧ್ಯಯನ ಮಾಡಿದಾಗ ಶೇ.3.6%ರಷ್ಟು ಪ್ರಕರಣಗಳು ವಿಚಾರಣೆಗಾಗಿ ನ್ಯಾಯಾಲಯಕ್ಕೆ ಹೋಗಿದ್ದವು. ಎಂಟು ಪ್ರಕರಣಗಳಲ್ಲಿ ಆರೋಪ ಸಾಬೀತಾಗಲಿಲ್ಲ, ಬಲವಂತದ ರಾಜಿ, ವಕೀಲರ ನಿರ್ಲಕ್ಷ, ದೌರ್ಜನ್ಯಕ್ಕೊಳಗಾದವರ ಮತ್ತು ಸಾಕ್ಷಿಗಳ ಮೇಲೆ ಆರೋಪಿಗಳ ಒತ್ತಡ, ವ್ಯತಿರಿಕ್ತ ಸಾಕ್ಷಿ ಹೇಳಿಕೆ ಇದಕ್ಕೆ ಕಾರಣ; ಮೂರು ಪ್ರಕರಣಗಳಲ್ಲಿ ಆರೋಪ ಸಾಬೀತಾಯಿತು. *(ಅಲಾಸಿಯಸ್ ಇರುದಯಂ ಮತ್ತಿತರು, ದಲಿತ್ ವುಮೆನ್ ಸ್ಪೀಕ್ ಔಟ್: ಭಾರತದಲ್ಲಿ ದಲಿತ ಮಹಿಳೆಯರ ಮೇಲೆ ಹಿಂಸೆ, ಮಧುರೈ, ಐಡಿಇಎಎಸ್, ಎನ್‌ಸಿಡಿಹೆಚ್‌ಆರ್ ಮತ್ತು ಎನ್‌ಎಫ್‌ಡಿಡಬ್ಲ್ಯು, 2006, ಪುಟ, ಪ್ಯಾರಾ. 545–6)*

- ದೇಶಾದ್ಯಂತ ಹೈಕೋರ್ಟುಗಳ 78 ತೀರ್ಪನ್ನು ಅಧ್ಯಯನ ಮಾಡಿದಾಗ ಅವುಗಳಲ್ಲಿ 64.9% ತೀರ್ಪುಗಳು ಪ್ರಬಲ ಜಾತಿ ಆರೋಪಿಗಳ ಪರವಾಗಿ ಇದ್ದವು. ಖಂಡಿತವಾಗಿ 10 ವರ್ಷಕ್ಕೂ ಹೆಚ್ಚು ಶಿಕ್ಷೆ ನೀಡಬೇಕಿದ್ದ ಪ್ರಕರಣಗಳಲ್ಲಿ 76.2% ತೀರ್ಪುಗಳು ಪ್ರಬಲ ಜಾತಿ ಆರೋಪಿಗಳ ಪರವಾಗಿ ಆದವು. *(ಸಾಕ್ಷಿ ಮಾನವ ಹಕ್ಕುಗಳ ಕಾವಲುಪಡೆ–ಆಂಧ್ರ ಪ್ರದೇಶ., ದಲಿತ ಮಾನವ ಹಕ್ಕುಗಳ ಮೇಲ್ವಿಚಾರಣೆ 2000–2003, ಸಿಕಂದರಾಬಾದ್, 2003, ಪುಟ 80)*

⇨ ***ಆಡಳಿತದಲ್ಲಿ ಭಿನ್ನಾಭಿಪ್ರಾಯ ಮತ್ತು ಪೋಲೀಸರ ಪಕ್ಷಪಾತದಿಂದ ಬೇಸತ್ತು ದೌರ್ಜನ್ಯಕ್ಕೊಳಗಾದವರು ಕೊನೆಯಲ್ಲಿ ನ್ಯಾಯಾಂಗದ ಮೇಲೆ ನಂಬಿಕೆಯಿಡುತ್ತಾರೆ ಎಂದು ಮಾನವ ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗವು ತಿಳಿಸಿದೆ. ದೌರ್ಜನ್ಯ ತಡೆ ಕಾಯ್ದೆಯ ಶಿಕ್ಷೆ ಪ್ರಮಾಣ ನೋಡಿದರೆ ಈ ಹೇಳಿಕೆಯನ್ನು ನಂಬುವುದೂ ಕಷ್ಟ.***

⇨ ***ದೇಶದಲ್ಲಿ ಒಟ್ಟು 1/5ರಷ್ಟು ಪರಿಶಿಷ್ಟರಿದ್ದಾರೆ. ಆದರೆ, ಅವರಿಗಾಗಿಯೇ ಇರುವ ವಿಶೇಷ ಕಾಯ್ದೆಯಲ್ಲಿ ಶಿಕ್ಷೆ ಕಡಿಮೆಯಾಗುತ್ತಿದೆ ಹಾಗೂ 4ನೇ ಸ್ಥಾನಕ್ಕೆ ಇಳಿದಿದೆ. ಇದಕ್ಕೆ ಕಾರಣ ಹುಡುಕಿ, ತನಿಖೆಯನ್ನು ಮೇಲ್ವಿಚಾರಣೆ ಸರ್ಕಾರದ ಆದ್ಯತೆ ಆಗಬೇಕು, ಅಲ್ಲವೇ?***

7. ಖುಲಾಸೆಗೊಳ್ಳಲು ಕಾರಣ:

> **ನ್ಯಾಯಾಧೀಶರು ಕಾಯ್ದೆಯನ್ನು ಅರ್ಥೈಸುವಾಗ ಸಂವಿಧಾನದ ಗುರಿ ಮತ್ತು ಆಶಯಗಳನ್ನು ಯಾವಾಗಲೂ ಮನಸ್ಸಿನಲ್ಲಿಡಬೇಕು. ಅಸ್ಪೃಶ್ಯತೆಯನ್ನು ನಿರ್ಮೂಲನೆ ಮಾಡಲು, ಪರಿಶಿಷ್ಟರಿಗೆ ಸಮಾನತೆ ಹಕ್ಕು ಮತ್ತು ಸಾಮಾಜಿಕ ಸಮನ್ವಯತೆ ಮತ್ತು ಭ್ರಾತ್ರತ್ವ ಸಾಕಾರಗೊಳ್ಳಲು ಪ್ರಯತ್ನಗಳಾಗಬೇಕು.**
> *ಕರ್ನಾಟಕ ರಾಜ್ಯ V/s ಅಪ್ಪಾ ಬಾಲು ಇಂಗಾಳೆ ಪ್ರಕರಣದಲ್ಲಿ*

2001–2004 ಅವಧಿಗೆ, ದೌರ್ಜನ್ಯ ಕಾಯ್ದೆಯಲ್ಲಿ ಆಂಧ್ರಪ್ರದೇಶದ ವಿಶೇಷ ನ್ಯಾಯಾಲಯಗಳು ನೀಡಿದ 112 ತೀರ್ಪನ್ನು ಅಧ್ಯಯನ ಮಾಡಲಾಯಿತು. **ಖುಲಾಸೆಯಾದ 103 ಪ್ರಕರಣಗಳು (92%) ಹೀಗಿವೆ:**

| *ಕಾನೂನು ಕಾಯ್ದೆಯ ತಾಂತ್ರಿಕತೆಯಲ್ಲಿ* | *ಕೇಸುಗಳ ಸತ್ಯಾಂಶದಲ್ಲಿ* |
|---|---|
| *1.* ***ದೌರ್ಜನ್ಯ ತಡೆ ನಿಯಮ 7ರಂತೆ ಡಿ.ವೈ.ಎಸ್.ಪಿ ತನಿಖೆ ನಡೆಸಬೇಕು ಬದಲಿಗೆ ಕಿರಿಯ ಅಧಿಕಾರಿ ತನಿಖೆ ಮಾಡಿರುವ ಹಿನ್ನೆಲೆ:*** ಇದಕ್ಕಾಗಿ, 18 ಪ್ರಕರಣಗಳಲ್ಲಿ, ಆರೋಪಿಗಳು ಖುಲಾಸೆಯಾಗಿದ್ದಾರೆ. ದೌರ್ಜನ್ಯ ತಡೆ ಕಾಯ್ದೆಯನ್ವಯ ಮಾಡಿದ್ದ ಆರೋಪಗಳು, ಸತ್ಯವೆನ್ನುವುದಕ್ಕೆ ಆಧಾರಗಳಿದ್ದವು, ಡಿ.ವೈ.ಎಸ್.ಪಿ. ತನಿಖೆ ಪರಿಶೀಲಿಸಿದ್ದರು, ಕಡೆಗೆ, ನ್ಯಾಯಾಧೀಶರು ಐ.ಪಿ.ಸಿ.ಯನ್ವಯ ವಿಚಾರಣೆ ಮುಂದುವರೆಸಬಹುದಿತ್ತು, ಅದೂ ಆಗಿಲ್ಲ. | *1.* ***ದೌರ್ಜನ್ಯಕ್ಕೊಳಗಾದವರ ನಿರ್ಧಾರ:*** 108 ಪ್ರಕರಣಗಳಲ್ಲಿ 62ಕ್ಕೆ ದೌರ್ಜನ್ಯಕ್ಕೊಳಗಾದವರು ಸಾಬೀತುಪಡಿಸಲು ಆಗದಿರುವುದು (ಉದಾಹರಣೆಗೆ ಘಟನೆಯಾದಾಗ ಪೋಲೀಸರಿಗೆ ನೀಡಿದ ಹೇಳಿಕೆಯನ್ನು ನಿರಾಕರಿಸುವುದು) ನೋವಿನ ಸಂಗತಿ. ಕೆಲವರು ಘಟನೆಯೇ ಜರುಗಿಲ್ಲ, ಪೋಲೀಸರಿಗೆ ನಾವು ತಿಳಿಸಲೇ ಇಲ್ಲ ಎಂದು ಹೇಳಿದರು.<br><br>***ಇದಕ್ಕೆ ಏನು ವಿವರಣೆ ನೀಡಲು ಸಾಧ್ಯ?:*** ದೌರ್ಜನ್ಯ ಆದ ದಿನದಿಂದ ಸಾಕ್ಷಿ ನೀಡಲು ಸರಾಸರಿ 4 ವರ್ಷಗಳಾಗುತ್ತದೆ. ಘಟನೆಯನ್ನು ಅದೇ ರೀತಿ ವಿವರಿಸಲು ಹೇಗೆ ಸಾಧ್ಯ; ಒಂದೆಡೆ ಆರೋಪ ಸಾಬೀತುಗೊಂಡರೆ ಪರಿಸ್ಥಿತಿ ಪ್ರಕೋಪಕ್ಕೇರಬಹುದೆಂಬ ಭಯ, ಮತ್ತೊಂದೆಡೆ, ಆರೋಪಿಗಳ ಬೆದರಿಕೆ.... **"ದೌರ್ಜನ್ಯಕ್ಕೊಳಗಾದವರು ನಿರ್ಭಯವಾಗಿ ತಮ್ಮ ಕೇಸುಗಳಿಗೆ ಬೆಂಬಲಿಸಲು ಸರ್ಕಾರ ಮತ್ತು ಕೋರ್ಟುಗಳಾಗಲೀ ಅಥವಾ ದೌರ್ಜನ್ಯ ತಡೆ ಕಾಯ್ದೆಯಾಗಲೀ ಅಂತಹ ವಾತಾವರಣ ಸೃಷ್ಟಿಸಲು ಆಗಿಲ್ಲ".** |
| *2.* ***ಎಫ್.ಐ.ಆರ್ ತಡಮಾಡಿದ ಕಾರಣ:*** 12 ಪ್ರಕರಣಗಳಲ್ಲಿ ಎಫ್.ಐ.ಆರ್ ತಡವಾಗಿದ್ದಕ್ಕೆ ಅರೋಪಿಗಳು ಖುಲಾಸೆಯಾದರು. ಎಫ್.ಐ.ಆರ್ ತಡವಾಗಿದ್ದು, ಖುಲಾಸೆಗೆ ಆಧಾರ ಸರಿಯಲ್ಲ. ಕೆಲ ಪ್ರಕರಣಗಳಿಗೆ ಎಫ್.ಐ.ಆರ್ 6 ಘಂಟೆ ತಡವಾಗಿದೆ ಎಂದು ಖುಲಾಸೆಯಾಗಿದೆ. ಇತರೆ ಕಾಯ್ದೆಗಳಲ್ಲಿ ಘಟನೆಯಾದ 42 ದಿನಗಳ ನಂತರ ದಾಖಲಿಸಿದ ಎಫ್.ಐ.ಆರ್ ಖುಲಾಸೆಗೆ ಕಾರಣವಾಗಿಲ್ಲ ಎನ್ನುವುದು ಸ್ಮರಿಸಬೇಕು. | *2.* ***ಕೋರ್ಟಿನಲ್ಲಿ ವ್ಯತಿರಿಕ್ತ ಹೇಳಿಕೆ: ಸಾಕ್ಷಿ:*** 74 ಪ್ರಕರಣಗಳಲ್ಲಿ ದೌರ್ಜನ್ಯ ಜರುಗಿದಾಗ ಪೋಲೀಸರಿಗೆ ಹೇಳಿಕೆ ನೀಡಿದವರು, ಕೋರ್ಟಿನಲ್ಲಿ ಇದೇ ಹೇಳಿಕೆ ನೀಡಲು ನಿರಾಕರಿಸಿದರು, ಕೆಲವರು ಪೋಲೀಸರಿಗೆ ನೀಡಿದ್ದ ಹೇಳಿಕೆಯನ್ನು ಕೋರ್ಟಿನಲ್ಲಿ ಹೇಳಲಿಲ್ಲ, ಇದರಿಂದ ಆರೋಪ ಸಾಬೀತು ಮಾಡಲಾಗಿಲ್ಲ. |
| *3.* ***ಪರಿಶಿಷ್ಟರಲ್ಲ ಎನ್ನುವ ಕಾರಣ:*** 7 ಪ್ರಕರಣಗಳಲ್ಲಿ, ಆರೋಪಿಗಳ ಖುಲಾಸೆ, ಬಹಳ ಕುತೂಹಲದ ಅಂಶ, ಮಾಡಲಾಗಿರುವ ಆರೋಪ ಜಾತಿ ನಿಂದನೆ. | *3.* ***ವೈದ್ಯಕೀಯ ಸಾಕ್ಷಿಗಳಲ್ಲಿ ದೋಷ:*** ಕೆಲವು ಪ್ರಕರಣಗಳಲ್ಲಿ ವೈದ್ಯಕೀಯ ಸಾಕ್ಷಿಗಳು ಇಲ್ಲದಿರುವುದರಿಂದ ಆರೋಪ ಸಾಬೀತು ಮಾಡಲಾಗಲಿಲ್ಲ. |
| *4.* ***ಪರಿಶಿಷ್ಟರಲ್ಲವೆಂದು ತಿಳಿದು ಮಾಡಿದ ದೌರ್ಜನ್ಯ:*** ಐ.ಪಿ.ಸಿ.ಯಲ್ಲಿ ತಿಳಿಸಿದ ಎಲ್ಲಾ ಅಪರಾಧಗಳನ್ನು ಪರಿಶಿಷ್ಟರಲ್ಲದವರು ಪರಿಶಿಷ್ಟರ ಮೇಲೆಸಗಿದರೆ, ಅದು ದೌರ್ಜನ್ಯ ಎಂದು ಸಂಸತ್ತು ಸ್ಪಷ್ಟಪಡಿಸಿದೆ. ಅದನ್ನು ಮತ್ತೊಮ್ಮೆ ಸಾಬೀತು ಮಾಡುವ ಅವಶ್ಯಕತೆಯಿಲ್ಲ. ಆದರೆ ನ್ಯಾಯಾಧೀಶರು 3 ಪ್ರಕರಣಗಳಲ್ಲಿ ಕಾಯ್ದೆಯ ಆಶಯಕ್ಕೆ ವಿರುದ್ಧವಾಗಿ ದೌರ್ಜನ್ಯ ಮಾಡುವಾಗ ಪರಿಶಿಷ್ಟರು ಎಂದು ತಿಳಿದಿರಲಿಲ್ಲವೆಂದು ಹೇಳಿ ಆರೋಪಿಗಳನ್ನು ಖುಲಾಸೆ ಮಾಡಿದ್ದಾರೆ. | *4.* ***ಸೆಕ್ಷನ್ 3(1)(x)ಬಯ್ಗುಳಗಳಿಗೆ ಸಾಕ್ಷಿ:*** ನಿಂದನೆ ಮಾಡಿರುವ ಪ್ರಕರಣಗಳಲ್ಲಿ ದೌರ್ಜನ್ಯಕ್ಕೊಳಗಾದವರು ಪೋಲೀಸರಿಗೆ ನೀಡಿದ ನಿಂದನೆಯ ಮಾತುಗಳು ಮತ್ತು ಕೋರ್ಟಿನಲ್ಲಿ ಹೇಳಿದ ಮಾತುಗಳು ಹೊಂದಿಕೆಯಾಗಲಿಲ್ಲ. ಕೆಲವೊಮ್ಮೆ ಸಾಕ್ಷಿಗಳು ಮತ್ತು ದೌರ್ಜನ್ಯಕ್ಕೆ ಒಳಗಾದವರು ಹೇಳಿದ ಮಾತುಗಳು ತಾಳೆಯಾಗಲಿಲ್ಲ. ಘಟನೆಯಾಗಿ ಎಷ್ಟೋ ವರ್ಷಗಳು ಕಳೆದ ನಂತರ ವಿಚಾರಣೆಯಾದಾಗ, ಸಾಕ್ಷಿಗಳಿಗೆ ಮತ್ತು ದೌರ್ಜನ್ಯಕ್ಕೊಳಗಾದವರಿಗೆ ನಿಂದಿಸಿದ ಮಾತುಗಳನ್ನು ಅದೇ ರೀತಿ ಹೇಳಲು ಸಾಧ್ಯವಿಲ್ಲ, ಅವರಿಗೆ ಇದೊಂದು ಹೊರೆ. |

*(ಮಾರ್ಕ್ಸ್ ಹಾನ್, ದೌರ್ಜನ್ಯ ಕಾಯ್ದೆ ಪ್ರಕರಣದ 112 ತೀರ್ಪುಗಳ ವಿಶ್ಲೇಷಣೆ, ಸಿಕಂದರಾಬಾದ್, ಸಾಕ್ಷಿ ಮಾನವ ಹಕ್ಕುಗಳ ಕಾವಲುಪಡೆ.ಆ.ಪ್ರ., 2005, ಪುಟ ಪ್ಯಾರಾ 22–50)*

- ***ತಮಿಳುನಾಡಿನ ಅಧ್ಯಯನವೊಂದರಲ್ಲಿ ಹೀಗೆ ತಿಳಿದು ಬಂದಿದೆ:*** ದೌರ್ಜನ್ಯಕ್ಕೊಳಗಾದವರು ಮತ್ತು ಸಾಕ್ಷಿಗಳು ರಾಜಿಯಾಗಲು ಆರೋಪ್, ಪೋಲೀಸ್, ವಕೀಲರು, ಗ್ರಾಮದ ಮುಖ್ಯಸ್ಥರು ಒತ್ತಡ ಹೇರುತ್ತಾರೆ ಇಲ್ಲವೇ ಹೆದರಿಸುತ್ತಾರೆ. ಆದ್ದರಿಂದ ಇವರು ಕೋರ್ಟುಗಳಲ್ಲಿ ವ್ಯತಿರಿಕ್ತ ಸಾಕ್ಷಿ ನೀಡುತ್ತಾರೆ. "ಕೋರ್ಟಿನಲ್ಲಿ ವ್ಯತಿರಿಕ್ತ ಹೇಳಿಕೆ ನೀಡಿದ್ದರಿಂದ ಹೆದರಿಕೆಯಿಲ್ಲದೆ ಬಾಳುತ್ತಿದ್ದೇವೆಂದು 45 ಪ್ರಕರಣಗಳಲ್ಲಿ ತಿಳಿಸಿದರು. ಅಂದರೆ, ಸಾಕ್ಷಿಗಳು ಸ್ವ–ಇಚ್ಛೆಯಿಂದ ವ್ಯತಿರಿಕ್ತವಾಗಿ ವರ್ತಿಸುವುದಿಲ್ಲ ಬದಲಿಗೆ ಮುಂಬರುವ ಸಾಮಾಜಿಕ–ಆರ್ಥಿಕ ಬಿಕ್ಕಟ್ಟುಗಳಿಗೆ ಹೆದರಿ, ವಿಶೇಷವಾಗಿ ಗ್ರಾಮಾಂತರ ಪ್ರದೇಶಗಳಲ್ಲಿ. *(ಎಂ.ಎ. ಬ್ರಿಟ್ಟೋ, ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಗಳ (ದೌರ್ಜನ್ಯ ತಡೆ) ಕಾಯ್ದೆಯ ಅನುಷ್ಠಾನ 1989 (ತಮಿಳ್), ಮಧುರೈ: ಡಾಕ್ಟರ್ ಅಂಬೇಡ್ಕರ್ ಸಾಂಸ್ಕೃತಿಕ ಅಕಾಡೆಮಿ, 2007)*
- ಹೆಚ್ಚಿನ ಖುಲಾಸೆಗೆ, ದೇಶದ ಗೃಹ ಇಲಾಖೆ ಕಾರ್ಯದರ್ಶಿಯ ಹೇಳಿಕೆಯನ್ನು ಸಮಿತಿ ಪರಿಗಣಿಸುತ್ತದೆ. ದೌರ್ಜನ್ಯ ಪ್ರಕರಣಗಳಿಗೆ ಸಾಕ್ಷಿ ಒದಗಿಸುವಲ್ಲಿ ಸಾಕ್ಷಿ ಕಾಯ್ದೆಯ ಕಠಿಣತೆ, ಪೋಲೀಸ್ ತನಿಖೆಯ ದೋಷ, ಇಂತಹ ತನಿಖೆಯಿಂದ ಸಮರ್ಥನೆ ಮಾಡಿಕೊಳ್ಳುವಲ್ಲಿ ಆಗುವ ಕಷ್ಟ, ಜೊತೆಗೆ ನ್ಯಾಯಾಲಯಗಳಲ್ಲಿ ಪ್ರಕರಣ ಮುಂದುವರಿಕೆಗೆ ನಿರಾಸಕ್ತಿ ಹೆಚ್ಚುತ್ತಿರುವ ನಿರ್ದೋಷಕ್ಕೆ ಕಾರಣ. *(ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣಕ್ಕೆ ಸಂಸತ್ತು ಸಮಿತಿ, 4ನೇ ವರದಿಯಲ್ಲಿ 204–05, ನವದೆಹಲಿ, 2005, ಪ್ಯಾರಾ 3.16)*
- ***ಗುಜರಾತ್:*** ಸಾಮಾಜಿಕ ನ್ಯಾಯ ಕೌನ್ಸಿಲ್, ಅಹ್ಮದಾಬಾದ್, ಇವರು ಕೈಗೊಂಡ ಅಧ್ಯಯನ ಹೇಳುವಂತೆ ಶೇ.95% ದೌರ್ಜನ್ಯ ತಡೆ ಕಾಯ್ದೆಯ ಪ್ರಕರಣಗಳು ಹಾಳಾಗಲು ತನಿಖೆಯ ತಾಂತ್ರಿಕ ದೋಷ (ಪೋಲೀಸ್ ನಿರ್ಲಕ್ಷ್ಯ) ಮತ್ತು ಪ್ರಾಸಿಕ್ಯೂಷನ್ ಕಾರಣ. *(ಓ ಗುಜರಾತ್ ಜಾತಿಯಲ್ಲಿ ನೀನೂ ಮುಂದೆ? ಕೋಮುವಾದ ತಡೆ, ಮಾರ್ಚ್ 2005, ಪುಟ 12)*
- ದೌರ್ಜನ್ಯ ಪ್ರಕರಣ ದಾಖಲಾಗಿ ವಿಚಾರಣೆಗೆ ನ್ಯಾಯಾಲಯಕ್ಕೆ ಬಂದಾಗಲೂ ಸಾಕ್ಷಿಗಳು ಪ್ರಬಲ ಜಾತಿಯವರ ವಿರುದ್ಧ ಹೇಳಿಕೆ ನೀಡಲು ಹಿಂಜರಿಯುತ್ತಾರೆ. ಈ ರೀತಿ ಪ್ರಕರಣಗಳು ಉಲ್ಟಾಪಲ್ಟ ಆಗುತ್ತವೆ. ಜೊತೆಗೆ ದೌರ್ಜನ್ಯಕ್ಕೆ ಬಲಿಯಾದವರು ನ್ಯಾಯಾಲಯಕ್ಕೆ ಬಂದಾಗ ಅವರ ಹೊಟ್ಟೆಪಾಡಿಗೆ ಕಷ್ಟವಾಗುತ್ತದೆ. ಹಾಗೆ ಕಾನೂನು ನ್ಯಾಯ ನೀಡುವಲ್ಲಿ ವಿಫಲವಾಗುತ್ತವೆ. *(ಮಾನವ ಹಕ್ಕುಗಳ ರಾಷ್ಟ್ರೀಯ ಆಯೋಗ, ಪರಿಶಿಷ್ಟ ಜಾತಿಯವರ ಮೇಲೆ ದೌರ್ಜನ್ಯ ತಡೆ ವರದಿ, ನವದೆಹಲಿ ಪುಟ 91)*
- **ಮಧ್ಯಪ್ರದೇಶ:** ಪರಿಶಿಷ್ಟ ಜಾತಿ ಮತ್ತು ಪಂಗಡಗಳವರ ರಾಷ್ಟ್ರೀಯ ಆಯೋಗ, ವಿಶೇಷ ನ್ಯಾಯಾಲಯದ 82 ತೀರ್ಪುಗಳನ್ನು ಪರಿಶೀಲಿಸಿತು. ಇದರಲ್ಲಿ 95.1% ಪ್ರಕರಣಗಳು ನಿರ್ದೋಷಿ ಎಂದು ಸಾಬೀತಾಗಿದೆ. ಕಾರಣ: (i) ಎಫ್.ಐ.ಆರ್ ತಡವಾಗಿ ದಾಖಲಿಸಿದ್ದಕ್ಕೆ; ii) ದೌರ್ಜನ್ಯಕ್ಕೂ ಮತ್ತು ವೈಷಮ್ಯಕ್ಕೂ ಸಂಬಂಧ ಕಲ್ಪಿಸಿ ಈ ಹಿನ್ನೆಲೆಯಲ್ಲಿ ದೂರು ದಾಖಲಿಸಲಾಗಿದೆ ಎಂದು ಕೋರ್ಟು ನಿರ್ಣಯಿಸುವುದರಿಂದ; iii) ದೂರುದಾರರು/ಸಾಕ್ಷಿಗಳು ವ್ಯತಿರಿಕ್ತ ಹೇಳಿಕೆ ನೀಡುವುದರಿಂದ; iv) ಕೋರ್ಟುಗಳಲ್ಲಿ ಸಾಕ್ಷಿಗಳು ವಿರುದ್ಧ ಸಾಕ್ಷಿ ನೀಡುವುದರಿಂದ; v) ಆಪಾದಿತರು ಮತ್ತು ದೌರ್ಜನ್ಯಕ್ಕೆ ಒಳಗಾದವರು ರಾಜಿಯಾಗುವುದರಿಂದ vi) ಆರೋಪ ಸಾಬೀತು ಮಾಡಲು ಪ್ರಾಸಿಕ್ಯೂಷನ್‌ಗೆ ಸಾಧ್ಯವಾಗದಿರುವುದರಿಂದ *(ಪರಿಶಿಷ್ಟ ಜಾತಿ ಮತ್ತು ಪಂಗಡಗಳ ರಾಷ್ಟ್ರೀಯ ಆಯೋಗ, ಐದನೇ ವರದಿಯಲ್ಲಿ 1998–99, ನವದೆಹಲಿ, 2000, ಪ್ಯಾರಾ 8, 138)*

ನ್ಯಾಯಾಲಯದಲ್ಲಿ ದೌರ್ಜನ್ಯ ಪ್ರಕರಣಗಳ ಖುಲಾಸೆ ಹೆಚ್ಚುತ್ತಿರುವುದಕ್ಕೆ ಪರಿಶಿಷ್ಟ ಜಾತಿಯವರ ರಾಷ್ಟ್ರೀಯ ಆಯೋಗ ಕಾಳಜಿ ವ್ಯಕ್ತಪಡಿಸುತ್ತದೆ ಹಾಗೂ ಇದಕ್ಕೆ ಮುಖ್ಯ ಕಾರಣ ಹೀಗೆಂದು ತಿಳಿಸುತ್ತದೆ; *i) ದೂರುದಾರ ಮತ್ತು ಆರೋಪಿಗಳ ನಡುವೆ ರಾಜಿ; ii) ಪ್ರಾಸಿಕ್ಯೂಷನ್ ವತಿಯಿಂದ ಕಳಪೆ ಅರ್ಜಿ ಸಲ್ಲಿಕೆ; iii) ದೂರುದಾರರು ಮತ್ತು ಸಾಕ್ಷಿಗಳು ಪ್ರತಿಕೂಲ ಸಾಕ್ಷಿಗಳಾಗುವುದು; iv) ಅಪೂರ್ಣ ಸಾಕ್ಷಿ, ಪ್ರತ್ಯಕ್ಷ ಸಾಕ್ಷಿಯ ಕೊರತೆ, ಸಾಕ್ಷಿಯ ಹೇಳಿಕೆಯಲ್ಲಿ ವ್ಯತ್ಯಾಸ; v) ನ್ಯಾಯಾಲಯ ನೀಡುವ ಸಂಶಯದ ಲಾಭ; vi) ಇತರೆ ಜಾತಿಯವರ ಮೇಲೆ ಬಲಿಯಾದವರ ಆರ್ಥಿಕ ಅವಲಂಬನೆ; vii) ಆರೋಪ ಪಟ್ಟಿ ಸಲ್ಲಿಕೆಗೆ ತಡ; viii) ನ್ಯಾಯಾಲಯದಲ್ಲಿ ವಿಳಂಬ (ಪರಿಶಿಷ್ಟ ಜಾತಿಯವರ ರಾಷ್ಟ್ರೀಯ ಆಯೋಗದ ಮೊದಲನೇ ವರದಿ 2004–05, ನವದೆಹಲಿ, 2006, ಪ್ಯಾರಾ 6.16)*

⇒ ***ಅಧ್ಯಯನದ ಮೂಲಕ ತೀರ್ಪುಗಳ ಬಣ್ಣ ಬಯಲು ಮಾಡಲಾಗಿದೆ. ನ್ಯಾಯಾಲಯದ ಈ ಧೋರಣೆಗಳು ಪರಿಶಿಷ್ಟರ ಮೇಲಾದ ದೌರ್ಜನ್ಯಗಳಿಗೆ ನ್ಯಾಯ ನೀಡುತ್ತದೆಯೇ?***

- ***ಕಾಯ್ದೆಯ ಆಶಯ ಮತ್ತು ಪ್ರಕರಣದ ಪ್ರಾಮಾಣಿಕತೆಯನ್ನು ತಾಂತ್ರಿಕತೆಗಳು ಮೀರಿಸುತ್ತವೆ.***
- ***ಪರಿಶಿಷ್ಟರೆನ್ನುವ ಕಾರಣಕ್ಕೆ ದೌರ್ಜನ್ಯವಾಗಿಲ್ಲ ಬದಲಿಗೆ ಕಾಮಾತುರ, ರಾಜಕೀಯ ದ್ವೇಷ, ಶತೃತ್ವದಿಂದ ಎಂದು ಹೇಳಿ ಪ್ರಾಸಿಕ್ಯೂಷನ್ ವಾದವನ್ನು ತಳ್ಳಿ ಹಾಕಲಾಗುತ್ತದೆ. ಆದರೆ, ದೌರ್ಜನ್ಯಕ್ಕೆ ಪ್ರೇರೇಪಣೆ ಬೇಕಿಲ್ಲ ಎಂದು ಕಾಯ್ದೆ ಹೇಳುತ್ತದೆ.***
- ***ಪರಿಶಿಷ್ಟರಲ್ಲದವರು ನೀಡಿದ ಸಾಕ್ಷಿ ಮಾತ್ರ ಒಪ್ಪುತ್ತೇವೆ, ಪರಿಶಿಷ್ಟರು ಹೇಳುವ ಸಾಕ್ಷಿ ಪೂರ್ವಾಗ್ರಹಪೀಡಿತ ಎಂದುಕೊಳ್ಳುವುದೇ ಪೂರ್ವಾಗ್ರಹ ಮನೋಭಾವನೆಯಾಗಿದೆ.***
- ***ಸಾಕ್ಷಿಗಳನ್ನು ಒಪ್ಪಲು, ಆರೋಪ ನಿರ್ಧರಿಸಲು ಮತ್ತು ತೀರ್ಪು ನೀಡಲು ವ್ಯಕ್ತಿಗತ ವೈಯಕ್ತಿಕ ನಂಬಿಕೆ ಮತ್ತು ಜಾತಿ/ಲಿಂಗದ ಪೂರ್ವಭಾವನೆ ಪಾತ್ರ ವಹಿಸುವುದು ಕಾಣುತ್ತದೆ.***

**"ಪ್ರಕರಣದ ಎಲ್ಲಾ ಹಂತದಲ್ಲಿ ಜಾತಿ ಮತ್ತು ಲಿಂಗ ಸಮಾನತೆಗೆ ನ್ಯಾಯಾಧೀಶರ ವ್ಯಕ್ತಿಗತ ಮನೋಭಾವನೆ, ಸಾಕ್ಷಿಯ ಪ್ರಾಮಾಣಿಕತೆ ಒಪ್ಪಲು ಅಥವಾ ಆರೋಪ ನಿರ್ಧರಿಸುವಲ್ಲಿ ಪ್ರಭಾವ ಬೀರುತ್ತದೆ... ಕಾನೂನು ವ್ಯವಸ್ಥೆಯಲ್ಲಿ ಮೇಲಕ್ಕೆ ಹೋದಂತೆಲ್ಲಾ ಈ ಭಾವನೆ ಹೆಚ್ಚು ಆಳವಾಗಿದೆ."**

*ಮಾನವ ಹಕ್ಕುಗಳ ಕಾವಲುಪಡೆ, ಬ್ರೋಕನ್ ಪೀಪಲ್: ಭಾರತದಲ್ಲಿ ಅಸ್ಪೃಶ್ಯರ ಮೇಲೆ ಜಾತೀಯ ಹಿಂಸೆ, ನ್ಯೂಯಾರ್ಕ್, 1999, ಪುಟ 176)*

### ಆಂಧ್ರಪ್ರದೇಶದ ತ್ಸುಂಡೂರ್ ಹತ್ಯಾಕಾಂಡ ವಿಚಾರಣೆಯಲ್ಲಿ ವಿಳಂಬ:

*06–08–91ರಂದು 400 ಜನರು ಪರಿಶಿಷ್ಟರನ್ನು ಅಟ್ಟಿಸಿ ಕೊಂದರು.*

*ಪೋಲೀಸ್ ತನಿಖೆ: 06–08 ರಿಂದ 08–11–91 ರವರೆಗೆ*

*08–11–91ರಂದು ಐ.ಪಿ.ಸಿ + ದೌರ್ಜನ್ಯ ತಡೆ ಕಾಯ್ದೆಯ 3(1)(i), (xv), 3(2) (v), (vi), ಅನ್ವಯ ಆರೋಪ ಪಟ್ಟಿ ಸಲ್ಲಿಸಲಾಯಿತು.*

*ಪ್ರಕರಣವನ್ನು ವಿಶೇಷ ನ್ಯಾಯಾಲಯಕ್ಕೆ 1993ರಲ್ಲಿ ವರ್ಗಾಯಿಸಲಾಯಿತು.*

*ದೌರ್ಜನ್ಯಕ್ಕೊಳಗಾದವರು ಕ್ರಿಶ್ಚಿಯನ್ನರೆನ್ನುವ ಕಾರಣಕ್ಕೆ ದೌರ್ಜನ್ಯ ತಡೆ ಕಾಯ್ದೆ ಕೈಬಿಡಲಾಯಿತು, ಉಚ್ಚ ನ್ಯಾಯಾಲಯ ಹಿಂದೂಗಳೆಂದು ತಿಳಿಸಿತು 1994*

*ಪ್ರಕರಣದ ನಿರ್ವಹಣೆಗೆ ವಿಶೇಷ ಪಬ್ಲಿಕ್ ಪ್ರಾಸಿಕ್ಯೂಟರ್ ನೇಮಕ 1993*

*ತ್ಸುಂಡೂರು ನ್ಯಾಯಾಲಯಕ್ಕೆ ಪ್ರಕರಣವನ್ನು ರವಾನಿಸಿದಾಗ ವಿಚಾರಣೆ ಮುಂದೂಡಲ್ಪಟ್ಟಿತು 05–08 ರಿಂದ 10–12–2003.*

*ಪ್ರಕರಣದ ಡೈರಿಯನ್ನು ಪಬ್ಲಿಕ್ ಪ್ರಾಸಿಕ್ಯೂಟರಿಗೆ ಜುಲೈ 2003ರಲ್ಲಿ ನೀಡಲಾಯಿತು*

*ಪ್ರಾಸಿಕ್ಯೂಷನ್ ಮತ್ತು ಪ್ರತಿವಾದಿಯ ಸಾಕ್ಷಿ ಹೇಳಿಕೆ 2004–2007*

*ನ್ಯಾಯಾಲಯದ ತೀರ್ಪು: ಆರೋಪಿಗಳಲ್ಲಿ 21 ಜನರಿಗೆ ಜೀವಾವಧಿ; 35 ಜನರಿಗೆ 1 ವರ್ಷದ ಜೈಲು ಮತ್ತು; 123 ಜನರು ನಿರ್ದೋಷಿಗಳು 01–08–2007*

- ⇒ ***ತನಿಖೆಗೆ ಪೋಲೀರು 3–ತಿಂಗಳ ಸಮಯ ತೆಗೆದುಕೊಂಡರು. ಇದು ನಿಯಮದ 30 ದಿನಗಳ ಮಿತಿಗೆ ವಿರುದ್ಧವಾಗಿದೆ ಅಲ್ಲವೇ? ಮತ್ತು ಪಬ್ಲಿಕ್ ಪ್ರಾಸಿಕ್ಯೂಟರ್ ನೇಮಿಸಲು 9 ವರ್ಷಗಳು ಏಕೆ?***
- ⇒ ***ಪರಿಶಿಷ್ಟರೆನ್ನುವ ಕಾರಣಕ್ಕೆ ಅವರ ಮೇಲೆ ದೌರ್ಜನ್ಯವಾಯಿತು. ಈ ವಿಚಾರ ಎಲ್ಲರಿಗೂ ತಿಳಿದಿತ್ತು. ಆದರೂ ಅವರು ಧಾರ್ಮಿಕ ಅಲ್ಪಸಂಖ್ಯಾತರು ಎಂದು ವಿಚಾರಣೆ ತಡ ಮಾಡಿದ್ದು ಅಪರಾಧವಲ್ಲವೇ?***
- ⇒ ***ಕಡೆಯಲ್ಲಿ, ದೌರ್ಜನ್ಯ ನಡೆದು ತೀರ್ಪು ಬರಲು 16 ವರ್ಷ ಸಮಯವಾದರೆ, ದೌರ್ಜನ್ಯ ಮಾಡಿದವರಿಗೆ ಎಂತಹ ನಿರ್ಬಂಧಿತ ಸಂದೇಶ ನೀಡಿದಂತಾಯಿತು?***

### ಮಹಾರಾಷ್ಟ್ರ, ಖೈರಲಾಂಜಿ, ದೌರ್ಜನ್ಯಕ್ಕೊಳಗಾದವರಿಗೆ ಅರೆನ್ಯಾಯ

*4 ಪರಿಶಿಷ್ಟ ಕುಟುಂಬಗಳನ್ನು ಭೂವಿವಾದದಲ್ಲಿ ಕೊಲೆಗೈಯಲಾಯಿತು*

*ಎಫ್.ಐ.ಆರ್ ವರದಿಯಲ್ಲಿ ಕೇವಲ ಐ.ಪಿ.ಸಿ+ದೌರ್ಜನ್ಯ ತಡೆ ಕಾಯ್ದೆಯ 3(1)(x) ಸೆಕ್ಷನ್ ಉಲ್ಲೇಖಿಸಲಾಯಿತು*

*ಪ್ರಕರಣವನ್ನು ಸಿಐಡಿಗೆ ವರ್ಗಾಯಿಸಲಾಯಿತು 08–11–2006*

*ಪ್ರಕರಣವನ್ನು ಸಿಬಿಐಗೆ ವರ್ಗಾಯಿಸಲಾಯಿತು 28–11–2006*

*ವಿಶೇಷ ನ್ಯಾಯಾಲಯದಲ್ಲಿ ವಿಚಾರಣೆ ಆರಂಭ: 03–05–2007*

*11 ಜನರ ಮೇಲೆ ಆರೋಪ ಪಟ್ಟಿ ಹಾಕಲಾಯಿತು ಐ.ಪಿ.ಸಿಯನ್ವಯ + ದೌರ್ಜನ್ಯ ತಡೆ ಕಾಯ್ದೆಯ ಸೆಕ್ಷನ್ 3(1)(x) ಮತ್ತು 3(2)(v): 27–12–2006*

*ಸಾಕ್ಷಿಗಳ ಆಲಿಕೆ ಅಂತ್ಯ: 03–05–2007ರಿಂದ 02–2008*

*ಅಂತಿಮ ವಾದ, ಪ್ರತಿವಾದ, ಸೆಪ್ಟೆಂಬರ್ 2008*

*ನ್ಯಾಯಾಲಯದ ತೀರ್ಪು: 8 ಜನರು ದೋಷಿಗಳು, 6 ಜನರಿಗೆ ಮರಣದಂಡನೆ ಮತ್ತು ಇಬ್ಬರಿಗೆ ಜೀವಾವಧಿ, 3 ಜನರು ನಿರ್ದೋಷಿಗಳು, ಜಾತಿ ಹಿನ್ನೆಲೆಯಲ್ಲಿ ಕೊಲೆಯಾಗಿಲ್ಲ, ಆದ್ದರಿಂದ ದೌರ್ಜನ್ಯ ತಡೆ ಕಾಯ್ದೆ ಆರೋಪ ಬದಿಗಿರಿಸಲಾಯಿತು 24–09–2008.*

*ದೋಷಿಗಳೆಂದು ಸಾಬೀತಾದ 8 ಜನರಿಂದ ಮೇಲ್ಮನವಿ: ಆಗಸ್ಟ್ 2009*

- ⇒ ***ಪರಿಶಿಷ್ಟರ ಕುಟುಂಬಗಳನ್ನು ಪರಿಶಿಷ್ಟರಲ್ಲದವರು ಭೀಕರವಾಗಿ ಕೊಲೆ ಮಾಡಿ ಜಾತಿಯ ಹಿನ್ನೆಲೆಯಲ್ಲಿ ಹಿಂಸೆ ನೀಡಿರುವುದು ಸ್ಪಷ್ಟವಾಗಿ ತಿಳಿಯುವಾಗ, ಇದು ದೌರ್ಜನ್ಯ ತಡೆ ಕಾಯ್ದೆಯಲ್ಲಿ ಸ್ಪಷ್ಟ ಅಪರಾಧವಲ್ಲವೇ? ಕರ್ನಾಟಕ ರಾಜ್ಯ V/s ಅಪ್ಪಾ ಬಾಲು ಇಂಗಾಳೆ ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯ ಪರಿಶಿಷ್ಟರ ಮೇಲಿನ ದೌರ್ಜನ್ಯಗಳಲ್ಲಿ ಉದ್ದೇಶ ಅಗತ್ಯವಿಲ್ಲ ಎಂದು ತಿಳಿಸಿದೆ, ಖೈರಲಾಂಜಿ ಪ್ರಕರಣದಲ್ಲಿ ಮಾತ್ರ ಏಕೆ ಕೊಲೆಗೆ ಪ್ರೇರಣೆ ಅಗತ್ಯ ಎಂದು ಹೇಳಲಾಗುತ್ತಿದೆ?***

# I. ದೌರ್ಜನ್ಯಕ್ಕೊಳಗಾದವರ ಹಾಗೂ ಸಾಕ್ಷಿಗಳ ಹಕ್ಕುಗಳು

ದೌರ್ಜನ್ಯಕ್ಕೆ ಒಳಗಾದವರನ್ನು ಅನುಕಂಪದಿಂದ ಉಪಚರಿಸಬೇಕು ಮತ್ತು ಗೌರವದಿಂದ ಕಾಣಬೇಕು. *(ಅನುಚ್ಛೇದ 4 ದೌರ್ಜನ್ಯಕ್ಕೊಳಗಾದವರಿಗೆ ನ್ಯಾಯ, ಘೋಷಣೆ 1985)*

- ಜನ್ಮಾಧಾರಿತ (ಜಾತಿ) ಸಮುದಾಯಗಳವರಿಗೆ ನ್ಯಾಯದ ವ್ಯವಸ್ಥೆ ಸಮಾನವಾಗಿ ದೊರಕುವಂತೆ ರಾಜ್ಯ ನೋಡಿಕೊಳ್ಳಬೇಕು...*(ಪ್ಯಾರಾ 21 ಸಿಇಆರ್‌ಡಿ, ಸಾಮಾನ್ಯ ಶಿಫಾರಸ್ಸುಗಳು XXIX 2002)*
- ಜನಾಂಗೀಯ ವೈಷಮ್ಯಕ್ಕೆ ಬಲಿಯಾದವರ ಕೇಸುಗಳು ನ್ಯಾಯಾಲಯಕ್ಕೆ ತರಲು ನೆರವು ನೀಡಬೇಕು ಮತ್ತು i) ಕಾನೂನು ನೆರವು; ii) ವಿಚಾರಣೆಯ ಮಾಹಿತಿ; iii) ಎಲ್ಲಾ ರೀತಿಯ ಬೆದರಿಕೆ ವಿರುದ್ಧ ರಕ್ಷಣೆಯನ್ನು ಖಂಡಿತವಾಗಿ ನೀಡಲೇಬೇಕು *(ಪ್ಯಾರಾ 17 ಸಿಇಆರ್‌ಡಿ ಸಾಮಾನ್ಯ ಶಿಫಾರಸ್ಸುಗಳು XXXI 2005)*
- ನ್ಯಾಯ ವ್ಯವಸ್ಥೆ, ಕೆಳಗೆ ತಿಳಿಸಿರುವಂತೆ ಮಾಡುವುದನ್ನು ರಾಜ್ಯವು ಖಚಿತಪಡಿಸಿಕೊಳ್ಳಬೇಕು:

  a) ದೌರ್ಜನ್ಯಕ್ಕೊಳಗಾದವರಿಗೆ ಕುಟುಂಬಕ್ಕೆ, ಸಾಕ್ಷಿಗಳಿಗೆ ಕೇಸು ಇತ್ಯರ್ಥವಾಗುವವರೆಗೆ ಕೋರ್ಟಿನಲ್ಲಿ ಸೂಕ್ತ ಸ್ಥಳ ನೀಡಬೇಕು;
  b) ದೌರ್ಜನ್ಯಕ್ಕೊಳಗಾದವರನ್ನು ಪಕ್ಷಪಾತ, ಪೂರ್ವಾಗ್ರಹ ಭಾವನೆಯಿಲ್ಲದೆ ಉಪಚರಿಸಬೇಕು ಮತ್ತು ಗೌರವಿಸಬೇಕು;
  c) ದೌರ್ಜನ್ಯಕ್ಕೊಳಗಾದವರಿಗೆ ಸರಿ ಸಮಯಕ್ಕೆ ಕೋರ್ಟು ತೀರ್ಪು ನೀಡಬೇಕು;
  d) ಜನಾಂಗೀಯ ತಾರತಮ್ಯಕ್ಕೆ ಒಳಗಾದವರಿಗೆ ಆದ ಹಾನಿಗೆ ನ್ಯಾಯಯುತ ಮತ್ತು ಸಾಕಷ್ಟು ಪರಿಹಾರ ನೀಡಬೇಕು *(ಪ್ಯಾರಾ 19, ಸಿಇಆರ್‌ಡಿ, ಸಾಮಾನ್ಯ ಶಿಫಾರಸ್ಸುಗಳು XXXI 2005)*

- ಅಪರಾಧಿಗಳು ಸರಿಯಾದ ಪ್ರಾಯಶ್ಚಿತ್ತ ಅನುಭವಿಸಬೇಕು, ದೌರ್ಜನ್ಯಕ್ಕೊಳಗಾದವರಿಗೆ, ಕುಟುಂಬಗಳಿಗೆ ಅಥವಾ ಅವಲಂಬಿತರಿಗೆ ಆಗಿರುವ ಹಾನಿಗೆ ಬೆಲೆ ತೆರಬೇಕು, ದೌರ್ಜನ್ಯದಿಂದಾದ ನಷ್ಟವನ್ನು ಭರಿಸಬೇಕು, ಹಕ್ಕುಗಳನ್ನು ಮರಳಿ ನೀಡುವಂತಾಗಬೇಕು *(ಅನುಚ್ಛೇದ 8, ದೌರ್ಜನ್ಯಕ್ಕೊಳಗಾದವರಿಗೆ ನ್ಯಾಯ ಘೋಷಣೆ 1985)*
- ನ್ಯಾಯದ ವ್ಯವಸ್ಥೆ ಸಮಾನ ಅವಕಾಶ ತತ್ವದಡಿ ನ್ಯಾಯ ನೀಡಲು ರಾಜ್ಯವು ನೋಡಿಕೊಳ್ಳಬೇಕು. ವಿಶೇಷವಾಗಿ ಕಾಯ್ದೆ ಅಥವಾ ಯೋಜನೆಗಳ ಮೂಲಕ ಉಚಿತ ಕಾನೂನು ನೆರವು ನೀಡಬೇಕು. *(ಅನುಚ್ಛೇದ 39ಎ, ಭಾರತ ಸಂವಿಧಾನ)*
- ರಾಜ್ಯ ಸರ್ಕಾರ ಈ ಕ್ರಮವನ್ನೂ ಕೈಗೊಳ್ಳಬೇಕು:

  i) ದೌರ್ಜನ್ಯಕ್ಕೊಳಗಾದವರಿಗೆ ನ್ಯಾಯ ದೊರಕಿಸಲು ಕಾನೂನು ನೆರವು ಸೌಲಭ್ಯಗಳು;
  ii) ತನಿಖೆ ಮತ್ತು ವಿಚಾರಣೆಯಲ್ಲಿ ದೌರ್ಜನ್ಯಕ್ಕೊಳಗಾದವರು ಹಾಗೂ ಸಾಕ್ಷಿಗಳಿಗೆ ಪ್ರಯಾಣ ಮತ್ತು ನಿರ್ವಹಣೆ ಭತ್ಯೆ;
  iii) ದೌರ್ಜನ್ಯಕ್ಕೊಳಗಾದವರಿಗೆ ಆರ್ಥಿಕ ಮತ್ತು ಸಾಮಾಜಿಕ ಪುನರ್ವಸತಿ *(ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ದೌರ್ಜನ್ಯ ತಡೆ ಕಾಯ್ದೆ ಸೆಕ್ಷನ್21(2))*

**ಹೆಚ್ಚಿನ ಮಾಹಿತಿಗೆ:** ಅನುಚ್ಛೇದ 6 ಐಸಿಇಆರ್‌ಡಿ; ಪ್ಯಾರಾ 7 ಸಿಇಆರ್‌ಡಿ ಸಾಮಾನ್ಯ ಶಿಫಾರಸ್ಸುಗಳು XXIX 2002; ಪರಿಶಿಷ್ಟ ದೌರ್ಜನ್ಯ ತಡೆ ನಿಯಮ 5, 11, 12 ಮತ್ತು 14.

## II ನಿಜಾಂಶ?

**"ದುರ್ಬಲರನ್ನು [ಪರಿಶಿಷ್ಟರು] ಗಮನದಲ್ಲಿಟ್ಟು ಕಾನೂನಿನ ಸಮಾನ ರಕ್ಷಣೆ ನೀಡಲೆಂದು ಸಿ.ಆರ್.ಪಿ.ಸಿ ಮಾತು ಸಾಕ್ಷಿ ಕಾಯ್ದೆಯಲ್ಲಿ ಬದಲಾವಣೆ ಮಾಡಲಾಗಿದೆ; ಪೋಲೀಸ್ ಮತ್ತು ನ್ಯಾಯಾಲಯಗಳಿಗೆ ಹೆಚ್ಚುವರಿ ಅಧಿಕಾರ ನಿಡಿದೆ; ಮತ್ತು ಶಿಕ್ಷೆಯನ್ನು ಕಠಿಣಗೊಳಿಸಿದೆ. ಕೆಲವು ವಿಶೇಷ ಕಾನೂನು ಹಾಗೂ ಅನುಷ್ಠಾನ ಮಾಡಲು ವಿಶೇಷ ಸಂಸ್ಥೆಗಳನ್ನು ಸ್ಥಾಪಿಸಲಾಗಿದೆ. ದುರ್ಬಲರಿಗೆ ಕ್ರಿಮಿನಲ್ ನ್ಯಾಯ ಒದಗಿಸಲು ಸಂವಿಧಾನ ತಿಳಿಸಿರುವ ಕಡ್ಡಾಯ ಕೆಲಸ ಮತ್ತು ಕಾಯ್ದೆಯ ಉದ್ದೇಶಗಳನ್ನು ಈಡೇರಿಸುವುದು ಕ್ರಿಮಿನಲ್ ನ್ಯಾಯಾಡಳಿತದ ಮುಖ್ಯ ಕೆಲಸ. ಇದಕ್ಕಾಗಿ, ಉಚ್ಚ ನ್ಯಾಯಾಲಯ ಹಾಗೂ ಸರ್ವೋಚ್ಚ ಪ್ರಾಧಿಕಾರಗಳು ಅನೇಕ ಸುತ್ತೋಲೆ ಮತ್ತು ನಿರ್ದೇಶನ ನೀಡಿವೆ. ಆದರೂ ಕ್ರಿಮಿನಲ್ ನ್ಯಾಯ ವ್ಯವಸ್ಥೆಯ ಧೋರಣೆ ಮತ್ತು ಆಚರಣೆಗಳಲ್ಲಿ ಬದಲಾವಣೆ ಕಾಣುತ್ತಿಲ್ಲ".**

*ಕ್ರಿಮಿನಲ್ ನ್ಯಾಯಕ್ಕೆ ರಾಷ್ಟ್ರೀಯ ನೀತಿ ಸಮಿತಿ, ಕರಡು ವರದಿ, ಗೃಹ ಸಚಿವಾಲಯ, 2007, ಪ್ಯಾರಾ 8.1.2*

***ದೌರ್ಜನ್ಯಕ್ಕೊಳಗಾದ ಪರಿಶಿಷ್ಟರು ಹಾಗೂ ಸಾಕ್ಷಿಗಳ ಹಕ್ಕುಗಳು***

- ದೌರ್ಜನ್ಯ ತಡೆ ಕಾಯ್ದೆ ಇನ್ನಿತರೆ ಕ್ರಿಮಿನಲ್ ಕಾಯ್ದೆಯಲ್ಲಿ ಈ ಹಕ್ಕುಗಳನ್ನು ತಿಳಿಸುವುದಿಲ್ಲ. ಅವರ ಪಾತ್ರ ಪ್ರಾಸಿಕ್ಯೂಷನ್ ಸಾಕ್ಷಿ ನೀಡಲಷ್ಟೇ ಸೀಮಿತವಾಗಿದೆ. ಈ ಹಕ್ಕುಗಳ ಕುರಿತು ಯಾವ ಕಾಯ್ದೆ ಕೂಡ ಸ್ಪಷ್ಟವಾಗಿ ತಿಳಿಸುವುದಿಲ್ಲ: i) ಎಫ್.ಐ.ಆರ್ ದಾಖಲಿಸಲು; ii) ದೌರ್ಜನ್ಯದ ಪ್ರಕರಣದಲ್ಲಿ ಅವರಿಗೆ ಸಿಗಬೇಕಿರುವ ದಾಖಲೆಗಳ ಕುರಿತು; iii) ಪರಿಹಾರ ಮತ್ತು ನಷ್ಟಭರ್ತಿ ಕುರಿತು; iv) ಅವರ ಪ್ರಕರಣಗಳ ಸ್ಥಿತಿಗತಿ ಮಾಹಿತಿ ಕುರಿತು; v) ಸಾಕ್ಷಿಗಳಿಗೆ ರಕ್ಷಣೆ

***ಕಾಯ್ದೆಯ ಅನುಷ್ಠಾನಕ್ಕೆ ನ್ಯಾಯಾಂಗದ ಧೋರಣೆ***

- ಪೋಲೀಸರು ಎಫ್.ಐ.ಆರ್ ದಾಖಲಿಸುವುದಿಲ್ಲ ಅಥವಾ ತಡ ಮಾಡಿ ದಾಖಲಿಸುತ್ತಾರೆ, ಅಥವಾ ಘಟನೆಗೆ ಸಂಬಂಧವಿಲ್ಲದ ಸೆಕ್ಷನ್ ಅಡಿಯಲ್ಲಿ ಎಫ್.ಐ.ಆರ್ ದಾಖಲಿಸುತ್ತಾರೆ, ಇದೆಲ್ಲವೂ ದೌರ್ಜನ್ಯ ತಡೆ ಕಾಯ್ದೆಯಲ್ಲಿ ಕೇಸು ದಾಖಲಿಸದಿರಲು ಪೋಲೀಸರಿಗಿರುವ ನಕಾರಾತ್ಮಕ ಧೋರಣೆಯನ್ನು ಶೀಟ್ III ತಿಳಿಸುತ್ತದೆ. ಇದರಿಂದ ದೌರ್ಜನ್ಯಕ್ಕೆ ಒಳಗಾದವರಿಗೆ ಪರಿಹಾರ ಮತ್ತು ಪುನರ್ವಸತಿ ಸಿಗುವುದಿಲ್ಲ, ತನಿಖೆ ಪ್ರಗತಿ, ಆರೋಪಿಯ ಬಂಧನ, ಬಿಡುಗಡೆ ಕೇಸಿನ ಪ್ರಗತಿಯಂತಹ ಮಾಹಿತಿ ಹಾಗೂ ಎಫ್.ಐ.ಆರ್ ಮತ್ತು ವೈದ್ಯಕೀಯ ವರದಿ ಯಾವುದೂ ಸಿಗುವುದಿಲ್ಲ.
- ದೌರ್ಜನ್ಯಕ್ಕೊಳಗಾದ ಪರಿಶಿಷ್ಟರು ಮತ್ತು ಸಾಕ್ಷಿಗಳು ಕೋರ್ಟುಗಳಲ್ಲಿ ಹೆಚ್ಚಾಗಿ ವ್ಯತಿರಿಕ್ತ ಸಾಕ್ಷಿಗಳಾಗುವುದನ್ನು ಶೀಟ್ IV ತಿಳಿಸುತ್ತದೆ. ಇದಕ್ಕೆ ಮುಖ್ಯ ಕಾರಣ ಅವರಿಗಿರುವ ಆರ್ಥಿಕ ಬಿಕ್ಕಟ್ಟು, ಕೋರ್ಟುಗಳು ತೆಗೆದುಕೊಳ್ಳುವ ಸಮಯ, ಪರಿಶಿಷ್ಟರಲ್ಲದ ಆರೋಪಿ ಮತ್ತು ಪೋಲೀಸ್ ಬೆದರಿಕೆ ಅಥವಾ ಕೆಲವೊಮ್ಮೆ ಘರ್ಷಣೆ.

## 1. ತ್ವರಿತ ಪರಿಹಾರ, ನಷ್ಟಭರ್ತಿ, ಪುನರ್ವಸತಿ, ಪ್ರಯಾಣ ಮತ್ತು ನಿರ್ವಹಣೆ ಖರ್ಚು-ಹಕ್ಕುಗಳು.

ಪರಿಶಿಷ್ಟರ ವಿರುದ್ಧ ದೌರ್ಜನ್ಯ ಜಾತಿಯತೆಗೆ ಕಾರಣವಾಗುತ್ತದೆ ಎಂದು ಪಶ್ಚಿಮ ಬಂಗಾಳ ಸರ್ಕಾರದ ನಂಬಿಕೆ, ಆದ್ದರಿಂದ ದೌರ್ಜನ್ಯ ತಡೆ ಕಾಯ್ದೆಯಲ್ಲಿ ಕೇಸುಗಳನ್ನೇ ದಾಖಲಿಸುವುದಿಲ್ಲ.

- ***ಹಕ್ಕುಗಳಿಗೆ ಬೆಲೆಯಿಲ್ಲ:*** ಹೆಚ್ಚು ಪ್ರಚಾರ ಸಿಕ್ಕಿದ ದೌರ್ಜನ್ಯ ಘಟನೆಗಳಲ್ಲಿ ದೌರ್ಜನ್ಯಕ್ಕೊಳಗಾದವರಿಗೆ ಸರ್ಕಾರಿ ಅಧಿಕಾರಿಗಳು ಪ್ರಾಮಾಣಿಕ ಪರಿಹಾರ ಮತ್ತು ಆಗಿರುವ ನಷ್ಟವನ್ನು ತುಂಬುತ್ತಾರೆ. ಆದರೆ "ಪ್ರಚಾರ ಸಿಗದ ದೌರ್ಜನ್ಯ ಘಟನೆಗಳಿಗೆ ಅಸಡ್ಡೆ, ನಿರಾಸಕ್ತಿಯನ್ನು ತೋರುತ್ತಾರೆ.:
  - i) ತನಿಖೆ ಮಾಡುವುದಿಲ್ಲ, ಹಾಗಾಗಿ ಪರಿಹಾರ, ಪುನರ್ವಸತಿ ಮತ್ತು ಆಗಿರುವ ನಷ್ಟ ಸಿಗುವುದಿಲ್ಲ, ಹೀಗೆ ಕರ್ತವ್ಯ ವಿಮುಖರಾಗುತ್ತಾರೆ.
  - ii) ಆಗಿರುವ ನಷ್ಟ ಕೊಡುತ್ತೇವೆಂದು ಸುಳ್ಳು ಭರವಸೆ ನೀಡಿ ನಷ್ಟ ತುಂಬಿಕೊಡಲು ತಡ ಮಾಡುತ್ತಾರೆ;
  - iii) ದೌರ್ಜನ್ಯಕ್ಕೊಳಗಾದವರಿಗೆ ಮತ್ತು ಸಾಕ್ಷಿಗಳಿಗೆ ತನಿಖೆ, ಕೋರ್ಟ್ ವಿಚಾರಣೆಗೆ ಪ್ರಯಾಣ, ನಿರ್ವಹಣೆ, ವೈಧಕೀಯ ಮತ್ತು ದಿನಭತ್ಯೆ ಕೊಡುವುದಿಲ್ಲ.
  - iv) ದೌರ್ಜನ್ಯಕ್ಕೊಳಗಾದವರಿಗೆ ಮೀಸಲಿಟ್ಟ ಹಣ ಅಧಿಕಾರಿಗಳು ಮತ್ತು ಮಧ್ಯಸ್ಥಿಕೆ ಮಾಡುವವರು ದುರ್ಬಳಕೆ ಮಾಡುತ್ತಾರೆ.
  - v) ದೌರ್ಜನ್ಯ ತಡೆ ಕಾಯ್ದೆಯಲ್ಲಿ ಕೇಸು ದಾಖಲಿಸಬಾರದೆಂದು ರಾಜ್ಯ ಸರ್ಕಾರ ನಿರ್ಧಾರ ಮಾಡುತ್ತದೆ. *(ಮಾನವ ಹಕ್ಕುಗಳ ರಾಷ್ಟ್ರೀಯ ಆಯೋಗ, ದೌರ್ಜನ್ಯ ತಡೆ ವರದಿ, ನವ ದೆಹಲಿ, 2004, ಪುಟ, ಪ್ಯಾರಾ 50,119)*
- ***ದೌರ್ಜನ್ಯಕ್ಕೊಳಗಾದವರಿಗೆ ಪರಿಹಾರ ನೀಡಲು ಕಾಯ್ದೆ ತಿಳಿಸುತ್ತದೆ, ಕಾಯ್ದೆ ಜಾರಿಯಾದ ಹತ್ತು ವರ್ಷ ನಿರ್ಲಕ್ಷಿಸಲಾಗಿದೆ:*** ಕೆಲವು ರಾಜ್ಯಗಳಲ್ಲಿ ದೌರ್ಜನ್ಯಕ್ಕೊಳಗಾದವರಿಗೆ ಪುನರ್ವಸತಿ ಇಂದಿಗೂ ನೀಡಿಲ್ಲ. ಇವರು ಮಾಡಿರುವ ಖರ್ಚುಗಳನ್ನು ಪೂರ್ತಿಯಾಗಿ ನೀಡಬೇಕು ಎನ್ನುವ ಕಾಯ್ದೆಗೆ ಕೇಂದ್ರ ಸರ್ಕಾರ ನೆರವು ನೀಡುತ್ತದೆ. ಆದ್ದರಿಂದ ಕಾಯ್ದೆಯ ಅನುಷ್ಠಾನಕ್ಕೆ ರಾಜ್ಯಗಳ/ಕೇಂದ್ರಾಡಳಿತ ಪ್ರದೇಶಗಳ ಮನವೊಲಿಸುವ ಅಗತ್ಯವಿದೆ... ಉದಾಹರಣೆಗೆ: **ನಿಯಮದಂತೆ ಒರಿಸ್ಸಾ ಸರ್ಕಾರ ಆರ್ಥಿಕ ಪರಿಹಾರ ನೀಡುವುದೇ ಇಲ್ಲ"** *(ಪರಿಶಿಷ್ಟ ಜಾತಿ ಮತ್ತು ಪಂಗಡಗಳ ರಾಷ್ಟ್ರೀಯ ಆಯೋಗ, ಆರನೇ ವರದಿ 1999-2000 ಮತ್ತು 2000-2001, ನವದೆಹಲಿ, ಪ್ಯಾರಾ 9.5.3, 9.9.8)*
- ***ಎರಡನೇ ದಶಕದಲ್ಲಿ ಕಾಯ್ದೆಯ ಪರಿಹಾರ-ತಿರಸ್ಕಾರ:*** ದೌರ್ಜನ್ಯಕ್ಕೆ ಒಳಗಾದ ಪರಿಶಿಷ್ಟರಿಗೆ ಸರ್ಕಾರಗಳು ಆರ್ಥಿಕ ಪರಿಹಾರ ನೀಡದೆ ಇರುವುದು ಅವರ ನೈತಿಕ ಬಲ ಕುಗ್ಗಿಸಿದೆ. "ದೌರ್ಜನ್ಯಕ್ಕೊಳಗಾದವರಿಗೆ ಕ್ಷಣವೂ ತಡ ಮಾಡದೆ ಕಾಯ್ದೆಯಂತೆ ಪರಿಹಾರ ನೀಡಿ, ದೇಶದ ಕಾಯ್ದೆಗಳ ಮೇಲೆ ಜನರಿಗೆ ಭರವಸೆ ಮೂಡಿಸಬೇಕು". *(ಪರಿಶಿಷ್ಟ ಜಾತಿಯ ರಾಷ್ಟ್ರೀಯ ಆಯೋಗ, ಮೊದಲನೇ ವರದಿ, 2004-05, ನವದೆಹಲಿ, 2006, ಪುಟ 2)*
- ***ಆಂಧ್ರಪ್ರದೇಶ-ಅನೇಕ ಪ್ರಕರಣಗಳಿಗೆ ಪರಿಹಾರವಿಲ್ಲ:*** ದೌರ್ಜನ್ಯ ತಡೆ ಕಾಯ್ದೆಯ 101 ಪ್ರಕರಣ ಅಧ್ಯಯನ ಮಾಡಲಾಯಿತು. ಇವುಗಳಲ್ಲಿ 27.4% ಪ್ರಕರಣದಲ್ಲಿ ಜಿಲ್ಲಾಡಳಿತ ಪೂರ್ಣ ಪರಿಹಾರ ಮತ್ತು ಪುನರ್ವಸತಿ ನೀಡಿದೆ. 49.5% ಪ್ರಕರಣದಲ್ಲಿ ಜಿಲ್ಲಾಡಳಿತ ಯಾವ ಪರಿಹಾರವನ್ನೂ ನೀಡಿಲ್ಲ. ಪೋಲೀಸರು ಎಫ್.ಐ.ಆರ್ ದಾಖಲಿಸದಿರುವುದರಿಂದ ಅಥವಾ ದೌರ್ಜನ್ಯಕ್ಕೊಳಗಾದವರಿಗೆ ಅಗತ್ಯವಿದ್ದಾಗ ಪರಿಹಾರ ಮತ್ತು ನಷ್ಟ ನೀಡುವಲ್ಲಿ ಆಡಳಿತ ತನ್ನ ಕರ್ತವ್ಯ ನಿರ್ಲಕ್ಷಿಸಿರುವುದು ಈ ಸನ್ನಿವೇಶಕ್ಕೆ ಕಾರಣ. ಮುಂದೆ ಹೆಚ್ಚಿನ ಪ್ರಕರಣಗಳಿಗೆ ಪರಿಹಾರ ನೀಡುವಲ್ಲಿ ಆಡಳಿತ ಕಾಯ್ದೆಯನ್ನು ಪರಿಪಾಲಿಸಿರುವ ಕುರಿತು ಮಾಹಿತಿ ನೀಡಲು ನಿರಾಕರಿಸಿತು. *(ಸಾಕ್ಷಿ, ಮಾನವಹಕ್ಕುಗಳ ಕಾವಲುಪಡೆ-ಆಂಧ್ರ ಪ್ರದೇಶ, ದಲಿತ ಮಾನವ ಹಕ್ಕುಗಳ ಮೇಲ್ವಿಚಾರಣೆ 2000-2003, ಸಿಕಂದರಾಬಾದ್, 2003, ಪು. ಪ್ಯಾರಾ 78.9)*
- ***ಗುಜರಾತ್-ದೌರ್ಜನ್ಯ ಪ್ರಕರಣಗಳಲ್ಲಿ ಪರಿಶಿಷ್ಟ ಜಾತಿಯವರಿಗೆ ಕಡಿಮೆ ಪರಿಹಾರ:*** 2006 ಸಾಲಿನ ಹಣಕಾಸು ವರ್ಷದಲ್ಲಿ 1096 ಪರಿಶಿಷ್ಟ ಜಾತಿಯವರಿಗೆ 85.52 ಲಕ್ಷ ರೂಪಾಯಿ ಪರಿಹಾರ ಸಿಕ್ಕಿದೆ. ಅಂದರೆ ಪ್ರತಿಯೊಬ್ಬರಿಗೆ, 7,803 ರೂಪಾಯಿಗಳು. *(ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಸಚಿವಾಲಯ ವರದಿ. ದೌರ್ಜನ್ಯ ತಡೆ ಕಾಯ್ದೆ ಸೆಕ್ಷನ್ 21(4) 2006, ನವದೆಹಲಿ, 2006, ಪುಟ 28).*

### ತಮಿಳುನಾಡು- ಪರಿಹಾರ ನಿರಾಕರಣೆಗೆ ಮಾರ್ಗಗಳು

- ***ನೀಡುವ ಪರಿಹಾರ ಬಹಳ ಕಡಿಮೆ ಅಥವಾ ಪರಿಹಾರ ಇಲ್ಲ:*** 1992-2001 ಅವಧಿಗೆ, ದೌರ್ಜನ್ಯ ತಡೆ ಕಾಯ್ದೆಯಲ್ಲಿ 64.7% ಪ್ರಕರಣಗಳಿಗೆ ಆರ್ಥಿಕ ಪರಿಹಾರ ನೀಡಿದೆ. *(ಆದಿ ದ್ರಾವಿಡರ್ ಮತ್ತು ಬುಡಕಟ್ಟು ಜನಾಂಗಗಳ ಕಲ್ಯಾಣ ಇಲಾಖೆ, ಪರಿಶಿಷ್ಟ ಜಾತಿ/ಪಂಗಡದ ರಾಷ್ಟ್ರೀಯ ಆಯೋಗದ ಅಧ್ಯಕ್ಷರ ಟಿಪ್ಪಣಿಗಳು ಪರಿಶೀಲನೆಗಾಗಿ, ಚೆನ್ನೈ, 2002, ಪುಟ 180)*
- ***ಲಂಚ ನೀಡಿದರೆ ಪರಿಹಾರ, ಇಲ್ಲದಿದ್ದರೆ ಇಲ್ಲ:*** ದೌರ್ಜನ್ಯ ತಡೆ ಕಾಯ್ದೆಯ 386 ಪ್ರಕರಣಗಳನ್ನು ಪರಿಶೀಲಿಸಲಾಗಿ, 256 ಪ್ರಕರಣಗಳಿಗೆ ಅಂದರೆ ಶೇ.71.9%ರಷ್ಟು ದೌರ್ಜನ್ಯಕ್ಕೊಳಗಾದವರಿಗೆ ಮತ್ತು ಅವಲಂಬಿತರಿಗೆ ಪರಿಹಾರ ಸಿಕ್ಕಿತು. ಇದರಲ್ಲಿ, 22 ಕೊಲೆ ಪ್ರಕರಣವೂ ಇದ್ದು ಮರಣೋತ್ತರ ಪರೀಕ್ಷೆ ನಂತರವೂ ಪರಿಹಾರ ಸಿಗಲಿಲ್ಲ. ಹಾಗೆಯೇ 23 ಅತ್ಯಾಚಾರ ಪ್ರಕರಣಗಳಲ್ಲಿ ವೈದ್ಯಕೀಯ ಪರೀಕ್ಷೆ/ಎಫ್.ಐ.ಆರ್ ನಂತರವೂ ಪರಿಹಾರ ನೀಡಿರಲಿಲ್ಲ. ಕಂದಾಯ ಇಲಾಖೆ, ಕಿರಿಯ ಅಧಿಕಾರಿಗಳು ಪರಿಹಾರ ಬಿಡುಗಡೆಗೊಳಿಸಲು ಲಂಚ ಕೇಳಿದ್ದನ್ನು ಇಲ್ಲಿ ಮುಖ್ಯವಾಗಿ ಗಮನಿಸಬೇಕು.
- ***ಕಡ್ಡಾಯವಾಗಿ ನೀಡುವ ಪರಿಹಾರವೂ ತಡ:*** ಎಫ್.ಐ.ಆರ್ ದಾಖಲಾದಾಗ ಅಥವಾ ಚಾರ್ಜ್ ಶೀಟ್ ಸಲ್ಲಿಸಿದ ತಕ್ಷಣ ಮೊದಲ ಕಂತಿನ ಪರಿಹಾರ ಕಡ್ಡಾಯವಾಗಿ ನೀಡಬೇಕು. ಆದರೆ, 144 ಪ್ರಕರಣಗಳಲ್ಲಿ, ಅಂದರೆ ಶೇ.373%ರಷ್ಟು ಪರಿಹಾರ ಘಟನೆ ಜರುಗಿದ 6 ತಿಂಗಳು-4 ವರ್ಷ ಅವಧಿಯಲ್ಲಿ ಹಂಚಲಾಗಿದೆ.
- ***ಪುನರ್ವಸತಿ ಬಹುತೇಕ ಕಣ್ಮರೆ:*** 6 ದೌರ್ಜನ್ಯ ಪ್ರಕರಣಗಳಿಗೆ ಕಾಂಕ್ರೀಟ್ ಮನೆಗಳನ್ನು ನಿರ್ಮಿಸಿಕೊಡಲಾಗಿದೆ ಮತ್ತು ಇಬ್ಬರಿಗೆ ಮನೆಯ ಪಟ್ಟಾ ನೀಡಲಾಗಿದೆ. ಜಾತಿಯ ಘರ್ಷಣೆ ಆದಾಗ, ದೌರ್ಜನ್ಯಕ್ಕೊಳಗಾದವರು ಆಗಿರುವ ಹಾನಿಗೆ ಸಣ್ಣ ಮೊತ್ತದ ಪರಿಹಾರ ಪಡೆದಿದ್ದಾರೆ.

*(ಎಂ.ಎ. ಬ್ರಿಟ್ಟೋ, ದೌರ್ಜನ್ಯ ತಡೆ ಕಾಯ್ದೆಯ ಅನುಷ್ಠಾನ-1989 (ತಮಿಳ್), ಮಧುರೈ: ಡಾಕ್ಟರ್ ಅಂಬೇಡ್ಕರ್ ಸಾಂಸ್ಕೃತಿಕ ಅಕಾಡೆಮಿ, 2007 ಪುಟ 221-6)*

⇒ **ಅಧಿಕಾರಿಗಳು ಪರಿಹಾರ ಮತ್ತು ಭತ್ಯೆಗಳನ್ನು ನೀಡುವಲ್ಲಿ ಕರ್ತವ್ಯಲೋಪ ಎಸಗಿದ್ದಾರೆ. ಆದ್ದರಿಂದ ದೌರ್ಜನ್ಯಕ್ಕೊಳಗಾದವರು ಮತ್ತು ಸಾಕ್ಷಿಗಳು ನ್ಯಾಯಯುತ ಹಕ್ಕುಗಳನ್ನು ಪಡೆದುಕೊಳ್ಳಲು ಕಾಯ್ದೆಯ ಬಲವರ್ಧನೆ ಆಗಬೇಕು, ಅಲ್ಲವೇ? ಇದಲ್ಲದೆ, ಎಲ್ಲಾ ಪ್ರಕರಣಗಳಲ್ಲಿ ದೌರ್ಜನ್ಯಕ್ಕೊಳಗಾದವರಿಗೆ ಸೂಕ್ತ ಪರಿಹಾರ ದೊರೆಯಲು, ಕಾಯ್ದೆಯ ಅನುಷ್ಠಾನಕ್ಕೆ ಮೇಲ್ವಿಚಾರಣೆ ಮಾಡಬೇಕು, ಅಲ್ಲವೇ?**

**ಪೂರ್ಣ ಪರಿಹಾರ ಒಮ್ಮೆಗೆ ನೀಡಲು ಶಿಫಾರಸ್ಸು:** "ಕೋರ್ಟುಗಳಲ್ಲಿ ವಿಚಾರಣೆ ಬಾಕಿ, ಕಡಿಮೆ ಪ್ರಮಾಣದ ಶಿಕ್ಷೆ ಹಾಗೂ ತೀರ್ಪು ನೀಡಲು ಆಗುವ ಸಮಯ ಪರಿಗಣಿಸಿದರೆ, ದೌರ್ಜನ್ಯಕ್ಕೊಳಗಾದವರು ಪರಿಹಾರ ಎರಡು ಕಂತುಗಳಲ್ಲಿ(ಮೊದಲ ಮತ್ತು ಅಂತಿಮ)ಪಡೆಯಲು ಕಾಯುವುದು ಸರಿಯಲ್ಲ. ಆದ್ದರಿಂದ ಕೋರ್ಟಿಗೆ ಆರೋಪ ಪಟ್ಟಿಯನ್ನು ಸಲ್ಲಿಸಿದಾಗ, ಪೂರ್ಣ ಪರಿಹಾರ ನೀಡಲು ದೌರ್ಜನ್ಯ ತಡೆ ನಿಯಮಗಳಿಗೆ ಅಗತ್ಯದ ತಿದ್ದುಪಡಿ ಮಾಡಲು ಸಚಿವಾಲಯಕ್ಕೆ ಈ ಸಮಿತಿ ಶಿಫಾರಸ್ಸು ಮಾಡುತ್ತದೆ *(ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಸಂಸತ್ತು ಕಲ್ಯಾಣ ಸಮಿತಿ, 14ನೇ ವರದಿ 2006–07, ನವದೆಹಲಿ, ಪುಟ 40)*

- **ದೌರ್ಜನ್ಯಕ್ಕೊಳಗಾದವರಿಗೆ ಆಗಿರುವ ನಷ್ಟಕ್ಕೆ ಪರಿಹಾರ ಕಡ್ಡಾಯ ನೀಡಲು ಆಗ್ರಹ:** "ದೌರ್ಜನ್ಯ ತಡೆ ಕಾಯ್ದೆಯಲ್ಲಿ ಪ್ರಕರಣ ದಾಖಲಾಗಿರುತ್ತದೆ, ನಿಯಮ ಪರಿಹಾರ ನೀಡಬೇಕೆಂದು ತಿಳಿಸುತ್ತದೆ. ಆದರೂ ಕೆಲವು ರಾಜ್ಯಗಳು ಪರಿಹಾರ ನೀಡುವುದಿಲ್ಲ. ಆದ್ದರಿಂದ ದೇಶದೆಲ್ಲೆಡೆ, ಪರಿಶಿಷ್ಟರಿಗೆ ಪರಿಹಾರ ನೀಡುವ ಆಚರಣೆ ಬರಬೇಕು." *(ಪರಿಶಿಷ್ಟ ಜಾತಿ ರಾಷ್ಟ್ರೀಯ ಆಯೋಗ, ಮೊದಲನೆ ವರದಿ 2004–05, ನವದೆಹಲಿ 2006, ಪ್ಯಾರಾ 6.33)*
- ದೌರ್ಜನ್ಯ ಪ್ರಕರಣ ಯಾವ ಕಾಯ್ದೆಯಲ್ಲಿ ದಾಖಲಾದರೂ ಪರಿಹಾರ ನೀಡಬೇಕೆಂದು ಮಾನವ ಹಕ್ಕುಗಳ ಆಯೋಗ ಶಿಫಾರಸ್ಸು ಮಾಡುತ್ತದೆ: "ದೌರ್ಜನ್ಯಕ್ಕೊಳಗಾದವರಿಗೆ ಅಥವಾ ಅವರ ಮಕ್ಕಳಿಗೆ ನೀಡಬೇಕಿರುವ ಪರಿಹಾರ ಎಫ್.ಐ.ಆರ್ ದಾಖಲಾದ ತಕ್ಷಣ ನೀಡಬೇಕು. ಪ್ರಕರಣ ದೌರ್ಜನ್ಯ ತಡೆ ಕಾಯ್ದೆಯಲ್ಲಿ ಅಥವಾ ಬೇರೆ ಕಾಯ್ದೆಯಲ್ಲಿ ದಾಖಲಾಗಲಿ." *(ಮಾನವ ಹಕ್ಕುಗಳ ಆಯೋಗ ಪರಿಶಿಷ್ಟ ಜಾತಿಯ ವಿರುದ್ಧ ದೌರ್ಜನ್ಯ ತಡೆ ವರದಿ, ನವದೆಹಲಿ, 2002, ಪುಟ 293)*

**"ದೌರ್ಜನ್ಯಕ್ಕೆ ಬಲಿಯಾದ ಪರಿಶಿಷ್ಟರಿಗೆ ಪರಿಹಾರ ನೀಡುವುದು ವಿವಾದಾತ್ಮಕ ವಿಚಾರವಲ್ಲ. ಇಂತಹ ವಿಚಾರದಲ್ಲಿಯೂ ಆಡಳಿತ ಮತ್ತು ರಾಜಕೀಯ ವಲಯದಲ್ಲಿ ಸೂಕ್ಷ್ಮತೆಯ ಕೊರತೆಯಿದೆ. ಇದರಿಂದಾಗಿ ದೌರ್ಜನ್ಯಕ್ಕೊಳಗಾದವರಿಗೆ ಕಾನೂನುಗಳು ನ್ಯಾಯ ಅಥವಾ ಪರಿಹಾರ ಕೊಡಿಸಲು ಸಾಧ್ಯವಾಗಿಲ್ಲ. ಪರಿಶಿಷ್ಟರ ಮೇಲಾದ ದೌರ್ಜನ್ಯ ಪ್ರಕರಣಗಳಲ್ಲಿ, ದೌರ್ಜನ್ಯ ತಡೆ ಕಾಯ್ದೆಯಲ್ಲಿ ಕೇಸು ದಾಖಲಾಗಲಿ ಅಥವಾ ಆಗದಿರಲಿ, ನಿಯಮದಂತೆ ಪರಿಹಾರ ದೊರೆಯುವಂತೆ ಮಾಡುವಲ್ಲಿ ಮಾನವ ಹಕ್ಕುಗಳ ಆಯೋಗ ಮತ್ತು ಪರಿಶಿಷ್ಟ ಜಾತಿ ಮತ್ತು ಪಂಗಡಗಳ ರಾಷ್ಟ್ರೀಯ ಆಯೋಗ ಒಮ್ಮತಕ್ಕೆ ಬರುವುದು ಬಹು ಮುಖ್ಯ.**

*(ಮಾನವ ಹಕ್ಕುಗಳ ಆಯೋಗ, ಪರಿಶಿಷ್ಟರ ವಿರುದ್ಧ ದೌರ್ಜನ್ಯ ತಡೆ ವರದಿ, ನವದೆಹಲಿ, 2002, ಪುಟ 51)*

## 2. ಕಾನೂನು ನೆರವು ಮತ್ತು ರಕ್ಷಣೆಯ ಹಕ್ಕು

**ಕೆಲವರಿಗೆ ಮಾತ್ರ ಜನರಿಗೆ ಕಾನೂನು ನೆರವು:**

- **ಹರಿಯಾಣ:** 2006ಸಾಲಿಗೆ ಪರಿಶಿಷ್ಟರ ಮೇಲೆ 283 ದೌರ್ಜನ್ಯ ಆಗಿರುವುದು ದಾಖಲಾಗಿದೆ, 27ಜನರಿಗೆ 13,500 ರೂಪಾಯಿಗಳ ಕಾನೂನು ನೆರವು ನೀಡಲಾಗಿದೆ.
- **ರಾಜಸ್ಥಾನ:** 2006ಸಾಲಿಗೆ 4,877 ದೌರ್ಜನ್ಯ ಪ್ರಕರಣ ದಾಖಲಾಗಿದೆ. ಅದರಲ್ಲಿ ಅರ್ಧ ಜನರು ಮಾತ್ರ ಕಾನೂನು ನೆರವು ಪಡೆದಿದ್ದಾರೆ. (1166 ಪ.ಜಾತಿ ಮತ್ತು 1375 ಪ.ಪಂಗಳವರು). *(ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಸಚಿವಾಲಯ. ದೌರ್ಜನ್ಯ ತಡೆ ಕಾಯ್ದೆಯ ಕಲಂ 21ರ ಅಡಿಯಲ್ಲಿ ವರದಿ, ನವದೆಹಲಿ, 2006, ಪುಟ ಪ್ಯಾರಾ 29.51%)*

**ಅಧಿಕಾರಿಗಳು ದೌರ್ಜನ್ಯಕ್ಕೊಳಗಾದವರನ್ನು ಕೋರ್ಟು ಕಛೇರಿಗಳಲ್ಲಿ ವಕೀಲರ ಸಹಾಯವೇ ಇಲ್ಲದಂತೆ ವಿಚಾರಣೆಗೆ ಬಿಟ್ಟು ಬಿಡುತ್ತಾರೆ.**

- ಇದರಿಂದಾಗಿ "ಪರಿಶಿಷ್ಟರಿಗೆ ಕಾನೂನು ನೆರವು ಕಡಿಮೆ ಪ್ರಮಾಣದಲ್ಲಿ ಸಿಗುತ್ತಿದೆ, ಈ ಅಸಮಾನತೆಯ ಸನ್ನಿವೇಶದಲ್ಲಿ ನ್ಯಾಯ ದೊರಕುವುದು ಅಸಾಧ್ಯ, ಅದಕ್ಕಾಗಿ ಇದಕ್ಕೆ ಕಾರಣಗಳನ್ನು ಗಂಭೀರವಾಗಿ ಪರಿಶೀಲನೆ ಮಾಡಲು ಮಾನವ ಹಕ್ಕುಗಳ ಆಯೋಗ ಕರೆ ನೀಡಿದೆ.
- ***ಜನರಿಗೆ ಕ್ರಿಮಿನಲ್ ನ್ಯಾಯಕ್ಕಾಗಿ ಸಮಿತಿ:*** 1973ರಲ್ಲಿಯೇ ಪರಿಶಿಷ್ಟ ಜಾತಿ ಮತ್ತು ಪಂಗಡಗಳ ದೂರುದಾರರಿಗೆ ಮತ್ತು ಆರೋಪಿಗೆ ಕ್ರಿಮಿನಲ್ ಕಾನೂನು ನೆರವು ನೀಡಬೇಕೆಂದು ಶಿಫಾರಸ್ಸು ಮಾಡಿದೆ. *(ಮಾನವ ಹಕ್ಕುಗಳ ಆಯೋಗ, ಪರಿಶಿಷ್ಟ ಜಾತಿಯ ವಿರುದ್ಧ ದೌರ್ಜನ್ಯ ತಡೆಗೆ ವರದಿ, ನವ ದೆಹಲಿ, 2002, ಪುಟ, ಪ್ಯಾರಾ 91.2)*

**ದೌರ್ಜನ್ಯಕ್ಕೆ ಒಳಗಾದ ಪರಿಶಿಷ್ಟರಿಗೆ ಕಾನೂನು ನೆರವು ನೀಡುವುದರಿಂದ, ಈಗಿನ ಪ್ರಾಸಿಕ್ಯೂಷನ್ ವ್ಯವಸ್ಥೆ ಕೋರ್ಟುಗಳಲ್ಲಿ ಕೇಸುಗಳ ವಿವರಣೆ ಮತ್ತು ಸಾಕ್ಷಿಯನ್ನು ನೀಡುವಲ್ಲಿ ಹೆಚ್ಚು ಪರಿಣಾಮಕಾರಿಯಾಗಿ ನ್ಯಾಯ ದೊರಕಿಸಿಕೊಡುತ್ತದೆ. ಇದರಿಂದ ಪ್ರಾಸಿಕ್ಯೂಷನ್ ವ್ಯವಸ್ಥೆಯ ಉತ್ತರದಾಯಿತ್ವ ಹೆಚ್ಚುತ್ತದೆ.**

*(ಮಾನವ ಹಕ್ಕುಗಳ ಆಯೋಗ, ದೌರ್ಜನ್ಯ ತಡೆ ವರದಿ, ನವದೆಹಲಿ, 2002 ಪುಟ 91)*

**ರಕ್ಷಣೆಯ ಅಗತ್ಯ!** ನಾಲ್ಕು ರಾಜ್ಯಗಳಲ್ಲಿ 500 ದಲಿತ ಮಹಿಳೆಯರ ಅಧ್ಯಯನ ಮಾಡಿದಾಗ ಈ ಸಂಗತಿಗಳು ಬೆಳಕಿಗೆ ಬಂದವು:

- ಶೇ. 26.5% ಹಿಂಸೆ ಪ್ರಕರಣಗಳಲ್ಲಿ ಮಹಿಳೆಯರು ಹಿಂಸೆಯ ವಿರುದ್ಧ ಹೋರಾಡಲು ಕಾನೂನು ಅಥವಾ ಸಮುದಾಯದ ನೆರವು ಕೋರಿದ್ದರು. ಆದರೆ, ದುಷ್ಕರ್ಮಿಗಳು ಮತ್ತವರ ಬೆಂಬಲಿಗರು ಅಥವಾ ಸಮುದಾಯದವರು ಅದನ್ನು ತಡೆದರು. ದೌರ್ಜನ್ಯಕ್ಕೆ ಒಳಗಾದವರನ್ನು ಸುಮ್ಮನಿರಿಸಲು ಬಯ್ಗುಳ ಮತ್ತು ದೈಹಿಕ ನಿಂದನೆ, ಸುಳ್ಳು ಆರೋಪ, ಬಲವಂತದ ರಾಜಿ ತಂತ್ರಗಳನ್ನು ಬಳಸಿದರು.
- ಶೇ. 17.4% ಹಿಂಸೆ ಪ್ರಕರಣಗಳಲ್ಲಿ ಪೋಲೀಸರು ಬೆದರಿಕೆ ಅಥವಾ ಒತ್ತಡ ಅಥವಾ ರಾಜಿ, ಎಫ್.ಐ.ಆರ್ ದಾಖಲಿಸದೆ ಅಥವಾ ತನಿಖೆ ಮಾಡದಿರುವ ತಂತ್ರ ಬಳಸಿ ನ್ಯಾಯ ದೊರೆಯುವುದನ್ನು ತಡೆದರು.
- ಶೇ. 40.2% ಹಿಂಸೆ ಪ್ರಕರಣಗಳಲ್ಲಿ ಕೇಸು ದಾಖಲಿಸಿದರೆ, ಮೇಲೆ ಹೇಳಿರುವ ರೀತಿ ದುಷ್ಕರ್ಮಿಗಳು ಮತ್ತು ಪೋಲೀಸರು ಮಾಡಬಹುದೆಂಬ ಭಯದಿಂದ ಮಹಿಳೆಯರು ಕೇಸು ದಾಖಲಿಸುವ ಗೋಜಿಗೇ ಹೋಗಲಿಲ್ಲ. *(ಅಲಾಸಿಯಸ್ ಇರುದಯಂ ಮತ್ತಿತರರು, ದಲಿತ ಮಹಿಳೆಯರು ಬಾಯಿ ಬಿಟ್ಟರು(ದಲಿತ್ ವುಮೆನ್ ಸ್ಪೀಕ್ ಔಟ್): ಭಾರತದಲ್ಲಿ ದಲಿತ ಮಹಿಳೆಯರ ವಿರುದ್ಧ ಹಿಂಸೆ, ಚೆನ್ನೈ, ಐಡಿಇಎಎಸ್, ಎನ್‌ಸಿಡಿಹೆಚ್‌ಆರ್ ಮತ್ತು ಎನ್‌ಎಫ್‌ಡಿಡಬ್ಲ್ಯು, 2006)*

⇒ ಈ ಸನ್ನಿವೇಶದಲ್ಲಿ ದೌರ್ಜನ್ಯಕ್ಕೆ ಒಳಗಾದವರಿಗೆ ಮತ್ತು ಸಾಕ್ಷಿಗಳಿಗೆ ರಕ್ಷಣೆ ನಿಡುವುದರ ಜೊತೆ ದೌರ್ಜನ್ಯ ಪ್ರಕರಣಗಳಲ್ಲಿ ಎಫ್.ಐ.ಆರ್ ದಾಖಲಿಸುವುದನ್ನು ಕಡ್ಡಾಯಗೊಳಿಸುವುದು ಅತ್ಯುತ್ತಮ ಮತ್ತು ನ್ಯಾಯಯುತ ಪರಿಹಾರವಲ್ಲವೇ?

*"ಸಾಕ್ಷಿಗಳಿಗೆ ಆರೋಪಿಗಳಿಂದ ಖಂಡಿತವಾಗಿಯೂ ರಕ್ಷಣೆ ದೊರೆಯುತ್ತದೆ ಎನ್ನುವ ವಿಶ್ವಾಸವನ್ನು ಅಗತ್ಯವಾಗಿ ಅವರಲ್ಲಿ ಮೂಡಿಸಬೇಕು"*

*ಭಾರತ ಕಾನೂನು ಆಯೋಗ, 154ನೇ ವರದಿ, ನವದೆಹಲಿ, 1996, ಪುಟ 9*

### 3. ದೌರ್ಜನ್ಯಕ್ಕೆ ಒಳಗಾದವರಿಗೆ ಮತ್ತು ಸಾಕ್ಷಿಗಳ ಹಕ್ಕುಗಳಿಗೆ ದೌರ್ಜನ್ಯ ತಡೆ ಕಾಯ್ದೆಯಲ್ಲಿ ಹೊಸತೊಂದು ಅಧ್ಯಾಯದ ಕಲ್ಪನೆ

ದೌರ್ಜನ್ಯ ತಡೆ ಕಾಯ್ದೆಯಡಿ ಕೆಳಕಂಡ ಹಕ್ಕುಗಳನ್ನು ತಂದರೆ, ದೌರ್ಜನ್ಯಕ್ಕೆ ಒಳಗಾದವರು ಮತ್ತು ಸಾಕ್ಷಿಗಳಿಗೆ ಸಮಗ್ರ ರಕ್ಷಣೆ ಹಾಗೂ ನ್ಯಾಯ ಒದಗಿಸಬಹುದು:

- ದೌರ್ಜನ್ಯಕ್ಕೆ ಒಳಗಾದವರು ದೂರು ನೀಡಿದಕ್ಷಣ ಎಫ್.ಐ.ಆರ್ ದಾಖಲಿಸಿ ವರದಿಯ ಪ್ರತಿ ದೂರುದಾರರಿಗೆ ದೊರೆಯುವ ಹಕ್ಕು.
- ಡಿ.ವೈ.ಎಸ್.ಪಿ ಅಥವಾ ಮೇಲಾಧಿಕಾರಿ ತನಿಖೆ ನಡೆಸಿ 30 ದಿನಗಳಲ್ಲಿ ಪ್ರಾಮಾಣಿಕವಾಗಿ ಆರೋಪ ಪಟ್ಟಿ ಸಲ್ಲಿಸುವ ಹಕ್ಕು.
- ದೌರ್ಜನ್ಯಕ್ಕೆ ಒಳಗಾದವರಿಗೆ ಹಾಗೂ ಸಾಕ್ಷಿಗಳಿಗೆ ಘಟನೆಯಾದ ದಿನದಿಂದ, ವಿಚಾರಣೆ ಮುಗಿಯುವವರೆಗೆ ರಕ್ಷಣೆ, ಲೈಂಗಿಕ ಹಿಂಸೆಯಲ್ಲಿ ಬದುಕುಳಿದವರಿಗೆ ಖಾಸಗಿತನ, ಸುರಕ್ಷತೆಗೆ ಆಶ್ರಯ ಮನೆಗಳು, ವೀಡಿಯೋ ಸಾಕ್ಷಿ, ಇತ್ಯಾದಿ ಹಕ್ಕುಗಳು.
- ವೈದ್ಯಕೀಯ ಪರೀಕ್ಷೆಗೆ ಬೇಡಿಕೆ ಸಲ್ಲಿಸಿ ಮರಣೋತ್ತರ ಪರೀಕ್ಷೆಗಳ ವರದಿಯ ಪ್ರತಿ ಇತ್ಯಾದಿಯನ್ನು ಪಡೆಯುವ ಹಕ್ಕು
- ವಿಚಾರಣೆ ದಿನಾಂಕ, ಪ್ರಯಾಣ ಮತ್ತು ನಿರ್ವಹಣೆ ಭತ್ಯೆಯ ಮಾಹಿತಿ ಪಡೆಯುವ ಹಕ್ಕು
- ಸಮಗ್ರ ಪರಿಹಾರ, ನಷ್ಟ ಮತ್ತು ಹಾನಿಗೆ ಪರಿಹಾರ, ಪುನರ್ವಸತಿ ಮತ್ತು ಪರಿಶಿಷ್ಟರಲ್ಲದರ ಮೇಲಿನ ಆರ್ಥಿಕ ಅವಲಂಬನೆಯಿಂದ ಸ್ವತಂತ್ರಗೊಳ್ಳುವ ಹಕ್ಕು.
- ದೌರ್ಜನ್ಯ ಪ್ರಕರಣದಲ್ಲಿ ಪೋಲೀಸರ ಜೊತೆ ಮಾಡಿದ ಮೊದಲನೆ ಸಂಪರ್ಕದಿಂದ ವಿಚಾರಣೆ ಮುಕ್ತಾಯ ಆಗುವವರೆಗೆ ಮಾಹಿತಿಯ ಹಕ್ಕು

# 20 ವರ್ಷಗಳ ಅನುಷ್ಠಾನ ವ್ಯವಸ್ಥೆ; ಇತರೆ ಕಡ್ಡಾಯ ನಿಬಂಧನೆಗಳು

## I ಅಳತೆಗೋಲು?

- ರಾಜ್ಯವು ದೌರ್ಜನ್ಯ ಕೃತ್ಯಗಳನ್ನು ತಡೆಗಟ್ಟುವಾಗ, ಬದಲಾಗುವ ಪರಿಸ್ಥಿತಿಗೆ ತಕ್ಕಂತೆ, ತನ್ನ ಜವಾಬ್ದಾರಿ ಪೂರೈಸಲು ಆಚರಣೆಯಲ್ಲಿರುವ ಕಾಯ್ದೆ ಮತ್ತು ಕಾರ್ಯವೈಖರಿಯನ್ನು ಪರೀಕ್ಷಿಸಬೇಕು. ಸಮಯಕ್ಕೆ ಸರಿಯಾಗಿ ನೀತಿಗಳನ್ನು ರೂಪಿಸಿ ದೌರ್ಜನ್ಯಕ್ಕೆ ಒಳಗಾದವರಿಗೆ ಹಕ್ಕು ಮತ್ತು ತಕ್ಷಣದ ಪರಿಹಾರ ದೊರೆಯುವಂತೆ ಮಾಡಬೇಕು. *(ಅನುಚ್ಛೇದ 21, ಬಲಿಯಾದವರಿಗೆ ನ್ಯಾಯ ದೊರಕಿಸಿಕೊಡುವ ಮೂಲ ತತ್ವಗಳ ಘೋಷಣೆ 1985)*
- ಮೇಲು ಕೀಳುಗಳೆಂದು ಹಿಂಸೆ ಭುಗಿಲೇಳುವ ಪ್ರದೇಶವನ್ನು ಗುರುತಿಸಿ ಮತ್ತೊಮ್ಮೆ ಹಿಂಸೆ ಮರುಕಳಿಸದಂತೆ ಮುನ್ನೆಚ್ಚರಿಕೆ ಕ್ರಮ ಕೈಗೊಳ್ಳಬೇಕು *(ಪ್ಯಾರಾ 31 ಸಿಇಆರ್‌ಡಿ ಸಾಮಾನ್ಯ ಶಿಫಾರಸ್ಸುಗಳು XXIX 2002)*
- ಎಲ್ಲಾ ರೀತಿಯ ಸಾಮಾಜಿಕ ಅನ್ಯಾಯ ಮತ್ತು ಶೋಷಣೆಯಿಂದ [ಪರಿಶಿಷ್ಟರನ್ನು] ರಾಜ್ಯವು ರಕ್ಷಿಸಬೇಕು *(ಅನುಚ್ಛೇದ 46, ಸಂವಿಧಾನ)*
- ಕಾಯ್ದೆಯ ಪರಿಣಾಮಕಾರಿ ಅನುಷ್ಠಾನಕ್ಕೆ ಕೆಳಗೆ ತಿಳಿಸಿರುವುದನ್ನೂ ಒಳಗೊಂಡಂತೆ ಸೂಕ್ತ ಕ್ರಮ ಕೈಗೊಳ್ಳಬೇಕು:
  - ಅ) ಪ್ರಾಸಿಕ್ಯೂಷನ್ ವ್ಯವಸ್ಥೆ ಮೇಲ್ವಿಚಾರಣೆ ಮಾಡಲು ಅಧಿಕಾರಿಗಳ ನೇಮಕಾತಿ;
  - ಆ) ಇಂತಹ ಕ್ರಮ ತಯಾರಿಸಲು ಅಥವಾ ಅನುಷ್ಠಾನ ಮಾಡಲು ಸಮಿತಿ ರಚಿಸಿ, ಅವುಗಳ ನೆರವು ಪಡೆದುಕೊಳ್ಳಬೇಕು.
  - ಇ) ಕಾಯ್ದೆ ಸರಿಯಾಗಿ ಕೆಲಸ ಮಾಡುತ್ತಿದೆಯೇ ಪರೀಕ್ಷಿಸಿ, ಉತ್ತಮ ಅನುಷ್ಠಾನಕ್ಕಾಗಿ ಸಲಹೆ ಪಡೆಯಲು ಕಾಲಕಾಲಕ್ಕೆ ಸಮೀಕ್ಷೆ;
  - ಈ) ದೌರ್ಜನ್ಯಪೀಡಿತ ಪ್ರದೇಶಗಳನ್ನು ಗುರುತಿಸಿ ಪರಿಶಿಷ್ಟರ ಸುರಕ್ಷತೆಗೆ ನಿರ್ಬಂಧನಾ ಕ್ರಮಗಳನ್ನು ಕೈಗೊಳ್ಳಬೇಕು.

*(ಸೆಕ್ಷನ್ 17 ಮತ್ತು 21 ಪರಿಶಿಷ್ಟ ಜಾತಿ/ಪಂಗಡ (ದೌರ್ಜನ್ಯ ತಡೆ) ಕಾಯ್ದೆ))*

**ಕಾಯ್ದೆಯ ಅನುಷ್ಠಾನ ಮತ್ತು ಮೇಲ್ವಿಚಾರಣೆಗೆ ವಿಶೇಷ ವ್ಯವಸ್ಥೆ:** ನಿಯಮಗಳನ್ವಯ ರಾಜ್ಯ ಸರ್ಕಾರ ಈ ಕಾರ್ಯಗಳನ್ನು ಮಾಡತಕ್ಕದ್ದು:
1) ದೌರ್ಜನ್ಯ ಪೀಡಿತ ಪ್ರದೇಶಗಳಲ್ಲಿ ಮುನ್ನೆಚ್ಚರಿಕೆ ಮತ್ತು ನಿರ್ಬಂಧನ ಕ್ರಮಗಳನ್ನು ಕೈಗೊಳ್ಳತಕ್ಕದ್ದು (ನಿಯಮ 3)
2) ಕಾಯ್ದೆಯ ಅನುಷ್ಠಾನದ ಮೇಲ್ವಿಚಾರಣೆಗೆ ಪರಿಶಿಷ್ಟ ಜಾತಿ ಮತ್ತು ಪಂಗಡಗಳವರ ರಕ್ಷಣಾ ಕೋಶ ಸ್ಥಾಪಿಸಬೇಕು (ನಿಯಮ 8)
3) ಕಾಯ್ದೆಯ ಅನುಷ್ಠಾನದ ಜವಾಬ್ದಾರಿ ಹೊತ್ತ ಎಲ್ಲಾ ಅಧಿಕಾರಿಗಳು, ಕಾರ್ಯಾಚರಣೆ ಸಂಯೋಜಿಸಿ ಪರಿಶೀಲಿಸಲು, ನೋಡಲ್ ಅಧಿಕಾರಿಯ ನಾಮನಿರ್ದೇಶನ ಮಾಡಬೇಕು (ನಿಯಮ 9)
4) ಕಾಯ್ದೆಯ ಅನುಷ್ಠಾನದ ಜವಾಬ್ದಾರಿ ಹೊತ್ತ ಅಧಿಕಾರಿಗಳು, ವಿವಿಧ ಸಮಿತಿಗಳು ಮತ್ತು ರಕ್ಷಣಾ ಕೋಶಗಳ ಜೊತೆ ಸಂಯೋಜನೆ ಮಾಡಲು ವಿಶೇಷ ಅಧಿಕಾರಿಯ ನೇಮಕ (ನಿಯಮ 10)
5) ಕಾಯ್ದೆಯನ್ನು ಅನುಷ್ಠಾನ ಮಾಡಲು, ಪರಿಹಾರ ಕಾರ್ಯಕ್ರಮಗಳ ಪಾತ್ರ ಮತ್ತು ಜವಾಬ್ದಾರಿ ತಿಳಿಸುವ ಆಕಸ್ಮಿಕ ಯೋಜನೆ ತಯಾರಿಸಲು ಅಧಿಕಾರಿಗಳು ಸ್ಥಳೀಯ ಮತ್ತು ಸರ್ಕಾರೇತರ ಸಂಸ್ಥೆಗಳ ಕೈಜೋಡಿಸಬೇಕು. ನಿಯಮ 15(1)
6) ರಾಜ್ಯ ಮತ್ತು ಜಿಲ್ಲೆಯಾದ್ಯಂತ ಕಾಯ್ದೆಯ ಅನುಷ್ಠಾನ ಪರಿಶೀಲಿಸಲು ರಾಜ್ಯ ಮತ್ತು ಜಿಲ್ಲಾಮಟ್ಟದ ಜಾಗೃತಿ ಮತ್ತು ಮೇಲ್ವಿಚಾರಣೆ ಸಮಿತಿ ರಚಿಸಬೇಕು (ನಿಯಮ 16 ಮತ್ತು 17)

## II ನಿಜಾಂಶ?

ದೇಶಾದ್ಯಂತ ಕಾಯ್ದೆಯ ಕಡ್ಡಾಯ ನಿಬಂಧನೆಗಳ ಅನುಷ್ಠಾನದ ಕೊರತೆ!
- ದೌರ್ಜನ್ಯ ತಡೆ ಕಾಯ್ದೆಯ ಪರಿಣಾಮಕಾರಿ ಅನುಷ್ಠಾನಕ್ಕಾಗಿ ಎಲ್ಲಾ ಕಡ್ಡಾಯ ನಿಯಮಗಳನ್ನು ಯಾವುದೇ ರಾಜ್ಯ ಸರ್ಕಾರ ಪೂರ್ಣವಾಗಿ ಪಾಲಿಸಿಲ್ಲ.

**ಅನುಷ್ಠಾನಗೊಳಿಸದಿರುವ ಕಡ್ಡಾಯ ನಿಯಮಗಳು**

| ಕಡ್ಡಾಯ ನಿಯಮ | ಅನುಷ್ಠಾನ ಮಾಡಿದ ರಾಜ್ಯ/ಕೇಂದ್ರಾಡಳಿತ ಪ್ರದೇಶಗಳು | ಅನುಷ್ಠಾನ ಮಾಡದ ರಾಜ್ಯ/ಕೇಂದ್ರಾಡಳಿತ ಪ್ರದೇಶಗಳು |
|---|---|---|
| ಮುಂಜಾಗ್ರತೆ ಮತ್ತು ನಿರ್ಬಂಧ ಕ್ರಮ | 12 | 22 |
| ರಕ್ಷಣಾ ಕೋಶ | 17 | 17 |
| ನೋಡಲ್ ಅಧಿಕಾರಿ | 29 | 5 |
| ವಿಶೇಷ ಅಧಿಕಾರಿ | 14 | 20 |
| ರಾಜ್ಯ ಜಾಗೃತಿ ಮತ್ತು ಮೇಲ್ವಿಚಾರಣೆ ಸಮಿತಿ | 21 | 13 |
| ಜಿಲ್ಲಾ ಜಾಗೃತಿ ಮತ್ತು ಮೇಲ್ವಿಚಾರಣೆ ಸಮಿತಿ | 21 | 13 |
| ಆಕಸ್ಮಿಕಗಳ ಯೋಜನೆ | 9 | 25 |

*ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಸಚಿವಾಲಯ, ವಾರ್ಷಿಕ ವರದಿ 2008–09, ನವದೆಹಲಿ, ಅನುಬಂಧ 4.8, ಜಮ್ಮು ಮತ್ತು ಕಾಶ್ಮೀರ ಹೊರತುಪಡಿಸಿ ಎಲ್ಲಾ ರಾಜ್ಯಗಳು)*

***ನಿಯಮಗಳನ್ನು ಪರಿಪಾಲಿಸದಿರುವ ಮಾದರಿ ರಾಜ್ಯ–ಗುಜರಾತ್***

ಪರಿಶಿಷ್ಟರನ್ನು ಸಾಮಾಜಿಕವಾಗಿ ಬಹಿಷ್ಕರಿಸಿದ 12 ಪ್ರಕರಣಗಳು:
- ನಿಯಮ 6ರನ್ವಯ ಸ್ಥಳ ಪರೀಕ್ಷೆ ಒಂದು ಪ್ರಕರಣದಲ್ಲಿಯೂ ಮಾಡಿಲ್ಲ.
- ಕೇವಲ 8 ಪ್ರಕರಣಗಳಲ್ಲಿ ನಿಯಮ 7ರನ್ವಯ ದೂರು ನೀಡಿದ 30 ದಿನಗಳ ಒಳಗಾಗಿ ಆರೋಪ ಪಟ್ಟಿ ಸಲ್ಲಿಸಲಾಗಿದೆ.
- ಯಾವ ಪ್ರಕರಣದಲ್ಲಿಯೂ ಸಾಮಾಜಿಕ ಬಹಿಷ್ಕಾರದ ಕುರಿತು ಚರ್ಚಿಸಲು ಮತ್ತು ಅಧಿಕಾರಿಗಳು ಯಾವ ಕ್ರಮ ಕೈಗೊಳ್ಳಬೇಕೆಂದು ನಿರ್ದೇಶಿಸಲು ಮತ್ತು ಚರ್ಚಿಸಲು ಜಿಲ್ಲಾಧಿಕಾರಿ ಜಾಗೃತಿ ಮತ್ತು ಮೇಲ್ವಿಚಾರಣೆ ಸಮಿತಿ ಸಭೆ ಕರೆಯಲಿಲ್ಲ
- ಯಾವುದೇ ಪ್ರಕರಣದಲ್ಲಿಯೂ ನಿಯಮ 4ರನ್ವಯ ಜಿಲ್ಲಾ ನ್ಯಾಯಧೀಶರು ದೌರ್ಜನ್ಯ ಪ್ರಕರಣಗಳ ಸ್ಥಿತಿಗತಿಯನ್ನು ಪರಿಶೀಲಿಸಲಿಲ್ಲ.

*(ನವಸರ್ಜನ್ ಟ್ರಸ್ಟ್, ಗುಜರಾತ್ ರಾಜ್ಯದಲ್ಲಿ ದಲಿತರ ಸಾಮಾಜಿಕ ಆರ್ಥಿಕ ಬಹಿಷ್ಕಾರದ ವರದಿ, ಅಹ್ಮದಾಬಾದ್, 2009, ಪುಟ. ಪ್ಯಾರಾ 35–8)*

| ರಾಜ್ಯ | ರಾಜ್ಯದಲ್ಲಿ ದೌರ್ಜನ್ಯಪೀಡಿತವೆಂದು ಗುರುತಿಸಲಾದ ಜಿಲ್ಲೆಗಳು/ ಪ್ರದೇಶಗಳು | ಜಿಲ್ಲೆಗಳಲ್ಲಿ ದೌರ್ಜನ್ಯಪೀಡಿತವೆಂದು ಗುರುತಿಸಲಾದ ಪ್ರದೇಶಗಳು | ದೌರ್ಜನ್ಯ ತಡೆ ಕಾಯ್ದೆಯನ್ವಯ ದಾಖಲಾದ ಪ್ರಕರಣಗಳು | ದೌರ್ಜನ್ಯದಲ್ಲಿ ರ್‍ಯಾಂಕ್ 1995–2007 ಅವಧಿಗೆ |
|---|---|---|---|---|
| ಉತ್ತರ ಪ್ರದೇಶ | 72 | 20 | 41,369 | I |
| ರಾಜಸ್ಥಾನ | 33 | 17 | 17,991 | II |
| ಕರ್ನಾಟಕ | 27 | 15 | 13,953 | III |
| ಆಂಧ್ರ ಪ್ರದೇಶ | 23 | 12 | 13,212 | IV |
| ಬಿಹಾರ | 38 | 33 | 10,142 | V |
| ಮಧ್ಯ ಪ್ರದೇಶ | 45 | 19 | 7,956 | VI |
| ಒರಿಸ್ಸಾ | 30 | 19 | 6,964 | VII |
| ತಮಿಳು ನಾಡು | 32 | 28 | 6,668 | VIII |
| ಗುಜರಾತ್ | 26 | 11 | 6,541 | IX |
| ಮಹಾರಾಷ್ಟ್ರ | 35 | 31 | 3,676 | X |
| ಕೇರಳ | 14 | 3 | 2,748 | XI |
| ಜಾರ್ಖಂಡ | 18 | 1 | 1,061 | XIII |
| **ಒಟ್ಟು** | **393** | **209** | **1,32,381** | |

*(ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಸಚಿವಾಲಯ,* www.socialjustice.nic.in/pronearea.php *ದಿನಾಂಕ 12/01/2010; ಎನ್‌ಸಿಆರ್‌ಬಿ, ಭಾರತದಲ್ಲಿ ಅಪರಾಧಗಳು 1995–2007, ನವದೆಹಲಿ, 1996–2008)*

**ದೌರ್ಜನ್ಯ ತಡೆ ಕಾಯ್ದೆಗೆ ಅಪಮಾನ?**

- ***ಅಘಾತಕಾರಿ ಸತ್ಯಾಂಶಗಳು:*** ಸಾಮಾನ್ಯವಾಗಿ ಪ.ಪಂಗಡಗಳವರ ಮೇಲಾಗುವ ಅಪರಾಧಗಳು ಮತ್ತು ನಿರ್ಧಿಷ್ಟವಾಗಿ ದೌರ್ಜನ್ಯ ತಡೆ ಕಾಯ್ದೆಯ ದೌರ್ಜನ್ಯ ಪ್ರಕರಣಗಳು ಅಷ್ಟು ಸಂಖ್ಯೆಯಲ್ಲಿದ್ದರೂ 35 ರಾಜ್ಯ/ಕೇಂದ್ರಾಡಳಿತ ಪ್ರದೇಶಗಳಲ್ಲಿ ಕೇವಲ 12 ರಾಜ್ಯ/ಕೇಂದ್ರಾಡಳಿತ ಪ್ರದೇಶಗಳು ದೌರ್ಜನ್ಯಪೀಡಿತ ಪ್ರದೇಶಗಳನ್ನು ಗುರುತಿಸಿವೆ. ಮಿಗಿಲಾಗಿ 11 ರಾಜ್ಯಗಳಲ್ಲಿ ಆರು ರಾಜ್ಯಗಳು 50%ಕ್ಕೂ ಹೆಚ್ಚಿನ ಜಿಲ್ಲೆಗಳನ್ನು ದೌರ್ಜನ್ಯಪೀಡಿತ ಪ್ರದೇಶಗಳೆಂದು ಗುರುತಿಸಿವೆ. ದೇಶದಲ್ಲಿಯೇ ಹೆಚ್ಚು ದೌರ್ಜನ್ಯ ಪ್ರಕರಣಗಳು ದಾಖಲಾಗುವ ಉತ್ತರಪ್ರದೇಶ ತನ್ನ 72 ಜಿಲ್ಲೆಗಳಲ್ಲಿ ಕೇವಲ 20 (27.8%) ಜಿಲ್ಲೆಗಳಲ್ಲಿ ಮಾತ್ರ ದೌರ್ಜನ್ಯಪೀಡಿತ ಪ್ರದೇಶ ಎಂದು ಗುರುತಿಸಿವೆ.
- ***ದೋಷಗಳು:*** ಮತ್ತೊಂದು ಆಶ್ಚರ್ಯಕರ ಸಂಗತಿಯೆಂದರೆ ದೌರ್ಜನ್ಯ ತಡೆ ಕಾಯ್ದೆಯಲ್ಲಿ 1995–2007 ಅವಧಿಗೆ ದೌರ್ಜನ್ಯ ಪ್ರಕರಣಗಳಿಗೆ ದೇಶದಲ್ಲಿಯೇ ಎರಡನೇ ಸ್ಥಾನವಿರುವ ರಾಜಸ್ಥಾನ 17 ಜಿಲ್ಲೆಗಳನ್ನು ಗುರುತಿಸಿದ್ದು, ಯಾವ ಪ್ರದೇಶವನ್ನೂ ಅಧಿಕೃತವಾಗಿ ದೌರ್ಜನ್ಯಪೀಡಿತ ಪ್ರದೇಶ ಎಂದು ಘೋಷಿಸಿಲ್ಲ.
- ***ದೌರ್ಜನ್ಯಪೀಡಿತ ಪ್ರದೇಶ:*** ಆದರೆ ಕಡಿಮೆ ಪ್ರಕರಣಗಳು ದಾಖಲಾಗಿವೆ: ತಮಿಳುನಾಡು, ದೇಶದಲ್ಲೇ ಅತಿ ಹೆಚ್ಚು ಜಿಲ್ಲೆಗಳನ್ನು (32) ದೌರ್ಜನ್ಯಪೀಡಿತ ಪ್ರದೇಶ ಎಂದು ಗುರುತಿಸಿದೆ: 28 ಜಿಲ್ಲೆಗಳಲ್ಲಿ 186 ಗ್ರಾಮಗಳನ್ನು ದೌರ್ಜನ್ಯಪೀಡಿತವೆಂದೂ, 230 ಗ್ರಾಮಗಳು ನಿದ್ರಾವಸ್ಥೆಯಲ್ಲಿರುವ ದೌರ್ಜನ್ಯಪೀಡಿತ ಪ್ರದೇಶಗಳೆಂದೂ, ಅವುಗಳಲ್ಲಿ 166 ಗ್ರಾಮಗಳು 'ಅತಿ ಸೂಕ್ಷ್ಮ ಪ್ರದೇಶಗಳೆಂದೂ ಇವರಿಸಲಾಗಿದೆ. ಆದರೂ, ಪರಿಶಿಷ್ಟರ ಮೇಲೆ 1995–2007 ಅವಧಿಗೆ ವರದಿಯಾದ ಕಣ್ಣಿಗೆ ಕಾಣುವ ಅಪರಾಧಗಳಲ್ಲಿ ಶೇ.37% ಪ್ರಕರಣಗಳು ದೌರ್ಜನ್ಯ ತಡೆ ಕಾಯ್ದೆಯಡಿ ದಾಖಲಾಗಿವೆ. *(ಲಿಟ್ಲ್ ಇಂಪ್ಯಾಕ್ಟ್/ಫ್ರಂಟ್ ಲೈನ್, 4/12/2009/ಪುಟ 15–16)*
- ***ಅರೆಕೊರೆಗಳು:*** ಕೇರಳದ ಮೂರು ಜಿಲ್ಲೆ ಮತ್ತು ಒರಿಸ್ಸಾದ ಕರಾವಳಿ ಜಿಲ್ಲೆಗಳು 'ಅಸ್ಪೃಶ್ಯತೆ ಪೀಡಿತ' ಪ್ರದೇಶಗಳೆಂದು ಮೇಲ್ನೋಟಕ್ಕೆ ಕಾಣುತ್ತದೆ, ಜಾತಿ ಮತ್ತು 'ಅಸ್ಪೃಶ್ಯತೆ' ದೌರ್ಜನ್ಯಕ್ಕೆ ಪ್ರಮುಖ ಕಾರಣ. ಆದರೂ ಅವುಗಳನ್ನು ದೌರ್ಜನ್ಯಪೀಡಿತ ಪ್ರದೇಶಗಳೆಂದು ಗುರುತಿಸದೇ ಇರುವುದು ಈ ಸಮಿತಿಗೆ ಆಶ್ಚರ್ಯವಾಗಿದೆ. *(ಪರಿಶಿಷ್ಟ ಜಾತಿ/ವರ್ಗಗಳ ಕಲ್ಯಾಣದ ಸಂಸತ್ತು ಸಮಿತಿ, 14ನೇ ವರದಿ 2006–07, ನವದೆಹಲಿ 2006 ಪುಟ 84)*

**ತಕ್ಷಣದ ಗಮನ ಅಗತ್ಯ!**

ಕಡಿಮೆ ದೌರ್ಜನ್ಯಪೀಡಿತ ಪ್ರದೇಶಗಳನ್ನು ಗುರುತಿಸಿರುವ ಸನ್ನಿವೇಶದಲ್ಲಿ, ಕಾಯ್ದೆಯ ಉದ್ದೇಶ ಈಡೇರಿಸಲು ಕಾಯ್ದೆಯನ್ನು ಪೂರ್ಣ ಅನುಷ್ಠಾನಗೊಳಿಸಲು ರಾಜ್ಯಗಳು ಪ್ರಾಮುಖ್ಯತೆ ನೀಡುವುದಿಲ್ಲ ಎಂದು ನಿರ್ಧರಿಸಬಹುದು. ಆದರೆ, ದೌರ್ಜನ್ಯವಾದ ನಂತರ ಕ್ರಮ ಕೈಗೊಳ್ಳುವುದಕ್ಕಿಂತಲೂ ಮುನ್ನೆಚ್ಚರಿಕಿಯಿಂದ ಸ್ವಲ್ಪ ಸಮಯ ಮತ್ತು ಶಕ್ತಿ ಬಳಸಿ, ದೌರ್ಜನ್ಯಪೀಡಿತ ಪ್ರದೇಶಗಳನ್ನು ಗುರುತಿಸಿ ಕ್ರಮ ಕೈಗೊಳ್ಳುವುದು ಜಾಣತನ

⇨ ದೌರ್ಜನ್ಯ ಗುರುತಿಸಿದ ಜಿಲ್ಲೆ ಯಾ ಪ್ರದೇಶಕ್ಕೆ ಮಾತ್ರ ದೌರ್ಜನ್ಯ ಸೀಮಿತವಾಗುವುದಿಲ್ಲ. ಆದ್ದರಿಂದ ದೌರ್ಜನ್ಯಪೀಡಿತ ಜಿಲ್ಲೆ/ಪ್ರದೇಶ ಗುರುತಿಸಲು ಸಾಮಾನ್ಯ ಮಾನದಂಡಗಳನ್ನು ಅಭಿವೃದ್ಧಿಗೊಳಿಸಬೇಕು.

⇨ ದೌರ್ಜನ್ಯ ತಡೆ ಕಾಯ್ದೆಯಲ್ಲಿ ನಿಯಮಿತ ರಕ್ಷಣೆ: ಕಾಯ್ದೆಯ ಸೆಕ್ಷನ್ 10ರನ್ವಯ ವ್ಯಕ್ತಿಯೊಬ್ಬ ದೌರ್ಜನ್ಯ ಎಸಗಬಹುದೆಂದು ಕಂಡು ಬಂದರೆ ದುಷ್ಕರ್ಮಿಯನ್ನು ಸ್ಥಳಾಂತರಿಸಿ ರಕ್ಷಿಸುವ ಅವಕಾಶ ಪರಿಶಿಷ್ಟ ಪಂಗಡ, ಪರಿಶಿಷ್ಟ ಅಥವಾ ಬುಡಕಟ್ಟು ಪ್ರದೇಶಗಳಿಗೆ ಮಾತ್ರ ನೀಡಲಾಗಿದೆ. ಪರಿಶಿಷ್ಟ ಜಾತಿಯವರು ಹೆಚ್ಚಿನ ಪ್ರಮಾಣದಲ್ಲಿ ದೌರ್ಜನ್ಯಕ್ಕೆ ಒಳಗಾಗುತ್ತಿದ್ದರೂ ಇಂತಹ ರಕ್ಷಣೆ ಅವಕಾಶ ಪರಿಶಿಷ್ಟ ಜಾತಿಯವರಿಗೆ ನೀಡಿಲ್ಲ *(ಪಿ.ಎಸ್. ಕೃಷ್ಣನ್, ದಲಿತರ ಮೇಲಿನ ದೌರ್ಜನ್ಯ: ಆತ್ಮಾವಲೋಕನ ಮತ್ತು ಭವಿಷ್ಯ: ಕಾಂಬಾಟ್ ಲಾ ಸಂಪುಟ 8, ಸಂಚಿಕೆ 5.5, 2009 ಪುಟ 17)*

***(ಸೂಚನೆ: 1999ರಲ್ಲಿಯೇ ಪರಿಶಿಷ್ಟ ಜಾತಿ ಮತ್ತು ವರ್ಗಗಳ ರಾಷ್ಟ್ರೀಯ ಆಯೋಗವು ಇದೇ ಶಿಫಾರಸ್ಸು ಮಾಡಿತ್ತು!)***

**2. ಪರಿಶಿಷ್ಟ ಜಾತಿ/ವರ್ಗ ರಕ್ಷಣಾ ಕೋಶ**

- ಕೆಲಸ ಮಾಡುವ ರಕ್ಷಣಾ ಕೋಶದ ಕೊರತೆ: ಎಲ್ಲಾ ರೀತಿ ಮನವೊಲಿಸಿದ ನಂತರವೂ 2009ರವರೆಗೆ ಅರ್ಧದಷ್ಟು ರಾಜ್ಯ/ಕೇಂದ್ರಾಡಳಿತ ಪ್ರದೇಶಗಳು ಪರಿಶಿಷ್ಟ ಜಾತಿ/ಪಂಗಡಗಳ ರಕ್ಷಣಾ ಕೋಶ ಸ್ಥಾಪಿಸಿವೆ. ಹಲವು ರಾಜ್ಯಗಳಿನ್ನೂ ವಿಶೇಷ ಕೋಶ ಸ್ಥಾಪಿಸಬೇಕಿದೆಯೆಂದು ತಿಳಿದು ಸಮಿತಿಗೆ ನೋವಾಯಿತು. ಕೆಲವು ರಾಜ್ಯಗಳಲ್ಲಿ ಇಂತಹ ಕೋಶಗಳು ಮೂಲಸೌಕರ್ಯಗಳಿಲ್ಲದೆ, ಶೋಚನೀಯ ಪರಿಸ್ಥಿತಿಯಲ್ಲಿ ಕೆಲಸ ಮಾಡುತ್ತಿವೆ. ರಕ್ಷಣಾಕೋಶಗಳ ಪರಿಸ್ಥಿತಿ ಉತ್ತಮಗೊಳಿಸಲು ನಿರ್ದೇಶನ ಮತ್ತು ವಿಶೇಷ ಕೋಶಗಳನ್ನು ಸ್ಥಾಪಿಸಬೇಕಿರುವ ರಾಜ್ಯಗಳಿಗೆ 100% ನೆರವನ್ನು ನೀಡಬೇಕೆಂದು ಕೇಂದ್ರಕ್ಕೆ ಸಮಿತಿ ಶಿಫಾರಸ್ಸು ಮಾಡಿದೆ. *(ಪರಿಶಿಷ್ಟ ಜಾತಿ/ಪಂಗಡಗಳ ಕಲ್ಯಾಣದ ಸಂಸತ್ತು ಸಮಿತಿ, 4ನೇ ವರದಿ 2004–5, ನವದೆಹಲಿ, ಲೋಕಸಭೆ ಕಾರ್ಯದರ್ಶಿ ಕಛೇರಿ, 2005, ಪ್ಯಾರಾ 2.49)*
- **2009ರವರೆಗೆ ಕೇವಲ ಅರ್ಧದಷ್ಟು ರಾಜ್ಯ/ಕೇಂದ್ರಾಡಳಿತ ಪ್ರದೇಶಗಳು ಪರಿಶಿಷ್ಟ ಜಾತಿ/ವರ್ಗಗಳ ರಕ್ಷಣಾ ಕೋಶ ಸ್ಥಾಪಿಸಿವೆ.**

> ⇨ ***ಪರಿಶಿಷ್ಟ ಜಾತಿ/ಪಂಗಡಗಳ ಸಂಸತ್ತು ಸಮಿತಿ ಕಂಡುಕೊಂಡಿರುವಂತೆ ಅಸ್ಪೃಶ್ಯತೆ ದೇಶಾದ್ಯಂತ ಆಚರಣೆಯಲ್ಲಿರುವುದರಿಂದ ಈ ರಕ್ಷಣಾ ಕೋಶಗಳೂ ಸರಿಯಾಗಿ ಕೆಲಸ ಮಾಡುತ್ತಿಲ್ಲವೆಂದು ಸೂಚಿಸುತ್ತದೆ, ಅಲ್ಲವೇ? ಸರ್ಕಾರಗಳು ರಕ್ಷಣಾ ಕೋಶಗಳ ಸಂಖ್ಯೆ ಹೇಳುವುದು ಬಿಟ್ಟು ಅವುಗಳು ನಿಜವಾಗಿ ಕೆಲಸ ಮಾಡುವಂತೆ ಮಾಡಲು ಗಮನ ನೀಡಬೇಕು, ಅಲ್ಲವೇ?***

**3. ನೋಡಲ್ ಮತ್ತು ವಿಶೇಷ ಅಧಿಕಾರಿಯ ನೇಮಕ**

- ಐದು ರಾಜ್ಯಗಳನ್ನು ಹೊರತುಪಡಿಸಿ, ಇನ್ನಿತರ ರಾಜ್ಯಗಳು ನೋಡಲ್ ಅಧಿಕಾರಿಗಳನ್ನು ನೇಮಿಸಿವೆ, ಕಾಯ್ದೆ ಅನುಷ್ಠಾನಗೊಳಿಸುವ ಪೂರ್ಣ ವ್ಯವಸ್ಥೆಯೊಂದಿಗೆ ಸಂಯೋಜನೆ ಮಾಡಲು 14 ರಾಜ್ಯಗಳು ಮಾತ್ರ ವಿಶೇಷ ಅಧಿಕಾರಿಯನ್ನು ನೇಮಿಸಿವೆ.

> ⇨ ***ಯಾವ ರಾಜ್ಯಗಳಲ್ಲಿ ನೋಡಲ್ ಮತ್ತು ವಿಶೇಷ ಅಧಿಕಾರಿಯ ಕಛೇರಿಗಳು ಸ್ಥಾಪಿಸಲಾಗಿದೆಯೆಂದು ಎಣಿಸುವುದರ ಬದಲಿಗೆ ಸಾಮಾಜಿಕ ನ್ಯಾಯ ಮತ್ತು ಸಬಲೀಕರಣದ ಸಚಿವಾಲಯ ಅವುಗಳ ಕೆಲಸದ ಮೌಲ್ಯಮಾಪನ ಮಾಡಬೇಕು, ಅಲ್ಲವೇ?***
>
> ⇨ ***ಕಾಯ್ದೆಯ ಅನುಷ್ಠಾನಕ್ಕಾಗಿ ಸಂಯೋಜನೆ ಮತ್ತು ಪರಿಶೀಲನೆ ಮಾಡಲು ನೋಡಲ್ ಮತ್ತು ವಿಶೇಷ ಅಧಿಕಾರಿಗಳ ನೇಮಕ ಮಾಡಿದರಷ್ಟೇ ಸಾಕೇ? ಕಾಯ್ದೆಯನ್ನು ಅನುಷ್ಠಾನಗೊಳಿಸಲು ಮೇಲ್ವಿಚಾರಣೆ ಮತ್ತು ದೌರ್ಜನ್ಯ ಪ್ರಕರಣದಲ್ಲಿ ಮಧ್ಯಪ್ರವೇಶಿಸುವ ಅಧಿಕಾರವಿರುವ ರಾಜ್ಯ ಪ್ರಾಧಿಕಾರವೊಂದು ಬೇಕು, ಅಲ್ಲವೇ?***

**4. ರಾಜ್ಯ ಮತ್ತು ಜಿಲ್ಲಾ ಮಟ್ಟದ ಜಾಗೃತಿ ಮತ್ತು ಮೇಲ್ವಿಚಾರಣೆ ಸಮಿತಿ**

- ಕೆಲಸ ಮಾಡುವ ಸಮಿತಿಯ ಕೊರತೆ: 2001ರವರೆಗೆ ಅನೇಕ ರಾಜ್ಯಗಳಲ್ಲಿ ಈ ಸಮಿತಿಗಳ ಸ್ಥಾಪನೆಯಾಗಿರಲಿಲ್ಲ ಅಥವಾ ನಿಗದಿತ ಸಮಯಕ್ಕೆ ಸಭೆ ಮಾಡಿರಲಿಲ್ಲ. *(ಪರಿಶಿಷ್ಟ ಜಾತಿ/ಪಂಗಡಗಳ ರಾಷ್ಟ್ರೀಯ ಆಯೋಗದ ಆರನೇ ವರದಿ, 1999–2000 ಮತ್ತು 2000–01, ನವದೆಹಲಿ, 2001, ಪ್ಯಾರಾ 9.9.1)*
- **2009 ವೇಳೆಗೆ ಮೂರನೇ ಒಂದರಷ್ಟು ರಾಜ್ಯ/ಕೇಂದ್ರಾಡಳಿತ ಪ್ರದೇಶಗಳು ಜಿಲ್ಲಾ ಮತ್ತು ರಾಜ್ಯಮಟ್ಟದ ಸಮಿತಿಗಳನ್ನು ರಚಿಸಿರಲಿಲ್ಲ**

***ಸಮಿತಿ ಅಸ್ತಿತ್ವ ಕಾಗದದ ಮೇಲೆ!***

- ಈ ಸಮಿತಿಗಳು ರಚನೆಯಾದ ಮೇಲೂ ಸಮಯಕ್ಕೆ ಸರಿಯಾಗಿ ಸಭೆ ನಡೆಸುವುದಿಲ್ಲ, ಸಭೆ ನಡೆಸಿದಾಗ ಫಲದಾಯಕ ವಿಚಾರಗಳ ಚರ್ಚೆ ಆಗುವುದಿಲ್ಲ ಮತ್ತು ವ್ಯವಹಾರಗಳೂ ಪಾರದರ್ಶಕವಾಗಿಲ್ಲ. ಅರ್ಥಪೂರ್ಣ ಮಾಹಿತಿ ಪಡೆಯಲು ಪರಿಶಿಷ್ಟ ಜಾತಿಯವರ ಜೊತೆ ಕೆಲಸ ಮಾಡುತ್ತಿರುವವರನ್ನು ಈ ಸಭೆಯಲ್ಲಿ ಚರ್ಚೆಗೆ ಸೇರಿಸಿಕೊಳ್ಳುವುದಿಲ್ಲ. ಅಂತಹ ಸಮಿತಿಯಲ್ಲಿ ಚರ್ಚೆಯಾದ ವಿಷಯ ಆಚರಣೆಗೆ ತರಲು ಜವಾಬ್ದಾರಿ ಹೊತ್ತುಕೊಳ್ಳುವುದಿಲ್ಲ–*(ರಾಷ್ಟ್ರೀಯ ಮಾನವಹಕ್ಕುಗಳ ಆಯೋಗ: ಪರಿಶಿಷ್ಟ ಜಾತಿಯ ವಿರುದ್ಧ ದೌರ್ಜನ್ಯ ತಡೆಗೆ ರಾಷ್ಟ್ರೀಯ ಆಯೋಗ, ನವದೆಹಲಿ, 2002, ಪುಟ 131)*
- ರಾಜ್ಯ ಮತ್ತು ಜಿಲ್ಲಾ ಮಟ್ಟದ ಮೇಲ್ವಿಚಾರಣೆ ಮತ್ತು ಜಾಗೃತಿ ಸಮಿತಿಯನ್ನು ರಚನೆ ಮಾಡಿದ್ದರೂ ಅಗತ್ಯವಿದ್ದಾಗ ಸಭೆ ಸೇರುವುದಿಲ್ಲ. ಸಭೆ ಸೇರಿದಾಗಲೂ ಕಾರ್ಯಕರ್ತರೊಡನೆ, ಮಾನವ ಹಕ್ಕು ಸಂಸ್ಥೆಗಳೊಡನೆ, ಪರಿಶಿಷ್ಟ ಜಾತಿ/ಪಂಗಡಗಳ ಜೊತೆ ಕೆಲಸ ಮಾಡುವ ಸರ್ಕಾರೇತರ ಸಂಸ್ಥೆಗಳೊಟ್ಟಿಗೆ ಮಾತುಕತೆ ನಡೆಸುವುದಿಲ್ಲ. ಸಭೆಗಳನ್ನು ಮುಂಚಿತವಾಗಿ ಯೋಜಿಸುವುದಿಲ್ಲ ಅಥವಾ ಸರಿಯಾದ ಮಾಹಿತಿ ಸದಸ್ಯರಿಗೆ ನೀಡುವುದಿಲ್ಲ. ಅನುಷ್ಠಾನ ಮಾಡುವ ಏಜೆನ್ಸಿಗಳು ತಯಾರಿಸಿದ ವರದಿಗಳ ಮೇಲೆ ಅಭಿಪ್ರಾಯ ನೀಡಲು ಸಾಧ್ಯವಿರುವ ಸಂಸ್ಥೆ ಯಾ ವ್ಯಕ್ತಿಗಳಿಗೆ ವರದಿಗಳು ಸಿಗುವುದಿಲ್ಲ. *(ಸಾಕ್ಷಿ ಮಾನವ ಹಕ್ಕುಗಳ ಕಾವಲುಪಡೆ – ಆಂಧ್ರಪ್ರದೇಶ ದಲಿತ ಮಾನವ ಹಕ್ಕುಗಳ ಮೇಲ್ವಿಚಾರಣೆ 2000, ಸಿಕಂದರಾಬಾದ್, 2000, ಪುಟಪ್ಯಾರಾ 110–11)*

> **ಬಿಹಾರ್**: 2009ರಲ್ಲಿ ಜಿಲ್ಲಾ ಜಾಗೃತಿ ಮತ್ತು ಮೇಲ್ವಿಚಾರಣೆ ಸಮಿತಿಗಳ ಕೆಲಸದ ಕುರಿತು ಮಾಡಿದ ಸಮೀಕ್ಷೆ ಈ ಅಂಶಗಳನ್ನು ತಿಳಿಸುತ್ತದೆ:
>
> - ಕೆಲವು ಜಿಲ್ಲೆಗಳಲ್ಲಿ ಸಮಿತಿ ಸದಸ್ಯರ ಹೆಸರು ನೀಡಲೂ ಜಿಲ್ಲಾಡಳಿತಕ್ಕೆ ಸಾಧ್ಯವಾಗಿಲ್ಲ
> - ಅನೇಕ ಸದಸ್ಯರಿಗೆ ತಾವು ಸದಸ್ಯರೆಂಬ ವಿಚಾರವೂ ತಿಳಿದಿಲ್ಲ.
> - ಕೆಲವರಿಗೆ ಸಮಿತಿ ಸದಸ್ಯರೆಂದು ತಿಳಿದಿದೆ. ಆದರೆ, ಕಾಯ್ದೆಯ ಅನುಷ್ಠಾನದಲ್ಲಿ ಅವರ ಪಾತ್ರ ಮತ್ತು ಜವಾಬ್ದಾರಿ ಬಹುತೇಕರಿಗೆ ತಿಳಿದಿಲ್ಲ.
> - ಸಮಿತಿಗಳ ಕೆಲವೇ ಸದಸ್ಯರಿಗೆ (ಮುಖ್ಯವಾಗಿ ನಾಗರಿಕ ಸಂಸ್ಥೆಗಳ ಸದಸ್ಯರು) ಕಾಯ್ದೆಯ ಕುರಿತು ಹೆಚ್ಚು ತಿಳಿದುಕೊಂಡಿದ್ದಾರೆ.
> - ಕಾಯ್ದೆಯ ಅನುಷ್ಠಾನದ ಕುರಿತು ಅನೇಕ ಸದಸ್ಯರಿಗೆ ಪ್ರಶ್ನೆ ಕೇಳಲು ಸಾಧ್ಯವಾಗಿಲ್ಲ, ಏಕೆಂದರೆ ಸಭೆಯಲ್ಲಿ ಮುಖ್ಯವಾಗಿ ಅಧಿಕಾರಿಗಳೇ ಭಾಗವಹಿಸಿ ವರದಿಗಳನ್ನು ಸಲ್ಲಿಸಿದ್ದಾರೆ.
>
> *(ಅಂಕಿ ಅಂಶ ಸಂಗ್ರಹಣೆ ಎನ್‌ಸಿಡಿಹೆಚ್‌ಆರ್–ಎನ್‌ಡಿಎಂಜೆ, ನವದೆಹಲಿ, 2009)*

* ತಮಿಳುನಾಡು: 2006ರಲ್ಲಿ ರಾಜ್ಯ ಜಾಗೃತಿ ಮತ್ತು ಮೇಲ್ವಿಚಾರಣೆ ಸಮಿತಿ ರಚನೆಯಾಗಿ 2009ರವರೆಗೆ ಸಮಿತಿ ಒಂದು ಬಾರಿಯೂ ಸಭೆ ಸೇರಿಲ್ಲ ಎನ್ನುವುದನ್ನು ಆದಿದ್ರಾವಿಡರ ಕಲ್ಯಾಣ ಇಲಾಖೆ ಒಪ್ಪಿಕೊಂಡಿದೆ. *(ಪಾನೆಲ್ ಇನ್ ಪ್ಲೇಸ್ ಟು ಮಾನಿಟರ್ ಅಟ್ರಾಸಿಟಿಸ್ ಆನ್ ದಲಿತ್ಸ್: ಸ್ಟೇಟ್', ದಿ ಹಿಂದೂ, 09–12–2009)*

* ಮಧ್ಯಪ್ರದೇಶ: 2008–2009 ಅವಧಿಗೆ ಜಿಲ್ಲಾ ಜಾಗೃತಿ ಮತ್ತು ಮೇಲ್ವಿಚಾರಣೆ ಸಮಿತಿಗಳ ಕೆಲಸವನ್ನು ವಿಶ್ಲೇಷಿಸಿದಾಗ ಬಹುತೇಕ ಎಲ್ಲಾ ಜಿಲ್ಲಾ ಸಮಿತಿಗಳು ಸಮಯಕ್ಕೆ ಸಭೆ ನಡೆಸಲು ವಿಫಲವಾಗಿವೆ.

| ಸಮಿತಿಗಳ ಸಭೆ | 2008 (48 ಜಿಲ್ಲೆಗಳಲ್ಲಿ) | 2009 (ಸೆಪ್ಟೆಂಬರ್‌ವರೆಗೆ 50 ಜಿಲ್ಲೆಗಳಲ್ಲಿ) |
|---|---|---|
| ಸಮಿತಿ ಒಮ್ಮೆಯೂ ಸಭೆ ಸೇರಿಲ್ಲ | 4 ಜಿಲ್ಲೆಗಳು | 7 ಜಿಲ್ಲೆಗಳು |
| ಸಮಿತಿ ಒಮ್ಮೆ ಸಭೆ ಸೇರಿದೆ | 7 ಜಿಲ್ಲೆಗಳು | 16 ಜಿಲ್ಲೆಗಳು |
| ಸಮಿತಿ ಎರಡುಬಾರಿ ಸಭೆ ಸೇರಿದೆ | 12 ಜಿಲ್ಲೆಗಳು | 16 ಜಿಲ್ಲೆಗಳು |
| ಸಮಿತಿ ಮೂರುಬಾರಿ ಸಭೆ ಸೇರಿದೆ | 20 ಜಿಲ್ಲೆಗಳು | 22 ಜಿಲ್ಲೆಗಳು |
| ಸಮಿತಿ ನ್ಯಾಲ್ಕು ಬಾರಿ ಸಭೆ ಸೇರಿದೆ | 5 | |

*(ಪರಿಶಿಷ್ಟ ಜಾತಿ/ಪಂಗಡಗಳ ಕಲ್ಯಾಣ ಇಲಾಖೆ; ಮ.ಪ್ರದೇಶ ಸರ್ಕಾರ ಕೈಗೊಂಡ ಕ್ರಮಗಳು, ಪರಿಶಿಷ್ಟ ಜಾತಿ/ಪಂಗಡಗಳ ಕಲ್ಯಾಣ ಮಂಡಳಿ, ಭೋಪಾಲ್, ದಿನಾಂಕ 27–10–2009, ಕೇಂದ್ರ ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಸಚಿವಾಲಯದ ಮಂತ್ರಿಗಳು ಭೇಟಿ ಮಾಡಿದಾಗ ತಯಾರಿಸಿದ ವರದಿ, 2009)*

* ಆಂಧ್ರಪ್ರದೇಶ: 2009ರಲ್ಲಿ 19 ಜಿಲ್ಲೆಯ ಸಮಿತಿ 45 ಬಾರಿ ಸಭೆ ಸೇರಿರುವು ದಾಖಲಿಸಿದೆ, ಉಳಿದ 4 ಜಿಲ್ಲೆಗಳಲ್ಲಿ ಮಾಹಿತಿ ಸಿಗಲಿಲ್ಲ *(ಮನಿ ಹರ್ಡಲ್ಸ್' ಫ್ರಂಟ್ ಲೈನ್ 4–122–2009, ಪುಟ 20)*

**ಕೇಂದ್ರ ಮತ್ತು ರಾಜ್ಯ ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಸಚಿವಾಲಯದ ಸಚಿವರು ಮೇಲ್ವಿಚಾರಣೆ ಸಮಿತಿಗಳು ಹೆಚ್ಚು ಸಭೆ ನಡೆಸುವ ಅಗತ್ಯತೆಯಿದೆಯೆಂದು ಒಪ್ಪಿಕೊಳ್ಳುತ್ತಾರೆ.**

"ದೌರ್ಜನ್ಯ ತಡೆ ಕಾಯ್ದೆಯಲ್ಲಿ ದಾಖಲಾದ ಪ್ರಕರಣಗಳಲ್ಲಿ ಆರೋಪ ಸಾಬೀತು ಪ್ರಮಾಣ ಐ.ಪಿ.ಸಿಗಿಂತಲೂ ಕಡಿಮೆ ಇರುವುದನ್ನು ನಾವು ಚರ್ಚಿಸಿದ್ದೇವೆ. ಪ್ರತಿ ರಾಜ್ಯದಲ್ಲಿಯೂ ಪ್ರಕರಣಗಳ ಮೇಲ್ವಿಚಾರಣೆಗಾಗಿ ಇರುವ ಜಾಗೃತಿ ಮತ್ತು ಮೇಲ್ವಿಚಾರಣೆ ಸಮಿತಿ ಹೆಚ್ಚು ಹೆಚ್ಚು ಸಭೆ ಸೇರಬೇಕೆಂದು ಸಲಹೆ ನೀಡಲಾಗಿದೆ

*ಮುಕುಲ್ ವಾಸ್ನಿಕ್, ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ, ಸಚಿವಾಲಯ, 'ಬಿಯಾಂಡ್ ಪೊಲಿಟಿಕ್ಸ್', ಫ್ರಂಟ್ ಲೈನ್, 04–12–2009, ಪುಟ 18*

**5. ಆಕಸ್ಮಿಕ ಯೋಜನೆ**

* 2006ರವರೆಗೆ ಕೇವಲ ಗುಜರಾತ್ ರಾಜ್ಯ ಆಕಸ್ಮಿಕ ಯೋಜನೆಯನ್ನು ತಯಾರಿಸಿತ್ತು. ಬಿಹಾರವು ತಯಾರಿಕೆಯ ಪ್ರಕ್ರಿಯೆಯಲ್ಲಿತ್ತು *(ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಸಚಿವಾಲಯ, ವರದಿ ದೌರ್ಜನ್ಯ ತಡೆ ಕಾಯ್ದೆಯ ಸೆಕ್ಷನ್ 21(4)ರನ್ವಯ ನವದೆಹಲಿ, 2006)*
* 2009ರೊಳಗೆ ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಸಚಿವಾಲಯದ ಪ್ರಕಾರ ಆಕಸ್ಮಿಕ ಯೋಜನೆ ತಯಾರಿಸಿದ ರಾಜ್ಯಗಳ ಸಂಖ್ಯೆ ಒಂಭತ್ತಕ್ಕೆ ಏರಿದೆ.

⇨ ***ಬಹುತೇಕ ರಾಜ್ಯಗಳಲ್ಲಿ ಆಕಸ್ಮಿಕ ಯೋಜನೆ ತಯಾರಿಸದಿರುವುದನ್ನು, ಗಮನಿಸಿದರೆ ಸರ್ಕಾರಿ ವ್ಯವಸ್ಥೆಯೊಟ್ಟಿಗೆ ಸಂಯೋಜನೆ ಮತ್ತು ಕಾಯ್ದೆಯ ಅನುಷ್ಠಾನಕ್ಕೆ ಸಹಾಯ ಮಾಡುವ ಸರ್ಕಾರೇತರ ಸಂಸ್ಥೆಗಳೊಡನೆ ಸಂಯೋಜನೆ ನಡೆಸಲು ರಾಜ್ಯಕ್ಕೆ ಆಸಕ್ತಿ ಇಲ್ಲದಿರುವುದನ್ನು ಸೂಚಿಸುತ್ತದೆ, ಅಲ್ಲವೇ?***

**"ಪರಿಶಿಷ್ಟರ ಮೇಲೆ ದೌರ್ಜನ್ಯ ತಡೆಯಲು ಐ.ಪಿ.ಸಿ ಸಾಕಾಗುವುದಿಲ್ಲ ಎನ್ನುವ ಕಾರಣಕ್ಕೆ ಈ ವಿಶೇಷ ಕಾಯ್ದೆ ಅಗತ್ಯವಾಯಿತು. ಪರಿಶಿಷ್ಟರ ಮೇಲೆ ದೌರ್ಜನ್ಯಕ್ಕೆ ಉತ್ತೇಜನ ನೀಡುವ ಮೂಲಗಳನ್ನು ನಿರ್ಮೂಲನೆ ಮಾಡಲು ಬೇರೆಲ್ಲಾ ಕಾಯ್ದೆಗಿಂತಲೂ, ದೌರ್ಜನ್ಯ ತಡೆ ಕಾಯ್ದೆ ಸರ್ಕಾರಗಳಿಗೆ ಹೆಚ್ಚಿನ ಅಧಿಕಾರ ನೀಡುತ್ತದೆ. ಕಾಯ್ದೆಯ ಅನುಷ್ಠಾನಕ್ಕೆ ಅಗತ್ಯ ಸಾಧನಸಲಕರಣೆಗಳನ್ನು ಸೃಷ್ಟಿಸುವುದು ಅಗತ್ಯ".**

*(ಪ್ರಧಾನ ಮಂತ್ರಿ ಮನಮೋಹನ್ ಸಿಂಗ್, 10ನೇ ಅಂತರಾಜ್ಯ ಕೌನ್ಸಿಲ್ ಸಭೆಯಲ್ಲಿ, ನವದೆಹಲಿ 09–12–2006)*

# 7 20 ವರ್ಷಗಳ ಅನುಷ್ಠಾನದಲ್ಲಿ ಉತ್ತರದಾಯಿತ್ವ ವ್ಯವಸ್ಥೆ

## I ಅಳತೆಗೋಲು?

- ವ್ಯಕ್ತಿಯೊಬ್ಬರ ಹಕ್ಕು ಉಲ್ಲಂಘನೆಯಾದರೆ, ಪರಿಣಾಮಕಾರಿ ಪರಿಹಾರ ಅಧಿಕೃತ ನ್ಯಾಯಾಂಗ, ಕಾರ್ಯಾಂಗ ಅಥವಾ ಶಾಸಕಾಂಗದ ಮೂಲಕ ದೊರೆಯುವಂತಾಗಬೇಕು *(ಅನುಚ್ಛೇದ 2(3) ಐಸಿಸಿಪಿಆರ್)*
- ಮೇಲು–ಕೀಳಾಧಾರ ಸಮುದಾಯದ ಸದಸ್ಯರ ಮಾನವ ಹಕ್ಕುಗಳನ್ನು ಗೌರವಿಸುವಂತೆ ಪ್ರೋತ್ಸಾಹಿಸಲು ರಾಜ್ಯಗಳು ಕಾಯ್ದೆಗಳನ್ನು ಜಾರಿ ಮಾಡಬೇಕು *(ಪ್ಯಾರಾ 7 ಸಿಇಆರ್‌ಡಿ ಸಾಮಾನ್ಯ ಶಿಫಾರಸ್ಸುಗಳು XXIX 2002)*
- ವ್ಯವಸ್ಥಿತವಾಗಿ ಬೇರುಬಿಟ್ಟಿರುವ ಜನಾಂಗೀಯ ತಾರತಮ್ಯವನ್ನು ನಿರ್ಮೂಲನೆ ಮಾಡಲು ರಾಜ್ಯ(ಗಣರಾಜ್ಯ) ಕೆಳಕಂಡ ರಾಷ್ಟ್ರೀಯ ಕಾರ್ಯತಂತ್ರಗಳನ್ನು ಅನುಷ್ಠಾನಗೊಳಿಸಬೇಕು: ನಿರ್ದಿಷ್ಟ ಉದ್ದೇಶ ಮತ್ತು ಕ್ರಮ; ಪ್ರಗತಿ ಅಳೆಯಲು ಸೂಚ್ಯಂಕಗಳು; ಜನಾಂಗೀಯ ದುರ್ಘಟನೆಗಳನ್ನು ತಡೆಯಲು ತನಿಖೆ ಮತ್ತು ಪ್ರಾಸಿಕ್ಯೂಷನ್‌ಗೆ ಮಾರ್ಗದರ್ಶನ; ಪೋಲೀಸ್ ಮತ್ತು ನ್ಯಾಯ ವ್ಯವಸ್ಥೆ ಮೇಲೆ ಸಮುದಾಯಕ್ಕೆ ತೃಪ್ತಿ *(ಪ್ಯಾರಾ 5 ಸಿಇಆರ್‌ಡಿ ಸಾಮಾನ್ಯ ಶಿಫಾರಸ್ಸುಗಳು ಈ 2005)*

## II ನಿಜಾಂಶ?

- ದೌರ್ಜನ್ಯ ತಡೆ ಕಾಯ್ದೆಯನ್ನು ಸಂಸತ್ತು ಸೃಷ್ಟಿಸಿದೆ, ಅನುಷ್ಠಾನದ ವರದಿಯನ್ನು ಲೋಕಸಭೆ ಸದಸ್ಯರು ನೋಡಿ ಪ್ರಶ್ನಿಸಬಹುದು.
- ಕೇಂದ್ರ ಸರ್ಕಾರ ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಸಚಿವಾಲಯದ ಮೂಲಕ ಕಾಯ್ದೆಯ ಸಮಗ್ರ ಅನುಷ್ಠಾನ ಮೇಲ್ವಿಚಾರಣೆ ಮಾಡಿ ಅನುಷ್ಠಾನಕ್ಕೆ ಆರ್ಥಿಕ ನೆರವು ನೀಡುತ್ತದೆ.
- ಕಾಯ್ದೆಯ ಅನುಷ್ಠಾನವನ್ನು ಎಲ್ಲಾ ಮಟ್ಟದಲ್ಲಿಯೂ ಮೇಲ್ವಿಚಾರಣೆ ಮಾಡಲು ರಾಜ್ಯ/ಕೇಂದ್ರಾಡಳಿತ ಪ್ರದೇಶಗಳು ವ್ಯವಸ್ಥೆ ಹೊಂದಿದೆ. ಶಾಸಕರು, ಸಂಸದರು ಅನುಷ್ಠಾನದ ಕುರಿತು ಪ್ರಶ್ನೆ ಕೇಳಬಹುದು. ವಿಶೇಷವಾಗಿ ಜಿಲ್ಲಾ ಅಥವಾ ರಾಜ್ಯ ಜಾಗೃತಿ ಮತ್ತು ಮೇಲ್ವಿಚಾರಣೆ ಸಮಿತಿ ಸದಸ್ಯರಾದಾಗ.
- ಪರಿಶಿಷ್ಟ ಜಾತಿ/ಪಂಗಡಗಳ ಸಾಮಾಜಿಕ ನ್ಯಾಯಕ್ಕಾಗಿ ರಾಜಕೀಯ ಪಕ್ಷಗಳು ಬದ್ಧತೆಯನ್ನು ವಿರಳವಾಗಿ ಪ್ರದರ್ಶಿಸುತ್ತವೆ.
- ಸಂವಿಧಾನದಲ್ಲಿ ಕಡ್ಡಾಯವಾಗಿರುವ ದೌರ್ಜನ್ಯ ತಡೆ, ತನಿಖೆ ಮತ್ತು ಪ್ರಾಸಿಕ್ಯೂಷನ್ ಮೇಲ್ವಿಚಾರಣೆ ಮತ್ತು ಪರಿಶಿಷ್ಟರ ಸುರಕ್ಷತೆ ನೋಡಿಕೊಳ್ಳುವ ಅತ್ಯಂತ ಹಳೆಯ ಆಯೋಗ ಪರಿಶಿಷ್ಟ ಜಾತಿ ಮತ್ತು ವರ್ಗದ ರಾಷ್ಟ್ರೀಯ ಆಯೋಗವಾಗಿದೆ.
- ಪರಿಶಿಷ್ಟರ ಮೇಲಾಗುವ ದೌರ್ಜನ್ಯ ಪ್ರಕರಣಗಳನ್ನು ಪರಿಶೀಲಿಸುವ ಅಧಿಕಾರವು, ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ, ರಾಷ್ಟ್ರೀಯ ಸಫಾಯಿ ಕರ್ಮಚಾರಿಗಳ ಆಯೋಗ, ರಾಷ್ಟ್ರೀಯ ಮಹಿಳಾ ಆಯೋಗ ಮತ್ತು ಅದರ ರಾಜ್ಯ ಆಯೋಗಗಳಿಗೂ ಇದೆ.
- ದೌರ್ಜನ್ಯದಿಂದ ರಕ್ಷಣೆ ಒಳಗೊಂಡಂತೆ ಪರಿಶಿಷ್ಟರ ಕಲ್ಯಾಣ ಸಂಬಂಧಿತ ವಿಚಾರಗಳನ್ನು ಅವಲೋಕಿಸಲು ಸಂಸತ್ತು ಸಮಿತಿ ಅಸ್ತಿತ್ವದಲ್ಲಿದೆ.

**ಆದರೂ,** ಈ ಮೊದಲು ವಿವರಿಸಿರುವಂತೆ ದೌರ್ಜನ್ಯ ತಡೆ ಕಾಯ್ದೆ ಜಾರಿಗೆ ಬಂದು 20 ವರ್ಷಗಳಾಗಿದ್ದರೂ **ಪರಿಶಿಷ್ಟರ ಮೇಲಿನ ದೌರ್ಜನ್ಯ ತಗ್ಗಿಲ್ಲ.** ಪರಿಶಿಷ್ಟರ ಜನಜೀವನ, ಆರ್ಥಿಕ ಮತ್ತು ಸಾಮಾಜಿಕ ಪರಿಸ್ಥಿತಿ ಹಾಗೂ ಜೀವಕ್ಕೆ ಭದ್ರತೆಯನ್ನು ನೀಡುವಲ್ಲಿ ಸರಿಯಾದ ಬದಲಾವಣೆಗಳು ಆಗಿಲ್ಲ.

**⇒ ಹಾಗಿದ್ದರೆ, ಸತತ ದೌರ್ಜನ್ಯಗಳಿಗೆ, ಈಗಿರುವ ಹಲವು ಆಯೋಗ, ಸಮಿತಿ, ಇಲಾಖೆ ಮತ್ತು ರಾಜಕೀಯ ಪಕ್ಷಗಳ ಪ್ರತಿಕ್ರಿಯೆ ಏನು? ದೌರ್ಜನ್ಯ ತಡೆ ಕಾಯ್ದೆಯ ಅನುಷ್ಠಾನದ ಮೂಲಕ ಪರಿಶಿಷ್ಟರ ಜನಜೀವನಕ್ಕೆ ಭದ್ರತೆ ನೀಡಲು ಇವೆಲ್ಲವೂ ಹೇಗೆ ವರ್ತಿಸಿವೆ?**

**"ಪರಿಶಿಷ್ಟರಿಗೆ ಮಾಡಬೇಕಿರುವ ಸಂವಿಧಾನದ ಕರ್ತವ್ಯವನ್ನು ರಾಜ್ಯಗಳು ಪೂರ್ಣ ಸಾಧಿಸಿಲ್ಲ ಹಾಗೂ ಸಮಾನ ಹಕ್ಕು ಮತ್ತು ರಕ್ಷಣೆಗೆ ರಚಿಸಿದ ಕಾಯ್ದೆಗಳು ಕಟ್ಟುನಿಟ್ಟಾಗಿ ಜಾರಿಯಾಗಿಲ್ಲ. ಇದಕ್ಕಾಗಿ ಎರಡು ವಿಶೇಷ ಮತ್ತು ಬಲಶಾಲಿ ಕಾಯ್ದೆಗಳು ಇವೆ, ಆದರೂ, ರಾಜಕೀಯ ಇಚ್ಛಾಶಕ್ತಿ ಮತ್ತು ಆಡಳಿತ ವ್ಯವಸ್ಥೆಯ ನಿರಾಸಕ್ತಿಯ ಪರಿಣಾಮ ಎರಡೂ ಕಾಯ್ದೆಗಳ ಅನುಷ್ಠಾನ ವಿಫಲವಾಗಿದೆ. ನ್ಯಾಯಾಂಗ ನಿಧಾನಗತಿಯಿಂದ ಪರಿಸ್ಥಿತಿ ಮತ್ತಷ್ಟು ಬಿಗಡಾಯಿಸಿದೆ. ಆದ್ದರಿಂದ ನಿಧಾನಗತಿಯನ್ನು ನಿರ್ಮೂಲನೆ ಮಾಡಿ ಪರಿಶಿಷ್ಟರ ರಕ್ಷಣೆಯ ವಿಶೇಷ ಕಾಯ್ದೆಗಳನ್ನು ತಪ್ಪಾಗಿ ಅರ್ಥೈಸದಂತೆ ಮಾಡುವುದು ಸದ್ಯದ ಅಗತ್ಯ"**

*ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಸಂಸತ್ತು ಸಮಿತಿ; 14ನೇ ವರದಿ 2006–07, ನವದೆಹಲಿ, ಪ್ಯಾರಾ 1.4*

### 1. ಪರಿಶಿಷ್ಟ ಜಾತಿ ಮತ್ತು ಪಂಗಡಗಳ ರಾಷ್ಟ್ರೀಯ ಆಯೋಗ (1978:2003): ನಿರೀಕ್ಷೆ ಮತ್ತು ಸಾಧನೆ.

| | |
|---|---|
| 1992–93: | 45 ದೌರ್ಜನ್ಯ ಪ್ರಕರಣದಲ್ಲಿ ಸ್ಥಳದಲ್ಲೇ ವಿಚಾರಣೆ, 23 ಸಾಮೂಹಿಕ ದೌರ್ಜನ್ಯ, ಉಳಿದವು ಬಹುತೇಕ ಕೊಲೆ ಮತ್ತು ಹಲ್ಲೆ |
| 1993–94: | 418 ದೌರ್ಜನ್ಯ ತಡೆ ಪ್ರಕರಣ. 44 ಪ್ರಕರಣಗಳಿಗೆ ಸ್ಥಳದಲ್ಲೇ ವಿಚಾರಣೆ. ಬಹುತೇಕ ಐ.ಪಿ.ಸಿಯಡಿ ಬರುವ ಅಪರಾಧಗಳು, ಕೊಲೆ, ಅಸ್ಪೃಶ್ಯತೆ ಪ್ರಕರಣಗಳು. ಜೊತೆಗೆ ಪ್ರಾದೇಶಿಕ ಕಛೇರಿಗಳು 1273 ಪ್ರಕರಣಗಳನ್ನು ನಿಭಾಯಿಸಿದ್ದವು. |
| 1994–95: | 891 ಪ್ರಕರಣ. ಬಹುತೇಕ ಜಾತಿ ನಿಂದನೆ, ಸುಮಾರು 1/4ರಷ್ಟು ಕೊಲೆ ಮತ್ತು ಅತ್ಯಾಚಾರ ಪ್ರಕರಣಗಳು |
| 1996–97: | 1651 ದೌರ್ಜನ್ಯ ಪ್ರಕರಣ. ಬಹುತೇಕ ಸಿ ಮತ್ತು ಆರ್ |
| 1999–2001: | 2000 ದೂರುಗಳನ್ನು ಸ್ವೀಕರಿಸಿದೆ. |

*(ಪಜಾತಿ/ವರ್ಗಗಳ ರಾಷ್ಟ್ರೀಯ ಆಯೋಗ, ಮೊದಲನೇ ಮತ್ತು ಆರನೇ ವರದಿಗಳು, ನವದೆಹಲಿ, 1992–2001)*

- ಆಯೋಗ ನಿಭಾಯಿಸಿರುವ ದೌರ್ಜನ್ಯ ಪ್ರಕರಣಗಳಲ್ಲಿ ಏರಿಕೆಯಾಗಿದೆ. ಇದರಿಂದ ಆಯೋಗದ ಮೇಲೆ ಹೆಚ್ಚು ನಿರೀಕ್ಷೆಯನ್ನು ತೋರಿಸುತ್ತದೆ.
- ಆಯೋಗ ಅತ್ಯಾಚಾರ ಮತ್ತು ಸಾಮೂಹಿಕ ದೌರ್ಜನ್ಯದಂತಹ ಹೀನ ದೌರ್ಜನ್ಯ ಪ್ರಕರಣಗಳನ್ನು ನಿಭಾಯಿಸಿದೆ.
- ದೌರ್ಜನ್ಯಕ್ಕೊಳಗಾದ ಪರಿಶಿಷ್ಟರಿಗೆ ಆಯೋಗದ ಮೇಲೆ ನಿರೀಕ್ಷೆ ಹೆಚ್ಚುತ್ತಿರುವುದರಿಂದ ಆಯೋಗದ ಹೊಣೆಗಾರಿಕೆಯೂ ಹೆಚ್ಚಿದೆ. ಹಾಗಾಗಿ ಆಯೋಗದ ಸಾಧನೆಯ ಗುಣಮಟ್ಟ ಹೇಗೆ?

***ಕುಂಠಿತ ಪ್ರಗತಿ–ಸೌಕರ್ಯ ಮತ್ತು ಅಧಿಕಾರದ ಕೊರತೆ :***

- ಸಾಮಾನ್ಯ ನಿರ್ದೇಶಕರ ಹುದ್ದೆ ಖಾಲಿಯಿದೆ, ಇದರಿಂದಾಗಿ ಸುಮಾರು ಹತ್ತು ವರ್ಷ ತನಿಖೆ ವಿಭಾಗ ಕೆಲಸ ಮಾಡಿಲ್ಲ.
- ಸಾಮಾನ್ಯ ನಿರ್ದೇಶಕರಿಗೆ ಅಗತ್ಯವಿರುವ ಸಿಬ್ಬಂಧಿ ಕೊರತೆಯಿಂದ, ಆ ಹುದ್ದೆಯೂ ನಿಷ್ಪ್ರಯೋಜಕ.
- ತನಿಖೆ ವಿಭಾಗದ ಸಾಮಾನ್ಯ ನಿರ್ದೇಶಕರ ಹುದ್ದೆ ಕಡಿಮೆ ಸ್ಥಾನದ್ದಾಗಿದೆ, ಇದರಿಂದ ಅನೇಕ ರಾಜ್ಯಗಳ ಹಿರಿಯ ಪೋಲೀಸ್ ಅಧಿಕಾರಿಗಳೊಂದಿಗೆ ವ್ಯವಹರಿಸುವಾಗ ಅಧಿಕಾರದ ಕೊರತೆ ಕಾಣುತ್ತದೆ.
- ಕಾನೂನು ವಿಭಾಗದ ಅನುಪಸ್ಥಿತಿಯಿಂದ ಕಾನೂನಿನ ಅಂಶಗಳನ್ನು ಕಛೇರಿಯಲ್ಲಿ ಪರಿಶೀಲಿಸಲು ಸಾಧ್ಯವಾಗುವುದಿಲ್ಲ. ಮುಖ್ಯವಾಗಿ ಪಾತಕ ಮತ್ತು ಮೀಸಲಾತಿ ವಿಚಾರಕ್ಕೆ ಸಂಬಂಧಿಸಿದಂತೆ.
- ಹೆಚ್ಚಿರುವ ದೂರುಗಳನ್ನು ನಿಭಾಯಿಸಲು ಸೌಕರ್ಯದ ಕೊರತೆ. ಉದಾಹರಣೆಗೆ ಕಂಪ್ಯೂಟರ್
- ಆರ್ಥಿಕ ನೆರವಿನ ಕೊರತೆ
- ಮೀಸಲಾತಿ ವಿಚಾರಗಳಿಗೆ ಹೆಚ್ಚು ಸಮಯ ಬೇಕಿದೆ. ಇದರಿಂದ ಪಕ್ಷಪಾತ ಮತ್ತು ದೌರ್ಜನ್ಯದ ಪ್ರಕರಣಗಳಿಗೆ ಸಮಯವಿಲ್ಲದಾಗಿದೆ.
- ವ್ಯಕ್ತಿಗತ ದೌರ್ಜನ್ಯ ದೂರನ್ನು ನಿಭಾಯಿಸುವಾಗ, ಅನುಷ್ಠಾನದ ಹೊಣೆ ಹೊತ್ತ ರಾಜ್ಯಸರ್ಕಾರಗಳ ವಿರುದ್ಧ ಶಿಸ್ತುಕ್ರಮಕ್ಕೆ ಅಧಿಕಾರದ ಕೊರತೆ.
- ಆಯೋಗ ಅನೇಕ ಶಿಫಾರಸ್ಸು ಮಾಡಿದೆ. ಅನುಷ್ಠಾನದ ಹೊಣೆ ಹೊತ್ತ ಕೇಂದ್ರ, ರಾಜ್ಯ/ಕೇಂದ್ರಾಡಳಿತ ಪ್ರದೇಶಗಳ ಮೇಲೆ ಶಿಫಾರಸ್ಸುಗಳನ್ನು ಅಳವಡಿಸಿಕೊಳ್ಳಲು ಒತ್ತಡವಿಲ್ಲದ ಕಾರಣ ಆಯೋಗದ ಶಿಫಾರಸ್ಸುಗಳು ಅನುಷ್ಠಾನಗೊಳ್ಳದೆ, ನಿಷ್ಕ್ರಿಯವಾದಂತಿದೆ; ಆಯೋಗದ ಎಷ್ಟು ಶಿಫಾರಸ್ಸುಗಳು ಒಪ್ಪಿಗೆಯಾಗಿದೆ ಅಥವಾ ಕ್ರಮ ಕೈಗೊಳ್ಳಲಾಗುತ್ತಿದೆ ಎನ್ನುವ ಮಾಹಿತಿ ಲಭ್ಯವಿಲ್ಲ.

*(ಮಾನವ ಹಕ್ಕುಗಳ ಆಯೋಗ, ಪರಿಶಿಷ್ಟ ಜಾತಿಯವರ ವಿರುದ್ಧ ದೌರ್ಜನ್ಯ ತಡೆ ವರದಿ, ನವದೆಹಲಿ, 2002, ಪುಟ 47, 102)*

**"ಪರಿಶಿಷ್ಟರ ಮೇಲಿನ ದೌರ್ಜನ್ಯಗಳಲ್ಲಿ ಬಹುತೇಕ ಪೋಲೀಸರು ಹಾಗೂ ಭದ್ರತಾ ಪಡೆಗಳತ್ತ ಬೆಟ್ಟು ಮಾಡುತ್ತವೆ. [ಒಂದು ಕೃತ್ಯವನ್ನು ಮಾಡಿರುವ ಅಥವಾ ಮಾಡದಿರುವ ಕಾರಣ]... ಇಷ್ಟೆಲ್ಲಾ ಸಂಶೋಧನೆಯ ವರದಿಗಳಿದ್ದರೂ, ವರದಿಯ ಹಿನ್ನೆಲೆಯಲ್ಲಿ ರಾಷ್ಟ್ರ ಅಥವಾ ರಾಜ್ಯ ಇಲಾಖೆಗಳು ಕ್ರಮ ಕೈಗೊಳ್ಳಲು ಯಾವುದೇ ಪ್ರಯತ್ನ ಮಾಡಿಲ್ಲ. ನಮಗೆ ತಿಳಿದಿರುವಂತೆ ಪರಿಶಿಷ್ಟ ಜಾತಿ ಮತ್ತು ಪಂಗಡಗಳ ರಾಷ್ಟ್ರೀಯ ಆಯೋಗವೂ ಈ ಕೆಲಸ ಮಾಡಿಲ್ಲ.**

*(ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ, ಪರಿಶಿಷ್ಟ ಜಾತಿಯವರ ಮೇಲಿನ ದೌರ್ಜನ್ಯ ತಡೆಯ ವರದಿ, ನವದೆಹಲಿ, 2002, ಪುಟ 47, 102*

**ವರದಿಗಳನ್ನು ಸಂಸತ್ತಿನಲ್ಲಿ ಚರ್ಚಿಸುವಲ್ಲಿ ವಿಳಂಬ**

- ಆಯೋಗ 1994–2004 ಅವಧಿಗೆ, ಒಟ್ಟು ಏಳು ವಾರ್ಷಿಕ ವರದಿ ಮತ್ತು ನಾಲ್ಕು ವಿಶೇಷ ವರದಿಗಳನ್ನು ರಾಷ್ಟ್ರಾಧ್ಯಕ್ಷರಿಗೆ ಸಲ್ಲಿಸಿದೆ. ಆದರೆ ಪ್ರತಿಬಾರಿ ವಾರ್ಷಿಕ ವರದಿ ಸಲ್ಲಿಸುವಾಗಲೂ ಸಂವಿಧಾನದ ಅನುಚ್ಛೇದ 338(5)(d) ವಿರುದ್ಧವಾಗಿ ಎರಡು ಮೂರು ವರ್ಷದ ಅಂತರವಿದೆ.
- ವಿಳಂಬದ ಹೊರತಾಗಿಯೂ ವಾರ್ಷಿಕ ವರದಿಗಳನ್ನು ಲೋಕಸಭೆ ಮತ್ತು ರಾಜ್ಯಸಭೆಗಳಲ್ಲಿ ಚರ್ಚೆಗೆ ಇಡಲಾಯಿತು. 2001–02ರ ವರದಿ ಸಾರ್ವಜನಿಕರಿಗೆ ದೊರೆತಿಲ್ಲ. ನಾಲ್ಕು ವಿಶೇಷ ವರದಿಗಳಲ್ಲಿ ಒಂದನ್ನು ಸಂಸತ್ತಿನಲ್ಲಿ ಚರ್ಚೆಗೆ ಇಡಲಾಗಿದೆ. ಉಳಿದ ಮೂರು ವಿಶೇಷ ವರದಿಗಳನ್ನು ಆಯಾ ರಾಜ್ಯ ಸರ್ಕಾರಗಳಿಗೆ–ಬಿಹಾರ, ಮಧ್ಯಪ್ರದೇಶ ಮತ್ತು ಉತ್ತರಪ್ರದೇಶಗಳಿಗೆ ಸಲ್ಲಿಸಲಾಯಿತು. *(ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಸಚಿವಾಲಯ, ವಾರ್ಷಿಕ ವರದಿ 2008–09, ನವದೆಹಲಿ, 2009 ಪುಟ 72)*
- ಆಯೋಗದ ವರದಿಗಳನ್ನು ರಾಷ್ಟ್ರಾಧ್ಯಕ್ಷರಿಗೆ ಸಲ್ಲಿಸಿ ಸರ್ಕಾರಿ ಇಲಾಖೆಗಳು ಕೈಗೊಂಡ ಕ್ರಮಗಳ ಜೊತೆ ವರದಿಗಳು ಸಂಸತ್ತಿನಲ್ಲಿ ಚರ್ಚೆಗೆ ಬರುವಷ್ಟರಲ್ಲಿ ಮೂರು ವರ್ಷ ಸಮಯ ತೆಗೆದುಕೊಳ್ಳುತ್ತದೆ. *(ಮಾನವ ಹಕ್ಕುಗಳ ಆಯೋಗ, ಪರಿಶಿಷ್ಟ ಜಾತಿಯವರ ವಿರುದ್ಧ ದೌರ್ಜನ್ಯ ತಡೆ ವರದಿ, ನವದೆಹಲಿ, 2002, ಪುಟ 101, 122)*

**ನಿಧಾನಗತಿಯ ವರದಿ ತಯಾರಿಕೆ ಮತ್ತು ಚರ್ಚೆ–ನಕಾರಾತ್ಮಕ ಫಲಿತಾಂಶ**

- ವರದಿಗಳು ಹಳೆಯದಾಗಿ, ಸ್ವಲ್ಪ ಮಹತ್ವ ಕಳೆದುಕೊಳ್ಳುವುದರಿಂದ ಸಂಸತ್ತಿನಲ್ಲಿ ಚರ್ಚೆಯಾಗುವುದಿಲ್ಲ.
- ಕೈಗೊಂಡ ಕ್ರಮಗಳನ್ನು ಸಲ್ಲಿಸಲು ಕಾಲಮಿತಿ ಇಲ್ಲದಿರುವುದರಿಂದ ಸರ್ಕಾರಿ ಇಲಾಖೆ ಮತ್ತು ಸಚಿವಾಲಯಗಳ ಜವಾಬು ಬೇಗ ಪಡೆಯಲು ಬೇರೆ ಮಾರ್ಗವಿಲ್ಲ.
- ಆಯೋಗದ ಶಿಫಾರಸ್ಸುಗಳಂತೆ ಸಮಯಕ್ಕೆ ಸರಿಯಾಗಿ ಕ್ರಮ ಕೈಗೊಳ್ಳದಿರುವುದರಿಂದ ಶಿಫಾರಸ್ಸುಗಳ ಉದ್ದೇಶಗಳು ಮಹತ್ವ ಕಳೆದುಕೊಳ್ಳುತ್ತವೆ. *(ಪರಿಶಿಷ್ಟ ಜಾತಿ ಮತ್ತು ವರ್ಗಗಳ ಕಲ್ಯಾಣದ ಸಂಸತ್ತು ಸಮಿತಿ 36ನೇ ವರದಿ, ನವದೆಹಲಿ, 2002 ಪುಟ 101–2)*

ಆದ್ದರಿಂದ ಈ ಸಮಿತಿ ರಾಷ್ಟ್ರಪತಿಗಳಿಗೆ ವರದಿ ನೀಡಿದ **3 ತಿಂಗಳಲ್ಲಿ ಲೋಕ ಸಭೆ ಮತ್ತು ರಾಜ್ಯ ಸಭೆಗಳಲ್ಲಿ ಸಲ್ಲಿಕೆಯಾಗಬೇಕು ಮತ್ತು ಕೈಗೊಂಡ ಕ್ರಮಗಳ ವಿವರ 6 ತಿಂಗಳ ಒಳಗಾಗಿ ಸಲ್ಲಿಕೆಯಾಗಬೇಕು** ಎಂದು ಆಯೋಗದ 1996–98ರ ವರದಿಯಲ್ಲಿ ಶಿಫಾರಸ್ಸು ಮಾಡಿದೆ.

***ವಾರ್ಷಿಕ ವರದಿಗಳಲ್ಲಿರುವ ಸುಮಾರು 5,000 ಶಿಫಾರಸ್ಸುಗಳನ್ನು, ಬಹುತೇಕ ನಿರ್ಲಕ್ಷಿಸಲಾಗಿದೆ.***

"ನೀಡಲಾದ ಶಿಫಾರಸ್ಸುಗಳನ್ನು [ಪರಿಶಿಷ್ಟ ಜಾತಿ ಮತ್ತು ವರ್ಗದ ರಾಷ್ಟ್ರೀಯ ಆಯೋಗದ ವಾರ್ಷಿಕ ವರದಿಯಲ್ಲಿ] ಹೆಚ್ಚಿನ ಸಂಖ್ಯೆಯಲ್ಲಿ ಒಪ್ಪಿಕೊಳ್ಳದಿರುವುದು [ಸರ್ಕಾರಗಳೂ] ನೋವು ತರುವ ವಿಚಾರ. ಜೊತೆಗೆ ಸಮಿತಿಗೂ ತನ್ನ ಪ್ರಯತ್ನ ಹಾಳಾಯಿತೆಂದು ನಿರಾಶೆಯಾಗುತ್ತದೆ"
"[ನಿರ್ದಿಷ್ಟ ವ್ಯಕ್ತಿಗತ ದೌರ್ಜನ್ಯದ ದೂರುಗಳು] ಶಿಫಾರಸ್ಸು ಒಪ್ಪಿಕೊಳ್ಳದಿರುವ ಸಂಗತಿ ಗಂಭೀರವಾದದ್ದು ಮತ್ತು ಈ ಸಂಸ್ಥೆಗಳ ಬಗ್ಗೆ ಪರಿಶಿಷ್ಟರಲ್ಲಿ ಮೂಡಬಹುದಾದ ಅನುಮಾನದ ಹಿನ್ನೆಲೆಯಲ್ಲಿ ಗಂಭೀರವಾಗಿ ಪರಿಗಣಿಸಬೇಕಿದೆ.

ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ, ಪರಿಶಿಷ್ಟ ಜಾತಿಯವರ ವಿರುದ್ಧ ದೌರ್ಜನ್ಯ ತಡೆ ವರದಿ, ನವದೆಹಲಿ, 2002– ಪುಟ 102

**2. ಎರಡು ಹೊಸ ಆಯೋಗಗಳು: ಬದಲಾವಣೆಯಿಂದ ಪರಿಣಾಮ ಹೆಚ್ಚುತ್ತದೆಯೇ ನೋಡಬೇಕು?**

- 2004ರಲ್ಲಿ ಪ.ಜಾತಿ ಮತ್ತು ಪಂಗಡಗಳ ರಾಷ್ಟ್ರಿಯ ಆಯೋಗವನ್ನು ಪ.ಜಾತಿಯವರಿಗೆ ರಾಷ್ಟ್ರೀಯ ಆಯೋಗ ಮತ್ತು ಪ.ಪಂಗಡದವರಿಗೆ ರಾಷ್ಟ್ರೀಯ ಅಯೋಗವೆಂದು ಪ್ರತ್ಯೇಕ ಆಯೋಗಗಳನ್ನಾಗಿ ಮಾಡಲಾಯಿತು. ಎರಡೂ ವರ್ಗದವರ ಅಗತ್ಯ ಮತ್ತು ಬೇಡಿಕೆಗಳು ಬೇರೆ ಬೇರೆಯಾಗಿರುವುದರಿಂದ ಹೀಗೆ ಪ್ರತ್ಯೇಕ ಮಾಡಲಾಯಿತು.
- ಪ.ಜಾತಿಯವರ ರಾಷ್ಟ್ರೀಯ ಆಯೋಗವು 2008ರ ಅವಧಿಯಲ್ಲಿ 2,648 ಪ್ರಕರಣಗಳನ್ನು ನಿಭಾಯಿಸಿದೆ. *(ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಸಚಿವಾಲಯ, ವಾರ್ಷಿಕ ವರದಿ 2008-09, ನವದೆಹಲಿ, 2009)*

***ಆದರೆ... ಪ.ಜಾತಿಯವರ / ಪ.ಪಂಗಡದವರ ರಾಷ್ಟ್ರೀಯ ಆಯೋಗಗಳೂ ಪರಿಣಾಮಕಾರಿಯಾಗಿ ಪ.ಜಾತಿ/ಪಂಗಡದವರ ಹಕ್ಕುಗಳನ್ನು, ಕಾಪಾಡಲು ಸಾಧ್ಯವಾಗಿಲ್ಲ. ಇದಕ್ಕೆ ಕಾರಣಗಳು:***

- ಸಮುದಾಯದ ಜನಸಂಖ್ಯೆ ಹಾಗೂ ಇರುವ ಸಮಸ್ಯೆಗಳಿಗೆ ಎರಡೂ ಆಯೋಗವನ್ನು ಹೋಲಿಸಿದರೆ, ಅಲ್ಲಿಯ ಸಿಬ್ಬಂಧಿ ಹಾಗೂ ಆಯೋಗ ಇವೆರಡೂ ಬಹಳ ದುರ್ಬಲವಾಗಿವೆ.
- ಈ ಎರಡೂ ಆಯೋಗ ಕ್ರಮವಾಗಿ ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಹಾಗೂ ಬುಡಕಟ್ಟು ಜನಾಂಗಗಳ ಸಚಿವಾಲಯದ ಅಡಿಯಲ್ಲಿ ಕೆಲಸ ಮಾಡಬೇಕಿದ್ದು ಸ್ವತಂತ್ರತೆಯ ಕೊರತೆಯಿದೆ. ಇವುಗಳಲ್ಲಿ ಆಡಳಿತ ಹಾಗೂ ಹಣಕಾಸಿನ ಮಿತಿಗಳೂ ಸೇರಿವೆ.
- ದೌರ್ಜನ್ಯಗಳು ಜರುಗಿದಾಗ, ವಿಚಾರಣೆ ನಡೆಸಲು ಆಯೋಗಗಳಿಗೆ ಸಿವಿಲ್ ನ್ಯಾಯಾಲಯದ ಅಧಿಕಾರ ನೀಡಲಾಗಿದೆ, ಆದ್ದರಿಂದ ತನಿಖೆ ಪರಿಣಾಮಕಾರಿಯಾಗುವುದಿಲ್ಲ. ತನಿಖೆ ಹಾಗೂ ಹಕ್ಕುಗಳ ಉಲ್ಲಂಘನೆಯ ವಿಚಾರಕ್ಕೆ ಬಂದರೆ ಎರಡೂ ಆಯೋಗಗಳು ರಾಜ್ಯದ ಪ್ರಾಧಿಕಾರಗಳ ಅಡಿಯಾಳಾಗಿ ಕೆಲಸ ಮಾಡಬೇಕಾಗುತ್ತದೆ.
- ಪರಿಶಿಷ್ಟ ಪಂಗಡಗಳ ಆಯೋಗ ಅಸ್ತಿತ್ವದಲ್ಲಿದೆ ಎಂಬ ವಿಚಾರವೇ ಅನೇಕರಿಗೆ ತಿಳಿದಿಲ್ಲ.
- ಪ್ರಾದೇಶಿಕವಾಗಿ ಅಗತ್ಯವಿರುವ ಕಛೇರಿಗಳಲ್ಲಿ ಕೊರತೆ ಮೇಲೆದ್ದು ಕಾಣುತ್ತದೆ (ಪ.ಜಾತಿಯವರಿಗೆ 12 ಹಾಗೂ ಪ.ಪಂಗಡಗಳವರಿಗೆ 6 ಕಛೇರಿಗಳು ಮಾತ್ರ). ಅದರಲ್ಲೂ ಪರಿಶಿಷ್ಟ ಪಂಗಡಗಳವರ ಸಮುದಾಯವು ದೇಶದೆಲ್ಲೆಡೆ ಹರಡಿಕೊಂಡಿರುವ ರೀತಿಗೆ ಇಷ್ಟು ಕಛೇರಿಗಳು ಬಹಳ ಕಡಿಮೆ. ಇಷ್ಟೇ ಅಲ್ಲದೆ, ಸಿಬ್ಬಂಧಿ ಹಾಗೂ ಹಣಕಾಸಿನ ಕೊರತೆಯೂ ಹೆಚ್ಚಿದೆ.

*(ಪ.ಜಾತಿ ಹಾಗೂ ಪಂಗಡಗಳವರ ಕುರಿತು ಸಂಸತ್ತು ಸಮಿತಿ ತನ್ನ 33 ಹಾಗೂ 36ನೇ ವರದಿಗಳಲ್ಲಿ ಹೀಗೆಂದು ತಿಳಿಸಿದೆ)*

> **ಪರಿಶಿಷ್ಟ ಪಂಗಡಗಳವರಿಗೆ ಪ್ರತ್ಯೇಕ ರಾಷ್ಟ್ರೀಯ ಆಯೋಗ ಸೃಷ್ಟಿಸುವಾಗ, ಈ ಆಯೋಗ ಬುಡಕಟ್ಟು ಜನಾಂಗಗಳ ಸಚಿವಾಲಯದಡಿಯಲ್ಲಿ ಕೆಲಸ ಮಾಡಬೇಕಾಗಬಹುದು ಎಂಬುದಾಗಿ ಯಾರೂ ಎಣಿಸಿರಲಿಲ್ಲ ಎಂಬುದು ಈ ಸಮಿತಿ ಅಭಿಪ್ರಾಯ... ಪರಿಶಿಷ್ಠ ಪಂಗಡಗಳವರ ಆಯೋಗ ತನ್ನ ದೈನಂದಿನ ಕಾರ್ಯಗಳನ್ನು ನಿರ್ವಹಿಸಲು ಅಗತ್ಯವಿರುವ ಸ್ವಾತಂತ್ರ್ಯವನ್ನು ನೀಡದೇ ಹೋದರೆ, ನಿರ್ಭೀತಿಯಿಂದ ಕೆಲಸ ಮಾಡಲು ಕಷ್ಟವಾಗುತ್ತದೆ..."**
>
> *(ಪ.ಜಾತಿ ಹಾಗೂ ಪಂಗಡಗಳವರ ಕುರಿತು ಸಂಸತ್ತು ಸಮಿತಿ ತನ್ನ 33ನೇ ವರದಿಯಲ್ಲಿ ಹೀಗೆಂದು ವರದಿ ಮಾಡಿದೆ)*

*ಪ.ಪಂಗಡಗಳವರನ್ನು ಬಾಧಿಸುತ್ತಿರುವ ಪ್ರಮುಖ ಸಮಸ್ಯೆಯ ಅಧ್ಯಯನ*

- ಅಭಿವೃದ್ಧಿ ಹೆಸರಿನಲ್ಲಿ, ಜನರನ್ನು ಒಂದೆಡೆಯಿಂದ ಮತ್ತೊಂದೆಡೆ ಸ್ಥಳಾಂತರ ಮಾಡಲಾಗುತ್ತಿದೆ, ಈ ಸಂದರ್ಭದಲ್ಲಿ ಭೂಮಿಯನ್ನು ಕಳೆದುಕೊಳ್ಳುತ್ತಿರುವುದು ಅವರು ಎದುರಿಸುವ ಪ್ರಮುಖ ಸಮಸ್ಯೆ ವಿಶೇಷವಾಗಿ ಅರಣ್ಯದ ಮೇಲಿನ ಅವರ ಹಕ್ಕು. ದೇಶಾದ್ಯಂತ ಆದಿವಾಸಿಗಳು ಈ ಸಮಸ್ಯೆಯನ್ನು ಅನುಭವಿಸುತ್ತಿದ್ದಾರೆ. ಇಷ್ಟಾದರೂ ಬುಡಕಟ್ಟು ಜನಾಂಗಗಳ ಸಚಿವಾಲಯ ಅಥವಾ ಪ.ಪಂಗಡಗಳವರ ಆಯೋಗ ಈ ಕುರಿತು ಒಂದು ಅಧ್ಯಯನ ಸಹ ಮಾಡಿಲ್ಲ.

*ಸಭೆಗಳನ್ನು ಪರಿಶೀಲಿಸಲು ರಾಜ್ಯಗಳಿಗೆ ಆಸಕ್ತಿ ಇಲ್ಲ:*

- ಪ.ಜಾತಿಯವರ ರಾಷ್ಟ್ರೀಯ ಆಯೋಗ ಅನೇಕ ರಾಜ್ಯಗಳಲ್ಲಿ ಈಗಿನ ಸಮಸ್ಯೆ ಕುರಿತು ಸಭೆ ನಡೆಸಿ, ಮುಂದಿನ ಕ್ರಮಕ್ಕಾಗಿ ಸಭೆಯ ನಡಾವಳಿಯನ್ನು ಆಯಾ ರಾಜ್ಯ ಸರ್ಕಾರಗಳಿಗೆ ಕಳುಹಿಸಿಕೊಟ್ಟಿದೆ. ಈ ನಡಾವಳಿಗೆ ರಾಜ್ಯ ಸರ್ಕಾರಗಳು ಯಾವ ಪ್ರತಿಕ್ರಿಯೆ ಸಹ ನೀಡಿಲ್ಲ. ಯಾವಾಗಲೂ ನಿಷ್ಕ್ರಿಯವಾಗಿರುವ ರಾಜ್ಯ ಸರ್ಕಾರವನ್ನು ಹೊಣೆ ಮಾಡಬೇಕಲ್ಲವೆ. *(ಪ.ಜಾತಿ ಮತ್ತು ಪ.ಪಂಗಡಗಳವರ ಕುರಿತು ಸಂಸತ್ತು ಸಮಿತಿ ತನ್ನ 36ನೇ ವರದಿಯಲ್ಲಿ ಹೀಗೆ ತಿಳಿಸಿದೆ, 2009, ಪ್ಯಾರಾ 3.9)*

*ಸಂಸತ್ತಿನ ಮುಂದೆ ವರದಿಗಳ ಮಂಡನೆ:*

- **ಪ.ಪಂಗಡಗಳವರ ರಾಷ್ಟ್ರೀಯ ಆಯೋಗದ ಮೊದಲನೇ ವರದಿ(2004–05 ಹಾಗೂ 2005–06) ಆಗಸ್ಟ್ 2006ರಂದು ಸಿದ್ಧಪಡಿಸಲಾಗಿದೆ. ಆದರೆ, ಈ ವರದಿಯನ್ನು ಸಂಸತ್ತಿನಲ್ಲಿ ಇನ್ನೂ ಮಂಡಿಸದೇ ಹೋದ ಕಾರಣ ಈ ವರದಿ ಸಾರ್ವಜನಿಕ ವಲಯಕ್ಕೆ ದೊರಕುವಂತಾಗಿಲ್ಲ.** *(ಬುಡಕಟ್ಟು ಹಾಗೂ ಮೂಲನಿವಾಸಿಗಳ ಏಷಿಯಾ ಒಕ್ಕೂಟ, ಭಾರತದ ಬುಡಕಟ್ಟು ಹಾಗೂ ಮೂಲನಿವಾಸಿಗಳು 2009, ನವದೆಹಲಿ, ಪುಟ 59)*

> ***ಆಯೋಗದ ವರದಿಯನ್ನು ಸಮಯಕ್ಕೆ ಸರಿಯಾಗಿ ನೀಡದಿರುವುದಕ್ಕೆ ಸಚಿವಾಲಯ ನೀಡುವ ಕಾರಣ:*** ಈ ವರದಿ ಬಹಳ ದೊಡ್ಡದಿದೆ ಹಾಗೂ ಎರಡು ವರ್ಷಗಳ ವಿಚಾರವನ್ನು ಮತ್ತು ಒಂಭತ್ತು ಅಧ್ಯಾಯಗಳನ್ನು ಹೊಂದಿದೆ, ಇತ್ಯಾದಿ.,
>
> ***ಸಂಸತ್ತು ಸಮಿತಿಯ ಪ್ರತಿಕ್ರಿಯೆ:*** ಮಾಹಿತಿ ತಂತ್ರಜ್ಞಾನವನ್ನು ಸಾಧಿಸಿರುವ ಆಧುನಿಕ ಕಾಲದಲ್ಲಿ, ಸಚಿವಾಲಯದ ಈ ಕಾರಣವನ್ನು ಒಪ್ಪಿಕೊಳ್ಳಲು ಸಾಧ್ಯವೇ ಇಲ್ಲ. *(ಪ.ಜಾತಿ ಮತ್ತು ಪಂಗಡಗಳವರ ಕಲ್ಯಾಣಕ್ಕಾಗಿ ಸಂಸತ್ತು ಸಮಿತಿಯು ತನ್ನ 33ನೇ ವರದಿಯಲ್ಲಿ ಹೀಗೆಂದು ಹೇಳಿದೆ, 2008, ಪ್ಯಾರಾ 2.6)*

- **ಪ.ಜಾತಿಗಳವರ ರಾಷ್ಟ್ರೀಯ ಆಯೋಗದ ಮೊದಲ ವರದಿ (2004–05) ಜುಲೈ 2006ರಲ್ಲಿ ಸಲ್ಲಿಸಲಾಗಿದೆ, ಆದರೂ ಸಹ ಈ ವರದಿಯನ್ನು ಸಂಸತ್ತಿನ ಎರಡೂ ಮನೆಗಳಲ್ಲಿ ಮಂಡಿಸಿಲ್ಲ. ಕಾರಣ ಸಂಬಂಧಿಸಿದ ಎಲ್ಲಾ ಸಚಿವಾಲಯಗಳಿಂದಲೂ ಈ ವರದಿಯ ಕುರಿತು ಪ್ರತಿಕ್ರಿಯೆ ಬರಲೇ ಇಲ್ಲ.** *(ಪ.ಜಾತಿ ಮತ್ತು ಪಂಗಡಗಳವರ ಕಲ್ಯಾಣಕ್ಕಾಗಿ ಸಂಸತ್ತು ಸಮಿತಿ ತನ್ನ 36ನೇ ವರದಿಯಲ್ಲಿ ಹೀಗೆಂದು ಹೇಳಿದೆ, 2009, ಪ್ಯಾರಾ 2.9)*
- ***ವಿಳಂಬಕ್ಕೆ ಸಚಿವಾಲಯ ನೀಡುತ್ತಿರುವ ಕಾರಣ:*** 'ಎಲ್ಲಾ ರಾಜ್ಯ ಸರ್ಕಾರಗಳೂ ತಮ್ಮ ಪ್ರತಿಕ್ರಿಯೆ ನೀಡಲು ಅಸಡ್ಡೆ ತೋರಿವೆ *(ದಲಿತರ ಕಲ್ಯಾಣ ಕೇವಲ ಬಾಯಿ ಮಾತು, ಹಿಂದೂಸ್ಥಾನ್ ಟೈಮ್ಸ್‌ನಲ್ಲಿ ವರದಿಯಾದಿಯಾಗಿರುವಂತೆ 27/07/2009)*

> *ಎರಡೂ ಆಯೋಗಗಳು ಸಂವಿಧಾನದ 338ನೇ ಅನುಚ್ಛೇದದಲ್ಲಿ ಕಡ್ಡಾಯಗೊಳಿಸಿರುವಂತೆ ಪ.ಜಾತಿ ಮತ್ತು ಪಂಗಡಗಳವರ ಕಲ್ಯಾಣದ ವರದಿಗಳನ್ನು ಸಂಸತ್ತಿನ ಮುಂದೆ ಮಂಡಿಸುವಲ್ಲಿ ವಿಫಲವಾಗಿವೆ... ಈ ಎರಡೂ ಆಯೋಗಗಳ ವರದಿಗಳು ಪೂರ್ಣಗೊಂಡು ಮೂರು ವರ್ಷಗಳು ಕಳೆದಿದ್ದರೂ ಸಹ ಸಂಸತ್ತಿನ ಮುಂದೆ ಮಂಡಿಸಿಲ್ಲವೆಂದರೆ ಏನಿದರ ಅರ್ಥ?*

*ಪರಿಶಿಷ್ಟ ಪಂಗಡಗಳವರಿಗೆ ನಿಯೋಜಿಸಿರುವ ಹಣ ಸಹ ಖರ್ಚು ಮಾಡಿಲ್ಲ!*

ಪ.ಪಂಗಡಗಳ ರಾಷ್ಟ್ರೀಯ ಆಯೋಗಕ್ಕೆ ನೀಡಿರುವ ಗ್ರಾಂಟ್ ಹಣದಲ್ಲಿ ಬಳಕೆಯಾಗದೇ ಇರುವ ಮೊತ್ತ:

| ಇಸವಿ | ಪಡೆದ ಗ್ರಾಂಟ್ ಹಣ | ಬಳಸದಿರುವ ಮೊತ್ತ |
|---|---|---|
| 2004–05 | ರೂ. 4,50,50,000/– | ರೂ. 59,99,000/– |
| 2005–06 | ರೂ. 4,56,00,000/– | ರೂ. 1,27,94,000/– |
| 2006–07 | ರೂ. 4,39,00,000/– | ರೂ. 1,14,54,473/– |
| 2007–08 | ರೂ. 4,32,00,000/– | |

*(ಬುಡಕಟ್ಟು ಮತ್ತು ಮೂಲನಿವಾಸಿಗಳ ಒಕ್ಕೂಟ: ಭಾರತದ ಬುಡಕಟ್ಟು ಮತ್ತು ಮೂಲನಿವಾಸಿಗಳ ಸ್ಥಿತಿಗತಿ2009, ನವದೆಹಲಿ, ಪುಟ 59)*

***ಪ.ಪಂಗಡಗಳ ರಾಷ್ಟ್ರೀಯ ಆಯೋಗ ಹಾಗೂ ಪ್ರಾದೇಶಿಕ ಕಛೇರಿಗಳು ತಮಗೆ ನೀಡಲಾಗಿರುವ ಗ್ರಾಂಟ್ ಹಣವನ್ನು ಪದೇ ಪದೇ ಪೂರ್ಣವಾಗಿ ಬಳಸದೇ ಇರುವುದರಿಂದ ಪ.ಪಂಗಡಗಳವರ ಹಕ್ಕುಗಳನ್ನು ರಕ್ಷಿಸಲು ಮತ್ತು ಪ್ರೋತ್ಸಾಹಿಸಲು ಸಂವಿಧಾನದಲ್ಲಿ ತಿಳಿಸಲಾಗಿರುವ ನಿಬಂಧನೆಗಳಲ್ಲಿ ಕಡ್ಡಾಯವಾಗಿ ಮಾಡಬೇಕಿರುವ ಕಾರ್ಯಚಟುವಟಿಕೆಗಳಿಗೆ ಕುಂದುಂಟು ಮಾಡಿದಂತಾಗುತ್ತದೆ, ಅಲ್ಲವೇ?***

3. ರಾಷ್ಟ್ರೀಯ ಮಾನವಹಕ್ಕುಗಳ ಆಯೋಗ: ಹೆಚ್ಚುವರಿ ಜವಾಬ್ದಾರಿಯ ಜೊತೆಗೆ ನಿಯಮಗಳ ಕಟ್ಟುಪಾಡು

*ಒಂದು ಕಡೆ*

- ಮಾನವ ಹಕ್ಕುಗಳ ಆಯೋಗದ ಕಾರ್ಯವ್ಯಾಪ್ತಿ ಹೆಚ್ಚು ವಿಶಾಲವಾಗಿದ್ದು ದೇಶಾದ್ಯಂತ 18 ರಾಜ್ಯ ಮಾನವ ಹಕ್ಕುಗಳ ಆಯೋಗ ಅಸ್ತಿತ್ವದಲ್ಲಿವೆ.
- ಮಾನವ ಹಕ್ಕುಗಳ ಆಯೋಗ 1999–2000 ಸಾಲಿನ ತನ್ನ ವಾರ್ಷಿಕ ವರದಿಯಲ್ಲಿ ಜಾತಿ ಪಕ್ಷಪಾತ ವಾಸ್ತವ ಎಂದು ಗುರುತಿಸಿದೆ.
- 2001ರಲ್ಲಿ ದಕ್ಷಿಣ ಆಫ್ರಿಕಾದ ಡರ್ಬಾನ್‌ನಲ್ಲಿ ಜನಾಂಗೀಯತೆ ವಿರುದ್ಧ ನಡೆದ ವಿಶ್ವ ಸಮ್ಮೇಳನದಲ್ಲಿ ಜನಾಂಗೀಯ ಮತ್ತು ಜಾತೀಯ ಪಕ್ಷಪಾತಗಳು ಒಂದೇ ರೀತಿಯ ಪಕ್ಷಪಾತವೇ ಅಥವಾ ಪ್ರತ್ಯೇಕ ನಮೂನೆ ಪಕ್ಷಪಾತಗಳೇ ಎಂಬುದಾಗಿ ಚರ್ಚೆ ನಡೆದಿದ್ದಾಗ, ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ ದಿಟ್ಟತೆಯಿಂದ ಈಗಿನ ಪರಿಸ್ಥಿತಿಯಲ್ಲಿ, ಇವೆರೆಡರ ನಡುವೆ ವ್ಯತ್ಯಾಸವನ್ನು ಗುರುತಿಸುವುದು ಮುಖ್ಯವಲ್ಲ, ಬದಲಿಗೆ, ಮಾನವ ಹಕ್ಕುಗಳ ವಿಚಾರವಾಗಿ ಚರ್ಚೆಯಾಗಬೇಕು, ಜೊತೆಗೆ ಸ್ಥಳೀಯ, ರಾಜ್ಯ ಅಥವಾ ಅಂತರಾಷ್ಟ್ರೀಯ ಮಟ್ಟದಲ್ಲಿ ಯಾವುದೇ ರೀತಿಯ ಪಕ್ಷಪಾತವಿರಲಿ, ಅದರ ವಿರುದ್ಧ ಹೋರಾಡಬೇಕು (ಪ.ಜಾತಿ ಮತ್ತು ಪಂಗಡಗಳವರ ವಿರುದ್ಧ ಪಕ್ಷಪಾತವನ್ನೂ ಒಳಗೊಂಡು) ಹಾಗೂ ಅಂತಹವರ ಮಾನವ ಹಕ್ಕುಗಳನ್ನು ಕಾಪಾಡಬೇಕು ಎಂದು ಪ್ರತಿಪಾದಿಸಿತು. *(ಡಾ. ನ್ಯಾಯಮೂರ್ತಿ ರಾಮಸ್ವಾಮಿ, ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ, ಜನಾಂಗೀಯತೆಯ ವಿರುದ್ಧ, ದಕ್ಷಿಣ ಆಫ್ರಿಕಾದಲ್ಲಿ ಜರುಗಿದ ವಿಶ್ವ ಸಮ್ಮೇಳನದಲ್ಲಿ ಹೇಳಿದ ಮಾತುಗಳಿವು, 2001)*
- ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ 2002ರ ವರದಿಯಲ್ಲಿ ಪ.ಜಾತಿಯವರ ವಿರುದ್ಧ ದೌರ್ಜನ್ಯವನ್ನು ತಡೆಗಟ್ಟುವ ನಿಟ್ಟಿನಲ್ಲಿ ದಲಿತರ (ಮತ್ತು ಆದಿವಾಸಿಗಳ) ಜೀವನಕ್ಕೆ ಭದ್ರತೆಯನ್ನು ಒದಗಿಸಲು, 150 ಶಿಫಾರಸ್ಸುಗಳನ್ನು ವಿವರವಾಗಿ ಮಂಡಿಸಿತು. ಅವುಗಳಲ್ಲಿ *ಪ.ಜಾತಿ/ಪಂಗಡಗಳವರ (ದೌತ)* ಕಾಯ್ದೆ ಅನುಷ್ಠಾನವೂ ಒಂದಾಗಿದೆ. ಇವುಗಳಲ್ಲಿ 53 ಶಿಫಾರಸ್ಸುಗಳನ್ನು ಆಯೋಗ ತನಗಾಗಿಯೇ ಮಾಡಿಕೊಂಡಿದೆ. ***ಇಲ್ಲಿ ಬಹುಮುಖ್ಯ ಪ್ರಶ್ನೆ ಈ 53 ಶಿಫಾರಸ್ಸುಗಳ ಅನುಷ್ಠಾನದ ಸ್ಥಿತಿಗತಿ ಏನು? ಎಂಬುದಾಗಿದೆ.***

*ಮತ್ತೊಂದು ಕಡೆ*

- ***ಸಾಮರ್ಥ್ಯ ಮೀರಿ ಪ್ರಕರಣಗಳ ದಾಖಲು:*** ದೌರ್ಜನ್ಯಕ್ಕೆ ಬಲಿಯಾಗಿರುವ ಪರಿಶಿಷ್ಟರಿಂದ ಅಗಾಧ ಪ್ರಮಾಣದ ಪ್ರಕರಣಗಳು ಮಾನವ ಹಕ್ಕುಗಳ ಆಯೋಗದ ಮುಂದೆ ದಾಖಲಾಗುತ್ತಿವೆ. ಮಾನವ ಹಕ್ಕು ಆಯೋಗದ ಸಾಮರ್ಥ್ಯದ ಮಿತಿಯುಲ್ಲಿ ಹಾಗೂ ದಾಖಲಾಗುತ್ತಿರುವ ಪ್ರಕರಣಗಳನ್ನು ಗಮನದಲ್ಲಿಟ್ಟು ನೋಡಿದರೆ, ದೂರುದಾರರಿಗೆ ನ್ಯಾಯ ದೊರಕಿಸಿಕೊಡುವಲ್ಲಿ ತೃಪ್ತಿಯಿಲ್ಲ.
- ***ಸಿಬ್ಬಂಧಿ ಮತ್ತು ಸೌಲಭ್ಯಗಳ ಕೊರತೆ:*** ಪ.ಜಾತಿಯುವರಿಂದ ದಾಖಲಾಗುತ್ತಿರುವ ಪ್ರಕರಣಗಳಲ್ಲಿ ಬಹುತೇಕ ಪ್ರಕರಣಗಳು ರಾಜ್ಯದ ವಿವಿಧ ಪ್ರಾಧಿಕಾರಗಳ ವಿರುದ್ಧವೇ ಆಗಿರುವುದರಿಂದ, ನೇರವಾಗಿ ತನಿಖೆ ನಡೆಸಿ ನ್ಯಾಯ ಒದಗಿಸಿಕೊಡುವಲ್ಲಿ ಸಿಬ್ಬಂಧಿ ಮತ್ತು ಸೌಲಭ್ಯಗಳ ಕೊರತೆ ಒಂದು ಪ್ರಮುಖ ಅಡಚಣೆಯಾಗಿದೆ.
- ***ದೌರ್ಜನ್ಯ ಪ್ರಕರಣಗಳಲ್ಲಿ ರಾಜ್ಯದ ಉತ್ತರದಾಯಿತ್ವ ಬಹುಮುಖ್ಯ ಸಮಸ್ಯೆ ಅದನ್ನು ಸರಿಪಡಿಸಲು ಆಗಿರುವುದಿಲ್ಲ:*** ದೌರ್ಜನ್ಯ ಪ್ರಕರಣಗಳಲ್ಲಿ ಬಹುತೇಕ ಫಿರ್ಯಾದುಗಳು ಪೋಲೀಸರ ವಿರುದ್ಧ ಹಾಗೂ ಇತರೆ ನೌಕರರ ವಿರುದ್ಧ ಆಗಿರುತ್ತವೆ. ಈ ನಿಟ್ಟಿನಲ್ಲಿ ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ, ಪೋಲೀಸ್ ಇಲಾಖೆಯ ಬಂದೀಖಾನೆ ವ್ಯವಸ್ಥೆ ಮತ್ತು ಅಪರಾಧಿಕ ನ್ಯಾಯದ ವ್ಯವಸ್ಥೆಯಲ್ಲಿ ಸುಧಾರಣೆ ತರಲು ಶಿಫಾರಸ್ಸು ಮಾಡಿದೆ. ಇದನ್ನು ಒಪ್ಪಿಕೊಂಡಲ್ಲಿ ರಾಜ್ಯ ಪ್ರಾಧಿಕಾರಗಳಲ್ಲಿ ಉತ್ತರದಾಯಿತ್ವ ಸ್ಥಾಪಿಸಿದಂತಾಗುತ್ತದೆ ಎಂಬುದು ಆಯೋಗದ ಅಭಿಪ್ರಾಯ...**ರಾಜ್ಯದ ಪ್ರಾಧಿಕಾರಗಳಲ್ಲಿ ಉತ್ತರದಾಯಿತ್ವವನ್ನು ತರಬೇಕೆನ್ನುವ ಆಯೋಗದ ಮಹಾತ್ವಾಕಾಂಕ್ಷೆಯ** ವಿಚಾರ ಸ್ವಾಗತಾರ್ಹ, ಆದರೆ ಇನ್ನೂ ಈ ಉದ್ದೇಶವನ್ನು ಸಾಧಿಸಲು ಆಗಿಲ್ಲ [ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗದ ಮೂಲಕ ಪ.ಜಾತಿಯವರಿಗೆ ನ್ಯಾಯ ದೊರಕಿಸುವ ಉದ್ದೇಶ]. *(ಪ.ಜಾತಿಯವರ ವಿರುದ್ಧ ದೌರ್ಜನ್ಯ ತಡೆಯ ವರದಿ, ಮಾನವ ಹಕ್ಕುಗಳ ರಾಷ್ಟ್ರೀಯ ಆಯೋಗ, ನವದೆಹಲಿ, 2002, ಪುಟ, ಪ್ಯಾರಾ 97–8)*

**ಮಾನವ ಹಕ್ಕುಗಳ ರಾಷ್ಟ್ರೀಯ ಆಯೋಗದ ಅಭಿಪ್ರಾಯದಂತೆ, ಪರಿಶಿಷ್ಟರ ವಿರುದ್ಧ ದೌರ್ಜನ್ಯ ತನ್ನ ವ್ಯಾಪ್ತಿಯಲ್ಲಿ ಬರುವುದಿಲ್ಲ, ಆದ್ದರಿಂದ ಈ ದೌರ್ಜನ್ಯಗಳ ಕುರಿತು ಹೆಚ್ಚಿನ ವಿವರವನ್ನು ತನ್ನ ವರದಿಯಲ್ಲಿ ಹಾಕುವುದಿಲ್ಲ. ದಲಿತರ ಮೇಲಿನ ದೌರ್ಜನ್ಯ ಮಾನವ ಹಕ್ಕುಗಳ ಉಲ್ಲಂಘನೆ ಆಗುವುದಿಲ್ಲ ಎಂಬುದು ಇದರ ಅರ್ಥವೇ ಎಂಬುದಾಗಿ ಪ್ರಶ್ನಿಸಿಕೊಳ್ಳಬೇಕಿದೆ.**

**ಮಾನವ ಹಕ್ಕುಗಳ ರಾಷ್ಟ್ರೀಯ ಆಯೋಗದ ಮುಂದಿರುವ ದೌರ್ಜನ್ಯ ಪ್ರಕರಣಗಳ ಒಂದು ಅಧ್ಯಯನ:**

2005–2008 ಅವಧಿಗೆ 11 ರಾಜ್ಯಗಳಿಂದ 224 ಪ್ರಕರಣಗಳು ದಲಿತರ ಹಕ್ಕುಗಳ ಸಂಸ್ಥೆಗಳು ಆಯೋಗಕ್ಕೆ ಸಲ್ಲಿಸಿವೆ. ಇವುಗಳಲ್ಲಿ ಬಹುತೇಕ ಪ್ರಕರಣಗಳು ಹಠಾತ್ ದಾಳಿ ಮತ್ತು ಸಾಮೂಹಿಕ ಹಠಾತ್ ದಾಳಿ, ಕೊಲೆ ಹಾಗೂ ಅತ್ಯಾಚಾರ ಪ್ರಕರಣಗಳಾಗಿವೆ.

***ಹಲವಾರು ಕಾರಣಗಳಿಗೆ ಅಂತಿಮಗೊಂಡ ಪ್ರಕರಣಗಳ ಪ್ರಮಾಣ:***

- ದೂರು ನೀಡಿರುವ 36 ಪ್ರಕರಣಗಳಿಗೆ (16.1%) ಆಯೋಗ ಪ್ರತಿಕ್ರಿಯೆ ತೋರಿಲ್ಲ.
- 18 ಪ್ರಕರಣಗಳು ಆಯೋಗದ ವ್ಯಾಪ್ತಿಯಲ್ಲಿ ಬರುವುದಿಲ್ಲ ಎನ್ನುವ ಕಾರಣಕ್ಕೆ ಖುಲಾಸೆಗೊಂಡವು.

- 27(12.1%) ಪ್ರಕರಣ ರಾಜ್ಯ ಆಯೋಗಕ್ಕೆ, 34(15.2%) ಜಿಲ್ಲಾ ಮಟ್ಟದ ಅಧಿಕಾರಿಗಳಿಗೆ, ಹಾಗೂ 7(3.1%) ಪ್ರಕರಣ ರಾಜ್ಯ ಪ್ರಾಧಿಕಾರಗಳಿಗೆ ವರ್ಗಾವಣೆಯಾಯಿತು.
- 101 ಪ್ರಕರಣಗಳಲ್ಲಿ ಕ್ರಮ ಜರುಗಿಸಿರುವ ಬಗ್ಗೆ ಸಂಬಂಧಿಸಿದ ಪ್ರಾಧಿಕಾರಗಳಿಂದ ವರದಿಯನ್ನು ಕೇಳಲಾಗಿದೆ, ಅವುಗಳಲ್ಲಿ 34(15.2%) ಪ್ರಕರಣಗಳಿಗೆ ಈಗಾಗಲೇ ಕ್ರಮ ಕೈಗೊಂಡಾಗಿದೆ ಎನ್ನಲಾದ್ದರಿಂದ ದೂರು ಅಂತ್ಯಗೊಂಡಿತು (ಚಾರ್ಜ್ ಶೀಟ್ ಹಾಕಲಾಯಿತು, ಇನ್ನಿತ್ಯಾದಿ), ಹಾಗೂ 20(8.9%) ಪ್ರಕರಣಗಳು ಈಗಾಗಲೇ ನ್ಯಾಯಾಲಯದಲ್ಲಿ ವಿಚಾರಣೆ ಹಂತದಲ್ಲಿವೆಯೆಂದು ಪ್ರಕರಣಗಳು ಅಂತಿಮಗೊಂಡಿತು.
- ಕ್ರಮ ಕೈಗೊಂಡ ಕುರಿತು ಪಡೆದ ವರದಿಗಳನ್ನು ದೂರುದಾರರಿಗೆ ಆಯೋಗವು ನೀಡಿದ ನಂತರ ಯಾರೆಲ್ಲ ದೂರುದಾರರು ಈ ವರದಿಗಳ ಮೇಲೆ ಸ್ಪಂದಿಸಲಿಲ್ಲವೋ ಅಥವಾ ಜಾತಿ ಆಧಾರಿತ ಆರೋಪಗಳನ್ನು ಮಾಡಲಿಲ್ಲವೋ ಆ ಪ್ರಕರಣಗಳು ಸಹ ಅಂತ್ಯಗೊಂಡವು

**ಮಾನವ ಹಕ್ಕುಗಳ ರಾಷ್ಟ್ರೀಯ ಆಯೋಗದ ಶಿಫಾರಸ್ಸುಗಳಿಗೆ, ಅಧಿಕಾರಿಗಳು ಕ್ರಮ ಕೈಗೊಳ್ಳಲಾಗಿದೆ ಎಂದು ಸಾಮಾನ್ಯವಾಗಿ ನೀಡುವ ಪ್ರತಿಕ್ರಿಯೆಗಳೇ ಪ್ರಕರಣವೊಂದು ಅಂತ್ಯಗೊಳ್ಳಲು ಆಧಾರವಾಗಬಾರದು. ಹಾಗೆ ನೋಡಿದರೆ, ಪ.ಜಾತಿಗಳವರ ಹಕ್ಕುಗಳಿಗೆ ಚ್ಯುತಿ ಬಾರದಂತೆ ರಕ್ಷಣೆ ಮಾಡುವಲ್ಲಿ ವ್ಯವಸ್ಥೆಯೊಂದು ವಿಫಲವಾಗಿರುವುದನ್ನು ಗಮನಿಸಿದರೆ, ಪರಿಶಿಷ್ಟರ ಕುರಿತು ವ್ಯವಸ್ಥೆಗಿರುವ ಅಸಡ್ಡೆ ಸೂಚಿಸುತ್ತದೆ.**

*ಮಾನವ ಹಕ್ಕುಗಳ ರಾಷ್ಟ್ರೀಯ ಆಯೋಗ, ಪ.ಜಾತಿಗಳವರ ಮೇಲೆ ದೌರ್ಜನ್ಯ ತಡೆಯ ವರದಿ, ನವದೆಹಲಿ, 2002, ಪುಟ 96*

***ದೌರ್ಜನ್ಯ ಪ್ರಕರಣಗಳಲ್ಲಿ ಮಧ್ಯಪ್ರವೇಶಕ್ಕಿರುವ ಅಡಚಣೆಗಳು:***

- *ಮಾನವ ಹಕ್ಕುಗಳ ರಕ್ಷಣೆ ಕಾಯ್ದೆ ಸೆಕ್ಷನ್36(1):* ಮಾನವ ಹಕ್ಕುಗಳ ರಾಜ್ಯ ಆಯೋಗ ಅಥವಾ ಇನ್ಯಾವುದೇ ಆಯೋಗದ ಎದುರು ವಿಚಾರಣೆಯಲ್ಲಿರುವ ಯಾವುದೇ ಪ್ರಕರಣಗಳ ವಿಚಾರಣೆ ರಾಷ್ಟ್ರೀಯ ಆಯೋಗ ನಡೆಸುವಂತಿಲ್ಲ. ಈ ಅವಕಾಶವನ್ನು ಸರ್ಕಾರಗಳು ಬಹಳ ಜಾಣ್ಮೆಯಿಂದ ಬಳಸಿ ಮಾನವ ಹಕ್ಕುಗಳ ರಾಷ್ಟ್ರೀಯ ಆಯೋಗವು ವಿಚಾರಣೆ ನಡೆಸದಂತೆ ನೋಡಿಕೊಳ್ಳುತ್ತವೆ.
- *ಕಲಂ 36(2):* ಘಟನೆ ಜರುಗಿದ ಒಂದು ವರ್ಷದ ನಂತರ ಮಾನವ ಹಕ್ಕುಗಳ ರಾಷ್ಟ್ರೀಯ ಆಯೋಗವು ವಿಚಾರಣೆ ನಡೆಸುವಂತಿಲ್ಲ. ಆದರೆ, ಅನೇಕ ಪ್ರಕರಣಗಳು ತಿಂಗಳಾನುಗಟ್ಟಲೆ ಸಾರ್ವಜನಿಕರ ಗಮನಕ್ಕೆ ಬರುವುದೇ ಇಲ್ಲ, ಅದರಲ್ಲೂ ವಿಶೇಷವಾಗಿ ದೌರ್ಜನ್ಯಕ್ಕೊಳಗಾದ ಪರಿಶಿಷ್ಟರಿಗೆ ಕಾಯ್ದೆ ತಿಳಿದಿರುವುದಿಲ್ಲ ಅಥವಾ ನ್ಯಾಯ ಬೇಡಿ ಸ್ಥಳೀಯವಾಗಿ ದೊರಕುವ ಪ್ರಾಧಿಕಾರಗಳಿಗೆ ಮೊರೆ ಹೋಗುತ್ತಾರೆ. **"ಒಂದು ದೂರನ್ನು ನೋಂದಾಯಿಸಲು ಸಮಯದ ಮಿತಿಯನ್ನು ಹೇರಿದರೆ, ದುರುಳರು ದುಷ್ಕೃತ್ಯವನ್ನು ಎಸಗಿ ಅದರಿಂದ ತಪ್ಪಿಸಿಕೊಳ್ಳುತ್ತಾನೆ".**

*(ಮಾನವ ಹಕ್ಕುಗಳ ರಾಷ್ಟ್ರೀಯ ಆಯೋಗ, ಪ.ಜಾತಿಯವರ ವಿರುದ್ಧ ದೌರ್ಜನ್ಯದ ತಡಯ ವರದಿಯಲ್ಲಿ, ನವದೆಹಲಿ, 2002, ಪುಟ 108)*

***ಈ ರೀತಿಯ ನಿರ್ಬಂಧಗಳು ಮಾನವ ಹಕ್ಕುಗಳ ರಾಷ್ಟ್ರೀಯ ಆಯೋಗದಂತ ಸಂಸ್ಥೆಯ ಮೂಲ ಉದ್ದೇಶಕ್ಕೆ ಧಕ್ಕೆ ತರುತ್ತದಲ್ಲವೇ? ಆಯೋಗವಾದರೂ, ತನ್ನ ವಿಶೇಷ ಅಧಿಕಾರವನ್ನು ಬಳಸಿ ಸಮಯದ ನಿರ್ಬಂಧವನ್ನು ಕಡೆಗಣಿಸಿ ಅತಿಗಂಭೀರತೆಯ ಪ್ರಕರಣಗಳನ್ನು ವಿಚಾರಣೆಗೆ ಕೈಗೆತ್ತಿಕೊಳ್ಳಬೇಕಲ್ಲವೇ?***

**ರಾಷ್ಟ್ರೀಯ ಮಹಿಳಾ ಆಯೋಗ: ಅದೇ ಹಾಡು ಅದೇ ರಾಗ, ಎಷ್ಟು ಶಿಫಾರಸ್ಸುಗಳು ಅಂಗೀಕೃತವಾಗಿವೆಯೆಂಬುದು ತಿಳಿಯದ ತಾಳ**

ರಾಷ್ಟ್ರೀಯ ಮಹಿಳಾ ಆಯೋಗವು ತನ್ನ 1996-97ರ ವಾರ್ಷಿಕ ವರದಿಯಲ್ಲಿ ಪ.ಜಾತಿಯವರ ಮಹಿಳೆಯರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಯನ್ನು ಸುಧಾರಿಸಲು ಈಗಿರುವ ಕಾನೂನುಗಳಲ್ಲಿ ಬದಲಾವಣೆ ಮಾಡುವಂತೆ ಅನೇಕ ಶಿಫಾರಸ್ಸುಗಳನ್ನು ಮಾಡಿತ್ತು. ಅವುಗಳಲ್ಲಿ ಮಹಿಳೆಯರ ವಿರುದ್ಧ ದುಷ್ಕೃತ್ಯಗಳು, ಬಲಾತ್ಕಾರಕ್ಕೊಳಗಾಗಿ ನೊಂದವರಿಗೆ ಉದ್ಯೋಗ, ಕಾನೂನು ಅರಿವು ಕಾರ್ಯಕ್ರಮಗಳು ಹಾಗೂ ಪ.ಜಾತಿ ಮತ್ತು ಪ.ಪಂಗಡಗಳವರ ರಾಷ್ಟ್ರೀಯ ಆಯೋಗದಲ್ಲಿ ಮಹಿಳೆಯರಿಗಾಗಿ ಪ್ರತ್ಯೇಕ ವಿಭಾಗವನ್ನು ಸಹ ಒಳಗೊಂಡಿತ್ತು.

"ಯಾವ ಶಿಫಾರಸ್ಸುಗಳು ಅಂಗೀಕೃತಗೊಂಡಿವೆ ಹಾಗೂ ಅಂಗೀಕೃತಗೊಂಡಿರುವ ಶಿಫಾರಸ್ಸುಗಳ ಸ್ಥಿತಿಗತಿ ಏನು ಎನ್ನುವ ವಿಚಾರ ತಿಳಿಯುತ್ತಿಲ್ಲ. ಮಾನವ ಹಕ್ಕುಗಳ ಆಯೋಗವು ಒಂದು ದೂರನ್ನು ನೀಡಿದೆ, ಅದೇನೆಂದರೆ ಪ.ಜಾತಿ ಮತ್ತು ಪಂಗಡಗಳವರ ರಾಷ್ಟ್ರೀಯ ಆಯೋಗದ ವರದಿಯು ಸಂಸತ್ತಿನಲ್ಲಿ ಮಂಡನೆಯಾಗುವುದರಲ್ಲಿ ಸಾಕಷ್ಟು ವಿಳಂಬವಾಗುತ್ತಿದೆ, ಇದರಿಂದಾಗಿ ಸಂಸದರ ಅಭಿಪ್ರಾಯ ಮತ್ತು ಸಲಹೆಗಳು ಸಮಯಕ್ಕೆ ಸರಿಯಾಗಿ ದೊರೆಯುತ್ತಿಲ್ಲ.

*ಮಾನವ ಹಕ್ಕುಗಳ ರಾಷ್ಟ್ರೀಯ ಆಯೋಗ, ಪ.ಜಾತಿಯವರ ವಿರುದ್ಧ ದೌರ್ಜನ್ಯ ತಡೆ ವರದಿ, ನವದೆಹಲಿ, 2002, ಪುಟ, ಪ್ಯಾರಾ 99.107*

**ಹಕ್ಕು ಪ್ರತಿಪಾದಿಸುವ ಈ ನಾಲ್ಕೂ ಆಯೋಗಗಳಿಗೆ ನೀಡಿರುವ ಜವಾಬ್ದಾರಿ ನಿಭಾಯಿಸುವಲ್ಲಿ ಹಾಗೂ ಈ ಆಯೋಗಗಳ ಮೇಲೆ ಭರವಸೆ ಇಟ್ಟು ನಿರೀಕ್ಷೆ ಇಟ್ಟುಕೊಂಡಿರುವ ಜನರಿಗೆ ಹಕ್ಕುಗಳನ್ನು ದೊರಕಿಸಿಕೊಡುವಲ್ಲಿ ಈ ಆಯೋಗಗಳ ಕೈ ಕಟ್ಟಿ ಹಾಕಿದಂತಾಗಿದೆ ಎಂಬುದನ್ನು ಬಿಡಿಸಿ ಹೇಳುವ ಅಗತ್ಯವಿಲ್ಲ. ಈ ನಾಲ್ಕೂ ಆಯೋಗಗಳಿಗೆ ಬರುತ್ತಿರುವ ದೂರು ಹಾಗೂ ಇರುವ ಜವಾಬ್ದಾರಿಗಳಿಗೆ ನೀಡಿರುವ ಸೌಕರ್ಯಗಳು ಸ್ವಲ್ಪವೂ ಸಾಕಾಗುವುದಿಲ್ಲ ಎಂಬುದು ನಾಲ್ಕೂ ಆಯೋಗಗಳ ಅಭಿಪ್ರಾಯವಾಗಿದೆ.**

*ಮಾನವ ಹಕ್ಕುಗಳ ರಾಷ್ಟ್ರೀಯ ಆಯೋಗ, ಪ.ಜಾತಿಯವರ ವಿರುದ್ಧ ದೌರ್ಜನ್ಯ ತಡೆ ವರದಿ, ನವದೆಹಲಿ, 2002, ಪುಟ, ಪ್ಯಾರಾ 101.107*

### 4. ಕೇಂದ್ರ ಸರ್ಕಾರದ ಪಾತ್ರ

***ಪ.ಜಾತಿ/ಪಂಗಡಗಳವರ (ದೌರ್ಜನ್ಯ ತಡೆ) ಕಾಯ್ದೆಯಲ್ಲಿ ತಿಳಿಸಿರುವಂತೆ ಕಡ್ಡಾಯವಾಗಿ ಸಲ್ಲಿಸಬೇಕಿರುವ ವಾರ್ಷಿಕ ವರದಿಯನ್ನು ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಮಂತ್ರಾಲಯವು ಸಲ್ಲಿಸುವಲ್ಲಿ ವಿಫಲತೆ:***

- ಕಾಯ್ದೆಗೆ ಸಂಬಂಧಿಸಿ ಈ ಸಚಿವಾಲಯ 1991-92 ವಾರ್ಷಿಕ ವರದಿಯನ್ನು ಸಂಸತ್ತಿನ ಮುಂದೆ 1998ರಲ್ಲಿ ಇಟ್ಟಿತು.
- 1993ರಿಂದ 1995ರವರೆಗೆ ವಾರ್ಷಿಕ ವರದಿಗಳನ್ನು ಪೂರ್ಣಗೊಳಿಸಲು ಸುಮಾರು ನಾಲ್ಕು ವರ್ಷ ತಡವಾಯಿತು.
- 2000ರ ವಾರ್ಷಿಕ ವರದಿ ಸಂಸತ್ತಿನ ಮುಂದೆ ಎರಡು ವರ್ಷಗಳ ನಂತರ ಇಡಲಾಯಿತು.
- ಈ ಕಾಯ್ದೆಯನ್ವಯ ಸಂಸತ್ತಿನ ಮುಂದೆ ಇಟ್ಟಿರುವ ಕಡೆಯ ವಾರ್ಷಿಕ ವರದಿ 2006ರ ವಾರ್ಷಿಕ ವರದಿಯಾಗಿದೆ..

*(ಪ.ಜಾತಿ ಮತ್ತು ಪಂಗಡಗಳವರ ರಾಷ್ಟ್ರೀಯ ಆಯೋಗದ, ಆರನೇ ವರದಿ 1999-2000 ಮತ್ತು 2000-01, ನವದೆಹಲಿ, 2001, ಪ್ಯಾರಾ 9.9.2: ಪ.ಜಾತಿಯವರ ವಿರುದ್ಧ ದೌರ್ಜನ್ಯ ತಡೆಗಾಗಿ ಮಾನವ ಹಕ್ಕುಗಳ ರಾಷ್ಟ್ರೀಯ ಆಯೋಗದ ವರದಿ. ನವದೆಹಲಿ, 2002, ಪುಟ.ಪ್ಯಾರಾ: 47-8)*

"ಸಚಿವಾಲಯ[ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ] ವಾರ್ಷಿಕ ವರದಿ ತಯಾರಿಸಿ ಸಂಸತ್ತಿನ ಮುಂದಿಡುವ ಕೆಲಸಕ್ಕಷ್ಟೇ ಸೀಮಿತಗೊಂಡಿದೆ. ಆ ಕೆಲಸವೂ ಪರಿಪೂರ್ಣವಾಗಿಲ್ಲ ಎಂಬುದು ಈ ಸಮಿತಿಯ ಅಭಿಪ್ರಾಯ. ಇದನ್ನು ಗಮನಿಸಿದರೆ ಸಚಿವಾಲಯ ಸಂವಿಧಾನದ ಅನುಚ್ಛೇದದಲ್ಲಿ 256ರಲ್ಲಿ ತಿಳಿಸಿರುವ ಕರ್ತವ್ಯ ಅಥವಾ ವಾರ್ಷಿಕ ವರದಿಗೆ ಸಂಬಂಧಿಸಿ ದೌರ್ಜನ್ಯ ತಡೆ ಕಾಯ್ದೆಯ ಸೆಕ್ಷನ್ 21(4)ರಲ್ಲಿ ತಿಳಿಸಿರುವಂತೆ ಯಾವ ಕೆಲಸವನ್ನೂ ಮಾಡಿಲ್ಲ ಎಂದು ಅರ್ಥವಾಗುತ್ತದೆ. 1993–1995ರ ವಾರ್ಷಿಕ ವರದಿಗಳನ್ನು ಪೂರ್ಣಗೊಳಿಸುವಲ್ಲಿ ತಡೆಗಟ್ಟಬಹುದಾಗಿದ್ದ ವಿಳಂಬನೀತಿಯನ್ನು ಈ ಸಮಿತಿ ಗಮನಿಸಿ ಸಚಿವಾಲಕ್ಕಿರುವ ಸ್ಫೂರ್ತಿರಹಿತ ಮನೋಭಾವನೆಯನ್ನು ಗುರುತಿಸುತ್ತದೆ.

*ಪ.ಜಾತಿ ಮತ್ತು ಪಂಗಡಗಳವರ ಕಲ್ಯಾಣಕ್ಕಾಗಿ ಸಂಸತ್ತು ಸಮಿತಿಯು ತನ್ನ 14ನೇ ವರದಿಯಲ್ಲಿ ಮೇಲಿನಂತೆ ತಿಳಿಸುತ್ತದೆ 2006–07, ನವದೆಹಲಿ, 2006, ಪುಟ 46*

*ಕಳಪೆ ವರದಿ:*

- ಸಂಸತ್ತಿನ ಮುಂದಿಟ್ಟ ವಾರ್ಷಿಕ ವರದಿಯಲ್ಲಿ ಸಮಸ್ಯೆಗಳ ಆಳ-ಹರಿವು ಹಾಗೂ ಅವುಗಳಿಗೆ ಪರಿಹಾರೋಪಾಯ ಗುರುತಿಸುವ ವಿಮರ್ಶೆ, ವಿಶ್ಲೇಷಣೆ ವರದಿಯಾಗಿ ಬರಲಿಲ್ಲ. ಬದಲಿಗೆ ವಿಮರ್ಶೆ ಮಾಡದೆ, ರಾಜ್ಯ ಸರ್ಕಾರಗಳು ನೀಡಿರುವ ಮಾಹಿತಿಯನ್ನೇ ತದ್ರೂಪು ಮುದ್ರಿಸಿದಂತೆ ತೋರುತ್ತದೆ. ಈ ವಾರ್ಷಿಕ ವರದಿಗಳಲ್ಲಿ ರಾಜ್ಯ ಸರ್ಕಾರಗಳು ಅಥವಾ ಕೇಂದ್ರ ಸರ್ಕಾರಗಳು ಸೆಕ್ಷನ್15(ಎ)ರಲ್ಲಿ ತಿಳಿಸಿರುವ ಕಡ್ಡಾಯ ಕೆಲಸ ಕಾರ್ಯಗಳನ್ನು ನಿರ್ವಹಿಸಲು ಯಾವ ರೀತಿಯ ಪ್ರಯತ್ನಗಳನ್ನು ಮಾಡುತ್ತವೆ ಎಂಬುದನ್ನು ಎಲ್ಲಿಯೂ ತಿಳಿಸಿಲ್ಲ, ಅಥವಾ ವರದಿ ಮಾಡಲಾಗಿರುವ ಅಂಕಿ ಅಂಶಗಳ ನ್ಯೂನತೆ ಸರಿಪಡಿಸುವ ಗೋಜಿಗೂ ಹೋಗಿಲ್ಲ. *(ಪಿ.ಎಸ್. ಕ್ರಿಷ್ಣನ್, ದಲಿತರ ವಿರುದ್ಧ ದೌರ್ಜನ್ಯ, ಆತ್ಮಾವಲೋಕನ, ಕಾಂಬಾಟ್ ಲಾ, ಸಂಪುಟ 8, ಸಂಚಿಕೆ 5–6, 2009 ಪು.ಪ್ಯಾ: 15–16)*

***ಪ್ರತಿ ರಾಜ್ಯದ ವರದಿಯಲ್ಲಿಯೂ ಕಾಯ್ದೆಯ ಅನುಷ್ಠಾನಕ್ಕಾಗಿ ಸ್ಥಾಪಿಸಿರುವ ವ್ಯವಸ್ಥೆಯನ್ನಷ್ಟೇ ವರದಿ ನೀಡುವ ಬದಲಿಗೆ ರಾಜ್ಯಗಳ ಮತ್ತು ಕೇಂದ್ರ ಸರ್ಕಾರಗಳ ವಾರ್ಷಿಕ ವರದಿಯಲ್ಲಿ ದೌರ್ಜನ್ಯ ತಡೆಗಟ್ಟಲು ಸಾಧ್ಯವಾಗಿರುವ ಕಾರ್ಯವಿಧಾನವನ್ನು ಸಮಗ್ರವಾಗಿ ವಿಶ್ಲೇಷಿಸಿ ಸ್ಥೂಲವಾಗಿ ಪರಿಚಯಿಸಿದರೆ ಆ ಮೂಲಕ ಉತ್ತಮ ಆಚರಣೆಗಳನ್ನು ಗುರುತಿಸುವ ಮತ್ತು ಇತರರೊಂದಿಗೆ ಹಂಚಿಕೊಳ್ಳುವ ಕಾರ್ಯವಾಗಬೇಕಲ್ಲವೇ?***

***ಬುಡಕಟ್ಟು ಜನಾಂಗಗಳ ಸಚಿವಾಲಯ 2008–09 ಸಾಲಿನ ವಾರ್ಷಿಕ ವರದಿಯಲ್ಲಿ, ದೌರ್ಜನ್ಯ ತಡೆ ಕಾಯ್ದೆಯನ್ನು ಕಡ್ಡಾಯವಾಗಿ ಅನುಷ್ಠಾನಗೊಳಿಸಲು ಸಚಿವಾಲಯದ ಕರ್ತವ್ಯವನ್ನು ಎಲ್ಲಿಯೂ ತಿಳಿಸಿಲ್ಲ.***

*ಕಾಯ್ದೆಯನುಸಾರ ವರದಿ ಕಳುಹಿಸುವಲ್ಲಿ ರಾಜ್ಯ ಸರ್ಕಾರಗಳ ವಿಫಲತೆ:*

- "ರಾಜ್ಯ ಸರ್ಕಾರಗಳು ವರದಿ ತಯಾರಿಸಿ ಸಮಯಕ್ಕೆ ಕಳುಹಿಸುವುದರ ಬಗ್ಗೆ ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಸಚಿವಾಲಯದಲ್ಲಿ ಸಮಿತಿ ವಿಚಾರಿಸಿದಾಗ, ಬಹುತೇಕ ಎಲ್ಲಾ ರಾಜ್ಯಗಳೂ ತಮ್ಮ ವರದಿಯನ್ನು ತಡವಾಗಿ ಸಲ್ಲಿಸುತ್ತವೆ ಎನ್ನುವ ಉತ್ತರ ಬಂತು." *(ಪ.ಜಾತಿ ಮತ್ತು ಪಂಗಡಗಳವರ ಕಲ್ಯಾಣಕ್ಕಾಗಿ ಸಂಸತ್ತು ಸಮಿತಿ, 4ನೇ ವರದಿ, 2004–05, ನವದೆಹಲಿ, 2005 ಪ್ಯಾರಾ 1.34)*
- ಸಾರ್ವಜನಿಕರಿಗೆ ಲಭ್ಯವಿರುವ 2006ರ ತನ್ನ ಕಡೆಯ ವರದಿಯಲ್ಲಿ ಜಾರ್ಖಂಡ್, ಮಣಿಪುರ ಮತ್ತು ದಾದ್ರ ಹಾಗೂ ನಾಗರ ಹವೇಲಿ ರಾಜ್ಯ/ಕೇಂದ್ರಾಡಳಿತ ಸರ್ಕಾರಗಳಿಗೆ ಮಾಹಿತಿ ನೀಡುವಂತೆ ಪದೇ ಪದೇ ಕೇಳಿದರೂ ಸೂಕ್ತ ಮಾಹಿತಿ ನೀಡಲೇ ಇಲ್ಲ. ಮೇಘಾಲಯ, ಅರುಣಾಚಲ್ ಪ್ರದೇಶ, ಮಿಜೋರಾಂ ಮತ್ತು ನಾಗಾಲ್ಯಾಂಡ್ ರಾಜ್ಯ ಸರ್ಕಾರ ವಿವರ ವರದಿ ನೀಡಲಿಲ್ಲ. ಪ.ಪಂಗಡಗಳವರು ಪ್ರಧಾನ ಸಂಖ್ಯೆಯಲ್ಲಿರುವ ರಾಜ್ಯ ನಮ್ಮದು ಅಥವಾ 2006ರಲ್ಲಿ ಯಾವ ದೌರ್ಜನ್ಯವೂ ಜರುಗಿಲ್ಲ ಎಂಬುದಾಗಿ ತಿಳಿಸಿದವು. *(ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಸಚಿವಾಲಯ ಕಾಯ್ದೆಯ ಕಲಂ 21(4)ರನ್ವಯ 2006ರ ಸಾಲಿಗೆ ತಯಾರಿಸಿದ ವರದಿಯಲ್ಲಿ ತಿಳಿಸಿರುವಂತೆ, ನವದೆಹಲಿ, 2006 ಪುಟ.63)*

*ದೌರ್ಜನ್ಯದ ಕುರಿತು ಗಂಭೀರವಾಗಿ ಚಿಂತಿಸುವ ಅಗತ್ಯವಿದೆ ಎಂಬುದು ಅಂತರ ರಾಜ್ಯಗಳ ಕೌನ್ಸಿಲ್ ಅಭಿಮತ:*

- ಪರಿಶಿಷ್ಟರ ಮೇಲಿನ ದೌರ್ಜನ್ಯ ಹಾಗೂ ದೌರ್ಜನ್ಯ ತಡೆ ಕಾಯ್ದೆಯ ಅನುಷ್ಠಾನದ ಸ್ಥಿತಿಗತಿ ಚರ್ಚಿಸಲು ದಿನಾಂಕ 09/12/2006ರಂದು ಪ್ರಧಾನ ಮಂತ್ರಿ, ರಾಜ್ಯ/ಕೇಂದ್ರಾಡಳಿತದ ಮುಖ್ಯ ಮಂತ್ರಿಗಳು ಮತ್ತು ಹಿರಿಯ ಅಧಿಕಾರಿಗಳು ಸಭೆ ಸೇರಿದರು.
- ಮಾನ್ಯ ಪ್ರಧಾನ ಮಂತ್ರಿ ಮನಮೋಹನ್ ಸಿಂಗ್, ಹೀಗೆಂದು ಹೇಳುತ್ತಾರೆ: ***ಅಂಕಿ ಅಂಶದಿಂದಾಗಿ ದೌರ್ಜನ್ಯ ರಾಷ್ಟ್ರ ಕಾಳಜಿ ಪಡಬೇಕಿದೆ. ನಾವು ಗಂಭೀರವಾಗಿ ಆತ್ಮಾವಲೋಕನ ಮಾಡಿಕೊಳ್ಳಲು ಹಾಗೂ ಅನುಷ್ಠಾನಕ್ಕೆ ಕೈಗೊಂಡಿರುವ ಕ್ರಮ, ವಿಧಾನ, ರೀತಿನೀತಿಗಳನ್ನು ಸಮಗ್ರವಾಗಿ ಪರಿಶೀಲನೆ ಮಾಡಲು ಸರಿಯಾದ ಸಮಯ ಈಗ ಬಂದಿದೆ. ಇಂತಹ ಘಟನೆಗಳು ಮುಂದೆ ಜರುಗದಂತೆ ಮಾಡುವ ಮೂಲಕ ನಮ್ಮ ದೇಶದ ದುರ್ಬಲರಿಗೆ ನಾವು ಭದ್ರತೆ ಭಾವನೆಯನ್ನೂ ನೀಡಲು ಸಾಧ್ಯವಾಗುತ್ತದೆ".*** *(ಪ್ರಧಾನ ಮಂತ್ರಿ, ಮನಮೋಹನ್ ಸಿಂಗ್, ಅಂತರರಾಜ್ಯಗಳ ಕೌನ್ಸಿಲ್‌ನ 10ನೇ ಸಭೆಯ ಭಾಷಣದಲ್ಲಿ, ನವದೆಹಲಿ, 09/12/2006)*

***ಈಗಿನ ಅಗತ್ಯ? ರಾಜಕೀಯ ಇಚ್ಛಾಶಕ್ತಿ!***

**ಇಂತಹ ಸಾಮಾಜಿಕ ಹಿಂಸೆ ನಿಭಾಯಿಸಲು ನೊಂದವರ ಬಗ್ಗೆ ಕರುಣೆ, ದುರುಳರನ್ನು ನಿಗ್ರಹಿಸುವ ದೃಢ ನಿರ್ಧಾರ ಬೇಕು. ದೌರ್ಜನ್ಯ ನಿರ್ಮೂಲನೆಗೆ ಈಗ ರಾಜಕೀಯ ಇಚ್ಛಾಶಕ್ತಿಯ ಅಗತ್ಯವಿದೆ.; ಕಾಯ್ದೆ ಅನುಷ್ಠಾನಗೊಳಿಸುವ ಇಚ್ಛಾಶಕ್ತಿ ಬೇಕಿದೆ; ದುರ್ಬಲರಿಗೆ ಪೋಲೀಸ್ ಮತ್ತು ನ್ಯಾಯ ವ್ಯವಸ್ಥೆ ಸುಲಭದಲ್ಲಿ ಸಿಗುವಂತೆ ವ್ಯವಸ್ಥೆ ತರುವ ಇಚ್ಛಾಶಕ್ತಿ ಬೇಕಿದೆ; ದೌರ್ಜನ್ಯದಲ್ಲಿ ನೊಂದವರಿಗೆ ಸಾಂತ್ವನ, ಪರಿಹಾರ ನೀಡುವ ಇಚ್ಛಾಶಕ್ತಿ ಬೇಕಿದೆ; ಸಮಾಜದ ಎಲ್ಲಾ ವರ್ಗ ನಮ್ಮ ರಾಜಕೀಯ ವ್ಯವಸ್ಥೆ ಹಾಗೂ ಸಮಾಜದ ಭಾಗವಾಗಿದ್ದೇವೆ ಎಂದುಕೊಳ್ಳಬೇಕು ಹಾಗೂ ಪ್ರಗತಿ ಮತ್ತು ಅಭಿವೃದ್ಧಿಯಲ್ಲಿ ಸಮ ಪಾಲುದಾರರಾಗಬೇಕು."**

*ಪ್ರಧಾನ ಮಂತ್ರಿ ಮನಮೋಹನ ಸಿಂಗ್, 10ನೇ ಅಂತರರಾಜ್ಯ ಕೌನ್ಸಿಲ್ ಸಭೆಯಲ್ಲಿ ಮಾಡಿದ ಭಾಷಣ, ನವದೆಹಲಿ, 09/12/2006*

## 20 ವರ್ಷಗಳ ಅನುಷ್ಠಾನದಲ್ಲಿ ಉತ್ತರದಾಯಿತ್ವ ವ್ಯವಸ್ಥೆ

***ಪ್ರತಿ ರಾಜ್ಯದ ಅನುಷ್ಠಾನದ ಪರಿಶೀಲನೆ–ಸಂಯೋಜನೆ ಸಮಿತಿಯಿಂದ:***

- ಪರಿಶಿಷ್ಟರ ಕಲ್ಯಾಣಕ್ಕೆ ಅಸ್ತಿತ್ವದಲ್ಲಿರುವ ಸಂಸತ್ತು ಸಮಿತಿ ಮಾಡಿರುವ ಶಿಫಾರಸ್ಸಿನಂತೆ ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಸಚಿವಾಲಯ, ಗೃಹ ಸಚಿವಾಲಯ, ಪ.ಜಾತಿಗಳವರ ರಾಷ್ಟ್ರೀಯ ಆಯೋಗ ಮತ್ತು ಪರಿಶಿಷ್ಟ ಪಂಗಡಗಳವರ ರಾಷ್ಟ್ರೀಯ ಆಯೋಗ 2006ರಿಂದ ಈಚೆಗೆ ಪರಿಶಿಷ್ಟರ ಮೇಲಿನ ಅಸ್ಪೃಶ್ಯತೆ ಮತ್ತು ದೌರ್ಜನ್ಯದ ಅಪರಾಧಗಳನ್ನು ತಡೆಗಟ್ಟಲು ಅಗತ್ಯವಿರುವ ಕ್ರಮ ಹಾಗೂ ವಿಧಾನಗಳನ್ನು ಚರ್ಚಿಸಲು ಸತತವಾಗಿ ಸಭೆ ಸೇರುತ್ತಿವೆ. ದೌರ್ಜನ್ಯ ತಡೆ ಕಾಯ್ದೆ ಮತ್ತು ಪಿ.ಸಿ.ಆರ್ ಕಾಯ್ದೆಗಳ ಪರಿಣಾಮಕಾರಿ ಅನುಷ್ಠಾನ ಖಚಿತಪಡಿಸಿಕೊಳ್ಳುವ ಕೆಲಸವನ್ನೂ ಸಮಿತಿ ಕೈಗೊಂಡಿದೆ.
- 2006–2009 ಅವಧಿಗೆ ಎಂಟು ಸಭೆಗಳು ಜರುಗಿದ್ದು, 28ರಲ್ಲಿ 24 ರಾಜ್ಯಗಳು ಹಾಗೂ 7ರಲ್ಲಿ 4 ಕೇಂದ್ರಾಡಳಿತ ಪ್ರದೇಶಗಳು ಮಾಡಿರುವ ಕಾಯ್ದೆಯ ಅನುಷ್ಠಾನ ಪರಿಶೀಲಿಸಲಾಗಿದೆ.

*(ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಸಚಿವಾಲಯ, ವಾರ್ಷಿಕ ವರದಿ, 2008–09. ನವದೆಹಲಿ, ಪ್ಯಾರಾ 4.4.4)*

**ಈ ಸಭೆಗಳಿಂದ ಹೊರಬಂದ ಫಲಿತಾಂಶಗಳೇನು? ಈ ಫಲಿತಾಂಶಗಳನ್ನು ಸಾರ್ವಜನಿಕವಾಗಿ ಏಕೆ ಪ್ರಕಟಿಸಿಲ್ಲ? ಪ್ರಕಟಿಸಿದರೆ ನಾಗರಿಕ ಸಂಸ್ಥೆಗಳೂ ಕಾಯ್ದೆಯನ್ನು ಯಶಸ್ವಿಯಾಗಿ ಅನುಷ್ಠಾನಗೊಳಿಸಲು ಕೈ ಜೋಡಿಸಬಹುದಲ್ಲವೇ?**

"ಪರಿಶಿಷ್ಟರ ಮತ್ತು ಹಿರಿಯ ನಾಗರಿಕರ ಮೇಲೆ ದೌರ್ಜನ್ಯದ ವರದಿಗಳು ಪದೇ ಪದೇ ಬರುತ್ತಿವೆ. ಇದು ಕಳವಳಕಾರಿ ವಿಚಾರ. ಇದಕ್ಕಾಗಿ ದೌರ್ಜನ್ಯ ತಡೆ ಕಾಯ್ದೆಯನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸಬೇಕೆಂದು ತಿಳಿಸಿ ನಾನು ಇತ್ತೀಚೆಗೆ ಎಲ್ಲಾ ರಾಜ್ಯದ ಮುಖ್ಯಮಂತ್ರಿಗಳಿಗೆ ಬರೆದಿದ್ದೇನೆ. ಐ.ಪಿ.ಸಿ ಅಡಿಯಲ್ಲಿ ಆಗುವ ಅಪರಾಧಗಳಿಗೆ ಶಿಕ್ಷೆಯ ಪ್ರಮಾಣವನ್ನು ಹೋಲಿಸಿದರೆ ದೌರ್ಜನ್ಯ ಪ್ರಕರಣಗಳಲ್ಲಿ ಶಿಕ್ಷೆಯ ಪ್ರಮಾಣ 30%ಕ್ಕೂ ಕಡಿಮೆ ಎಂಬುದು ಅಘಾತಕಾರಿ ಬೆಳವಣಿಗೆ"

ಪ್ರಧಾನ ಮಂತ್ರಿ ಮನಮೋಹನ ಸಿಂಗ್,
ರಾಜ್ಯಗಳ ಕಲ್ಯಾಣ ಮತ್ತು ಸಾಮಾಜಿಕ ನ್ಯಾಯ
ಸಚಿವರುಗಳ ಸಮ್ಮೇಳನ ಉದ್ಘಾಟನೆ ಸಮಾರಂಭದಲ್ಲಿ
ನವದೆಹಲಿ, 07/09/2009

# 20 ವರ್ಷಗಳಲ್ಲಿ ಕಾಯ್ದೆಯ ಅನುಷ್ಠಾನಕ್ಕೆ–ಬಜೆಟ್ ಮತ್ತು ಖರ್ಚುವೆಚ್ಚ

> *"ನೈತಿಕತೆ ಮತ್ತು ಆರ್ಥಿಕತೆ ಇವೆರಡರ ಸಂಘರ್ಷದಲ್ಲಿ, ಎಂದಿಗೂ ಆರ್ಥಿಕತೆಗೆ ಗೆಲುವಾಗುತ್ತದೆ. ಪ್ರಬಲವಾಗಿ ದಬಾಯಿಸಿದರಷ್ಟೇ ಪಟ್ಟಭದ್ರ ಹಿತಾಸಕ್ತಿಗಳು ಜಾಗ ಖಾಲಿ ಮಾಡಿವೆಯೇ ಹೊರತಾಗಿ ಸ್ವ–ಇಚ್ಛೆಯಿಂದ ಎಂದಿಗೂ ಹೊರ ಹೋಗಿಲ್ಲ."*
>
> ಡಾ. ಬಿ.ಆರ್. ಅಂಬೇಡ್ಕರ್

## I. ಅಳತೆಗೋಲು?

- ನಾಗರಿಕ ಮತ್ತು ರಾಜಕೀಯ ಹಕ್ಕುಗಳನ್ನು ಸಾಕಾರಗೊಳಿಸಲು ಅಗತ್ಯವಿರುವ ಕಾಯ್ದೆ ಅಥವಾ ಇತರೆ ಕ್ರಮಕ್ಕಾಗಿ(ಶಾಸಕಾಂಗ, ನ್ಯಾಯಾಂಗ, ಆಡಳಿತ, ಶೈಕ್ಷಣಿಕ ಮತ್ತು ಇತರೆ) ಪ್ರತಿ ರಾಜ್ಯವೂ ಸೂಕ್ತ ಕ್ರಮ ಕೈಗೊಳ್ಳತಕ್ಕದ್ದು *(ಐಸಿಸಿಪಿಆರ್ ಅನುಚ್ಛೇದ 2(2))*
- ದೌರ್ಜನ್ಯಕ್ಕೊಳಗಾಗಿ ನೊಂದವರಿಗೆ ಪರಿಹಾರ ಮತ್ತು ಪುನರ್ವಸತಿಯನ್ನು ಕಲ್ಪಿಸಲು ಅಗತ್ಯವಿರುವ ಹಣಕಾಸಿಗೆ ರಾಜ್ಯ ಸರ್ಕಾರವು ಸೂಕ್ತ ಅವಕಾಶವನ್ನು ಮಾಡಿಕೊಳ್ಳತಕ್ಕದ್ದು. *(ದೌರ್ಜನ್ಯ ತಡೆ ಕಾಯ್ದೆಯ ನಿಯಮ 14)*

### 1. ಪರಿಶಿಷ್ಟರಿಗೆ ಭೌತಿಕ ಮತ್ತು ಆರ್ಥಿಕ ಭದ್ರತೆ: ರಾಷ್ಟ್ರದ ಪ್ರಮುಖ ಉದ್ದೇಶಗಳಲ್ಲಿ ಒಂದು

ಯೋಜನಾ ಆಯೋಗದಂತೆ ವಿಶೇಷ ಘಟಕ ಯೋಜನೆಗಳು(SCP) ಮತ್ತು ಪ.ಪಂಗಡಗಳವರಿಗೆ ಉಪ–ಯೋಜನೆಯ(TSP) ಉದ್ದೇಶ ಈ ಕೆಳಕಂಡಂತಿವೆ:

- ಬಡತನ ಮತ್ತು ನಿರುದ್ಯೋಗವನ್ನು ಗಣನೀಯ ಪ್ರಮಾಣದಲ್ಲಿ ತಗ್ಗಿಸುವುದು;
- ಪರಿಶಿಷ್ಟರು ಅಭಿವೃದ್ಧಿ ಯೋಜನೆಗಳ ಮೂಲಕ ಸುಸ್ಥಿರ ಅಭಿವೃದ್ಧಿಯನ್ನು ಸಾಧಿಸಲು ಅವರಿಗೆ ಪ್ರಯೋಜನ ಆಗುವ, ಆದಾಯ ತರುವ ಸೊತ್ತುಗಳನ್ನು ಸೃಷ್ಟಿಸುವುದು.
- ಪ.ಜಾತಿ ಮತ್ತು ಪ.ಪಂಗಡಗಳವರಿಗೆ ಯಥೇಚ್ಛ ಪ್ರಮಾಣದಲ್ಲಿ ಶಿಕ್ಷಣ ಮತ್ತು ಆರೋಗ್ಯ ಸೇವೆಗಳನ್ನು ನೀಡುವುದರ ಮೂಲಕ ಮಾನವ ಸಂಪನ್ಮೂಲ ಅಭಿವೃದ್ಧಿ ಸಾಧಿಸುವುದು.
- ಎಲ್ಲಾ ರೀತಿಯ ಶೋಷಣೆ ಮತ್ತು ದಬ್ಬಾಳಿಕೆ ವಿರುದ್ಧ ದೈಹಿಕ ಮತ್ತು ಹಣಕಾಸಿನ ಭದ್ರತೆಗೆ ಅನುಕೂಲ ಮಾಡುವುದು.

*(ಯೋಜನಾ ಆಯೋಗ, ವಿಶೇಷ ಘಟಕ ಉಪಯೋಜನೆ: ಅನುಷ್ಠಾನಕ್ಕೆ ಮಾರ್ಗದರ್ಶನಗಳು, ನವದೆಹಲಿ, 2006, ಪುಟ–48)*

***ದೌರ್ಜನ್ಯ ತಡೆ ಕಾಯ್ದೆ ಅನುಷ್ಠಾನಕ್ಕೆ ಅಗತ್ಯವಿರುವ ಹಣಕಾಸು ವಿತರಣೆಗೆ ರಾಜಕೀಯ ವ್ಯವಸ್ಥೆ:***

***ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಸಚಿವಾಲಯ***

ದುರ್ಬಲ ಮತ್ತು ಶೋಷಿತರನ್ನು(ಪರಿಶಿಷ್ಟರು, ಇತರೆ ಹಿಂದುಳಿದ ವರ್ಗ, ಅಂಗವಿಕಲರು, ಹಿರಿಯ ನಾಗರಿಕರು, ನಿಂದನೆಯಿಂದ ನೊಂದವರು) ಪೂರ್ಣವಾಗಿ ಸಬಲೀಕರಣಗೊಳಿಸುವ ಕೆಲಸವನ್ನು ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಸಚಿವಾಲಯಕ್ಕೆ ವಹಿಸಿಕೊಡಲಾಗಿದೆ. ಸಚಿವಾಲಯಕ್ಕಿರುವ ಹಲವು ಜವಾಬ್ದಾರಿಗಳಲ್ಲಿ ಮೇಲೆ ತಿಳಿಸಿರುವ ನಾಲ್ಕು ಉದ್ದೇಶಗಳಲ್ಲಿ ಒಂದನ್ನು ಸಾಕಾರಗೊಳಿಸುವ ಜವಾಬ್ದಾರಿಯೂ ಸಚಿವಾಲಯದ್ದಾಗಿದೆ. ಅದೆಂದರೆ **ಎಲ್ಲಾ ರೀತಿಯ ಶೋಷಣೆ ಮತ್ತು ದಬ್ಬಾಳಿಕೆ ವಿರುದ್ಧ ದೈಹಿಕ ಮತ್ತು ಆರ್ಥಿಕ ಭದ್ರತೆಯ ವ್ಯವಸ್ಥೆ ಕಲ್ಪಿಸುವುದು**. ಅದರಂತೆ, ಪಿ.ಸಿ.ಆರ್ ಮತ್ತು ದೌರ್ಜನ್ಯ ತಡೆ ಕಾಯ್ದೆಗಳ ಅನುಷ್ಠಾನದ ಮೇಲ್ವಿಚಾರಣೆ ಮಾಡುವ ಜವಾಬ್ದಾರಿಯೂ ಸಚಿವಾಲಯದ್ದಾಗಿದೆ. ಈ ಕಾರ್ಯಕ್ಕಾಗಿ, ಕೇಂದ್ರದ ವಿಶೇಷ ನೆರವಿನ (SCA) ಮೂಲಕ ರಾಜ್ಯ ಸರ್ಕಾರಗಳಿಗೆ 50:50ರ ಪ್ರಮಾಣದಲ್ಲಿ ಹಾಗೂ ಕೇಂದ್ರಾಡಳಿತ ಪ್ರದೇಶಗಳಿಗೆ 100% ರಷ್ಟು ಆರ್ಥಿಕ ನೆರವು ನೀಡಲಾಗುತ್ತದೆ.

***ಯಾವ ಕಾರ್ಯಗಳಿಗೆ ಆರ್ಥಿಕ ನೆರವು ನೀಡಲಾಗುವುದು?***

ಪಿ.ಸಿ.ಆರ್ ಕಾಯ್ದೆ 1955 ಮತ್ತು ದೌರ್ಜನ್ಯ ತಡೆ ಕಾಯ್ದೆಯನ್ನು ಅನುಷ್ಠಾನಗೊಳಿಸಲು ರಾಜ್ಯ ಸರ್ಕಾರ ಮತ್ತು ಕೇಂದ್ರಾಡಳಿತ ಪ್ರದೇಶಗಳಿಗೆ ಕೆಳಕಂಡ ಉದ್ದೇಶಗಳಿಗೆ ವಿಶೇಷ ನೆರವು ನೀಡಲಾಗುತ್ತದೆ:

(i) ಪ.ಜಾತಿ/ಪಂಗಡಗಳವರ ರಕ್ಷಣಾ ಕೋಶ ಮತ್ತು ವಿಶೇಷ ಪೋಲೀಸ್ ಠಾಣೆಗಳ ಬಲವರ್ಧನೆ ಮತ್ತು ಕೆಲಸ ಕಾರ್ಯಕ್ಕೆ ಹಾಗೂ ಕಾಲಕಾಲಕ್ಕೆ ಸಮೀಕ್ಷೆ ಮತ್ತು ಅಸ್ಪೃಶ್ಯತೆ/ದೌರ್ಜನ್ಯ ಪೀಡಿತ ಪ್ರದೇಶಗಳನ್ನು ಗುರುತಿಸುವ ಕಾರ್ಯ.

(ii) ವಿಶೇಷ ನ್ಯಾಯಾಲಯಗಳ ಸ್ಥಾಪನೆ ಹಾಗೂ ಕಾರ್ಯನಿರ್ವಹಣೆ–ಪ್ರಾಸಿಕ್ಯೂಷನ್, ಸಮಿತಿಗಳು ಹಾಗೂ ವಿಶೇಷ ನ್ಯಾಯಾಲಯಗಳ ಕೆಲಸ ಕಾರ್ಯಗಳ ಮೇಲುಸ್ತುವಾರಿಗೆ ಅಧಿಕಾರಿಗಳ ನೇಮಕ.

(iii) ದೌರ್ಜನ್ಯದಲ್ಲಿ ನೊಂದವರಿಗೆ ಪರಿಹಾರ ಮತ್ತು ಪುನರ್ವಸತಿ–ಹಾಗೆಯೇ ನೊಂದವರಿಗೆ/ಅವಲಂಬಿತರಿಗೆ ದೌರ್ಜನ್ಯ ಪ್ರಕರಣದ ತನಿಖೆ ನಡೆಸುವಾಗ ಕನಿಷ್ಠ ವೇತನ, ಔಷಧ, ವಿಶೇಷ ವೈದ್ಯಕೀಯ ಶುಲ್ಕ, ರಕ್ತದಾನ, ಕಾನೂನು ನೆರವು ಇವುಗಳಿಗೆ ಆದ ಖರ್ಚುಗಳ ಮರುಪಾವತಿ.

(iv) ಜಾಗೃತಿ ಮೂಡಿಸುವ ಕಾರ್ಯ.

*(ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಸಚಿವಾಲಯದ ವರದಿ, ಪ.ಜಾತಿ/ಪಂಗಡಗಳ (ದೌರ್ಜನ್ಯ ತಡೆ) ಕಾಯ್ದೆಯ ಕಲಂ 21(4)ರ ಅನ್ವಯ 2006ನೇ ಸಾಲಿಗೆ, ನವದೆಹಲಿ, 2006, ಪುಟ 12)*

## 2. ಕೇಂದ್ರ ಸರ್ಕಾರದ ಬಜೆಟ್?

ಪಿ.ಸಿ.ಆರ್ ಕಾಯ್ದೆಯನ್ನು ಜಾರಿಗೊಳಿಸುವ ಸಲುವಾಗಿ ಕೇಂದ್ರದ ವಿಶೇಷ ನೆರವನ್ನು ಪರಿಚಯಿಸಲಾಗಿತ್ತು. 1990–91ರಲ್ಲಿ ಈ ನೆರವನ್ನು ದೌರ್ಜನ್ಯ ತಡೆ ಕಾಯ್ದೆಯ ಅನುಷ್ಠಾನಕ್ಕೆ ವಿಸ್ತರಿಸಲಾಯಿತು. ಕೇಂದ್ರ ಸರ್ಕಾರ ಈ ವಿಶೇಷ ನೆರವಿನ ಮೂಲಕ ರಾಜ್ಯ ಮತ್ತು ಕೇಂದ್ರಾಡಳಿತ ಸರ್ಕಾರಗಳಿಗೆ ಬಿಡುಗಡೆ ಮಾಡಿರುವ ಆರ್ಥಿಕ ನೆರವು ವಿವರ ಇಲ್ಲಿದೆ. ಇದು ಮೂರು ಪಂಚ ವಾರ್ಷಿಕ ಯೋಜನೆಗಳ ಅವಧಿಗೆ, ಅಂದರೆ 9ರಿಂದ(1997–2002) 11ರ ಪಂಚವಾರ್ಷಿಕ ಯೋಜನೆಗೆ. ಇಲ್ಲಿ 11ನೇ ಯೋಜನೆಯಡಿಯಲ್ಲಿ ಬರುವ 2010–11 ಮತ್ತು 2011–12 ಅವಧಿಗೆ ವಿವರ ಸಿಕ್ಕಿಲ್ಲ.

**9ನೇ ಪಂಚವಾರ್ಷ್ಷಿಕ ಯೋಜನೆ: ಅಲಾಟ್ ಮಾಡಿದ ಒಟ್ಟು ಹಣ: ರೂ 113.49 ಕೋಟಿಗಳು**

(1) 1997–1998: ರೂ. 16.47 ಕೋಟಿಗಳು
(2) 1998–1999: ರೂ. 15.50 ಕೋಟಿಗಳು
(3) 1999–2000:ರೂ. 24.94 ಕೋಟಿಗಳು
(4) 2000–2001:ರೂ. 27.08 ಕೋಟಿಗಳು
(5) 2001–2002:ರೂ 29.50 ಕೋಟಿಗಳು

**10ನೇ ಪಂಚವಾರ್ಷಿಕ ಯೋಜನೆ: ಅಲಾಟ್ ಮಾಡಿದ ಒಟ್ಟು ಹಣ: ರೂ 185.85 ಕೋಟಿಗಳು**

(6) 2002–2003: ರೂ. 40.17 ಕೋಟಿಗಳು
(7) 2003–2004: ರೂ. 36.37 ಕೋಟಿಗಳು
(8) 2004–2005: ರೂ 34.57 ಕೋಟಿಗಳು
(9) 2005–2006: ರೂ 38.31 ಕೋಟಿಗಳು
(10) 2006–2007: ರೂ 36.43 ಕೋಟಿಗಳು

**11ನೇ ಪಂಚವಾರ್ಷಿಕ ಯೋಜನೆ: ಅಲಾಟ್ ಮಾಡಿದ ಒಟ್ಟು ಹಣ: ಈ ತನಕ ರೂ 178 ಕೋಟಿಗಳು**

(11) 2007–2008: ರೂ. 39.00 ಕೋಟಿಗಳು
(12) 2008–2009: ರೂ. 39.00 ಕೋಟಿಗಳು
(13) 2009–2010:ರೂ. 42.00 ಕೋಟಿಗಳು
(14) 2010–2011: ರೂ. 58.00 ಕೋಟಿಗಳು
(15) 2011–2012: ರೂ...............................

*[(1) ಮಾನವ ಹಕ್ಕುಗಳ ರಾಷ್ಟ್ರೀಯ ಆಯೋಗ, ಪ.ಜಾತಿಯವರ ವಿರುದ್ಧ ದೌರ್ಜನ್ಯ ತಡೆಯ ವರದಿ, 2002, ಪುಟ 48; (2) ಪ.ಜಾತಿ ಮತ್ತು ಪ.ಪಂಗಡಗಳ ರಾಷ್ಟ್ರೀಯ ಆಯೋಗದ ಆರನೇ ವರದಿ 1999–2000 ಮತ್ತು 2000–01, ನವದೆಹಲಿ, ಪುಟ 214; (3) ಕೇಂದ್ರಾಡಳಿತ ಬಜೆಟ್ ಖರ್ಚುವೆಚ್ಚ, ಸಂಪುಟ 2, 2002–03, 2007–08 ಮತ್ತು 2008–09; (4) ಎನ್.ಪಾಲ್ ದಿವಾರ್ ಮತ್ತು ಅಭಯ್ ಕುಮಾರ್, ಎ ನೆಗ್ಲೆಕ್ಟೆಡ್ ಕಾಂಪೋನೆಂಟ್, ಕಾಂಬಾಟ್ ಲಾ ಸಂಪುಟ 8 ಸಂಚಿಕೆ 5 ಮತ್ತು 6, 2009, ಪುಟ–ಪ್ಯಾರಾ: 53–4)*

## 3. ಕೇಂದ್ರದ ವಿಶೇಷ ನೆರವಿನ ಬಜೆಟ್–ನಿಜಾಂಶ?

**ಸಿಹಿ ಸುದ್ದಿ............ಈಚಿನ ವರ್ಷಗಳಲ್ಲಿ ಹೆಚ್ಚು ಹಣ ನೀಡಲಾಗುತ್ತಿದೆ!**

ಪರಿಶಿಷ್ಟ ಜಾತಿ ಮತ್ತು ಪಂಗಡಗಳವರ ರಾಷ್ಟ್ರೀಯ ಆಯೋಗದಂತೆ (ಆರನೇ ವರದಿ *1999–2000* ಮತ್ತು *2000–2001*, ಪ್ಯಾರಾ *9.5.2*), ಕೇಂದ್ರ ಸರ್ಕಾರ ನೀಡುತ್ತಿರುವ ಸಹಾಯಧನ ಕಳೆದ ನಾಲ್ಕು ವರ್ಷಗಳಲ್ಲಿ ಗಣನೀಯ ಪ್ರಮಾಣದಲ್ಲಿ ಹೆಚ್ಚಳ ಕಂಡಿದೆ. ಆದರೆ ಅಂಕಿ ಅಂಶಗಳನ್ನು ಗಮನಿಸಿದರೆ ಕಳೆದ ನಾಲ್ಕು ವರ್ಷಗಳಲ್ಲಿ ನೀಡಿರುವ ಹೆಚ್ಚಳವು ಹೇಳಿಕೊಂಡಿರುವಂತೆ ಗಣನೀಯ ಪ್ರಮಾಣದಲ್ಲಿ ಇಲ್ಲ! ಮೂರೂ ಪಂಚವಾರ್ಷಿಕ ಯೋಜನೆಗಳನ್ನು ಹೋಲಿಸಿದರೆ ನಂತರದ ಎರಡು ಯೋಜನೆಗಳಲ್ಲಿ ನೀಡಿರುವ ಹಣಕಾಸು ನೆರವಿನ ಪ್ರಮಾಣ ಒಂದಿಷ್ಟು ಉತ್ತಮವಾಗಿವೆ.

**ಕಹಿ ಸುದ್ದಿ..............ಬಜೆಟ್ ವಿತರಣೆಯಲ್ಲಿ ಕೊರತೆ!**

ಇಲ್ಲಿ, ಹಣಕಾಸು ನೆರವು ಹೆಚ್ಚಾಗಿದೆ ಅಥವಾ ಕಡಿಮೆಯಾಗಿದೆ ಎಂಬುದು ಮುಖ್ಯವಲ್ಲ. ಹೀಗೆ ಹೆಚ್ಚಿಸಿದ ಹಣಕಾಸು ನೆರವಿನಿಂದಾಗಿ ದೌರ್ಜನ್ಯ ತಡೆ ಕಾಯ್ದೆ ಪರಿಣಾಮಕಾರಿಯಾಗಿ ಅನುಷ್ಠಾನಗೊಂಡಿದೆಯೇ ಎನ್ನುವುದು ಮುಖ್ಯ. ಇತ್ತೀಚೆಗೆ ಪರಿಶಿಷ್ಟರಲ್ಲಿ ಹಕ್ಕುಗಳ ಬಗ್ಗೆ ಜಾಗೃತಿ ಮೂಡಿರುವ ಹಿನ್ನೆಲೆಯಲ್ಲಿ ದೌರ್ಜನ್ಯಗಳು ಹೆಚ್ಚಾಗಿದೆ ಎನ್ನುವುದನ್ನು ಗಮನಿಸಿದರೆ ಹಣಕಾಸಿನ ನೆರವು ಕಡಿಮೆ ಎಂಬುದನ್ನು ಅಲ್ಲಗಳೆಯಲಾಗುವುದಿಲ್ಲ.

**2006–07 ಸಾಲಿಗೆ ಕೇಂದ್ರ ಸರ್ಕಾರ ನೀಡಿದ ಹಣಕಾಸು ನೆರವು ಈ ರೀತಿಯಾಗಿದೆ:**

- ಕಾಯ್ದೆಯ ಪರಿಣಾಮಕಾರಿ ಅನುಷ್ಠಾನಕ್ಕಾಗಿ ಕೇಂದ್ರದ ವಿಶೇಷ ನೆರವಿನಿಂದ 36.4 ಕೋಟಿ ರೂಪಾಯಿಗಳನ್ನು ನೀಡಲಾಗಿದೆ. ಅಂದರೆ ಪ್ರಸ್ತಾವಿಸಿದ ಹಣಕಾಸು ನೆರವಿನ ಶೇ. 50%. ಹೀಗೆ ನೀಡಿರುವ ಹಣಕ್ಕೆ ರಾಜ್ಯ ಸರ್ಕಾರಗಳು ಅಷ್ಟೇ ಮೊತ್ತದ ತಮ್ಮ ಪಾಲನ್ನು ಸೇರಿಸಿ ಖರ್ಚು ಮಾಡಬೇಕಿದೆ. ಅಂದರೆ ಸುಮಾರು 71 ಕೋಟಿ ರೂಪಾಯಿ ಈ ಉದ್ದೇಶಕ್ಕಾಗಿ ಖರ್ಚು ಮಾಡಲಾಗುತ್ತದೆ, ಈ ಖರ್ಚಿನಲ್ಲಿ ನ್ಯಾಯಾಲಯಗಳನ್ನು ನಿರ್ವಹಿಸುವ ವೆಚ್ಚವೂ ಸೇರಿದೆ.
- ಈ ನೆರವಿನಲ್ಲಿ ನ್ಯಾಯಾಲಯದ ನಿರ್ವಹಣೆಗೆ ಶೇ.40% ಖರ್ಚು ಆಗುತ್ತದೆ ಎಂದು ಅಂದಾಜು ಮಾಡಿದರೆ, ದೌರ್ಜನ್ಯದಲ್ಲಿ ನೊಂದವರಿಗೆ ಪರಿಹಾರವಾಗಿ ನೀಡಲು ಶೇ. 60% ಹಣ ಉಳಿಯುತ್ತದೆ, ಅಂದರೆ ಅದು 43 ಕೋಟಿ ರೂಪಾಯಿಗಳು. ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಸಚಿವಾಲಯದ 2008–09ರ ವಾರ್ಷಿಕ ವರದಿಯಲ್ಲಿ ತಿಳಿಸಿರುವಂತೆ 2007ರ ಸಾಲಿನಲ್ಲಿ ಪರಿಹಾರ ನೀಡಬೇಕಾದಂತಹ 29,825 ಪ್ರಕರಣಗಳು ನ್ಯಾಷನಲ್ ಕ್ರೈಮ್ ದಾಖಲೆಗಳ ಬ್ಯೂರೋದಲ್ಲಿ ದಾಖಲಾಗಿವೆ. ಈ ಪ್ರಕರಣಗಳಿಗೆ ಗೈಡ್‌ಲೈನ್ಸ್ ಪ್ರಕಾರ ಕನಿಷ್ಠ ಪ್ರಯಾಣ, ವೈದ್ಯಕೀಯ ಭತ್ಯೆ ಮತ್ತು ಕನಿಷ್ಠ ವೇತನ ಲೆಕ್ಕ ಹಾಕಿದರೆ, ಅದೇ ಸುಮಾರು 90 ಕೋಟಿ ರೂಪಾಯಿಗಳಷ್ಟಾಗುತ್ತದೆ. ಆದರೆ, ಪ್ರಸ್ತಾವಿತ 71 ಕೋಟಿ ರೂಪಾಯಿಗಳಲ್ಲಿ ಇದಕ್ಕಾಗಿ ಮೀಸಲಿಟ್ಟಿರುವ ಹಣ ಕೇವಲ 43 ಕೋಟಿ ರೂಪಾಯಿಗಳು. ದೌರ್ಜನ್ಯಕ್ಕೆ ಬಲಿಯಾಗಿ ನೊಂದವರಿಗೆ ಕೊಡಮಾಡಬೇಕಿರುವ ಒಟ್ಟು ಹಣದಲ್ಲಿ ಇದು ಶೇಕಡಾ 50ಕ್ಕಿಂತಲು ಕಡಿಮೆಯಾಗಿದೆ.

## 20 ವರ್ಷಗಳಲ್ಲಿ ಕಾಯ್ದೆಯ ಅನುಷ್ಠಾನಕ್ಕೆ-ಬಜೆಟ್ ಮತ್ತು ಖರ್ಚುವೆಚ್ಚ

**ಖೋತಾ ಬಜೆಟ್‌ಗೆ ತಲೆದಂಡ?**
**ದೌರ್ಜನ್ಯದಲ್ಲಿ ನೊಂದವರು ಮತ್ತು ಅವರ ಸಾಕ್ಷಿಗಳಿಗೆ ನ್ಯಾಯದ ನಿರಾಕರಣೆ!**

- ಸಾಕಷ್ಟು ಹಣಕಾಸು ನೆರವು ದೊರೆತು ಸಮರ್ಪಕವಾಗಿ ಬಳಸಿದ್ದರೆ, ಪ್ರತ್ಯೇಕ ವಿಶೇಷ ನ್ಯಾಯಾಲಯಗಳು ಕೇವಲ ಒಂಭತ್ತು ರಾಜ್ಯದಲ್ಲಿ ಮಾತ್ರವಲ್ಲದೆ ದೇಶದೆಲ್ಲೆಡೆ ಸ್ಥಾಪಿತವಾಗುತ್ತಿದ್ದವು.
- ಸಾಕಷ್ಟು ಹಣಕಾಸು ನೆರವು ದೊರೆತು ಸಮರ್ಪಕವಾಗಿ ಬಳಸಿದ್ದರೆ, ದೌರ್ಜನ್ಯದಲ್ಲಿ ನೊಂದ ಎಲ್ಲರಿಗೆ ಪೂರ್ಣ ಪರಿಹಾರ ಹಾಗೂ ಆಗಿರುವ ನಷ್ಟ ತುಂಬಿಕೊಡಬಹುದಿತ್ತು. ಈಗಿನಂತೆ ಅರೆಬರೆ ಪರಿಹಾರದ ಸ್ಥಿತಿ ಇರುತ್ತಿರಲಿಲ್ಲ.
- ಸಾಕಷ್ಟು ಹಣಕಾಸು ನೆರವು ದೊರೆತಿದ್ದು ಸಮರ್ಪಕವಾಗಿ ಬಳಸಿದ್ದರೆ, ಒಂದು ಭಾಗ ಹಣದಲ್ಲಿ ಪರಿಶಿಷ್ಟರಿಗೆ ದೌರ್ಜನ್ಯ ತಡೆ ಕಾಯ್ದೆ ಕುರಿತು ಜಾಗೃತಿಗೊಳಿಸಲು ಸಾಧ್ಯವಾಗುತ್ತಿತ್ತು ಅಲ್ಲವೇ? ಇದರಿಂದ ವಿಶೇಷ ಘಟಕ ಅಭಿಯೋಜನೆ ಮತ್ತು ಬುಡಕಟ್ಟು ಜನಾಂಗಗಳ ಉಪ-ಯೋಜನೆಯಲ್ಲಿ ತಿಳಿಸಲಾಗಿರುವ ಉದ್ದೇಶಗಳೂ ಈಡೇರುತ್ತಿದ್ದವು, ಅಲ್ಲವೇ?
- ಜನರು ಜಾಗೃತಿಗೊಂಡಿದ್ದರೆ, ಹಲವು ಆಯೋಗ ಮತ್ತು ಸಮಿತಿಗಳು ಕಾಯ್ದೆಯ ಬಗ್ಗೆ ಜಾಗೃತಿಯಿಲ್ಲದೆ ಅನೇಕ ಪ್ರಕರಣಗಳು ದೌರ್ಜನ್ಯ ಕಾಯ್ದೆಯಲ್ಲಿ ದಾಖಲಾಗುವುದಿಲ್ಲ ಎಂದು ಏಕೆ ಹೇಳುತ್ತವೆ?
- ಸಾಕಷ್ಟು ಹಣಕಾಸು ನೆರವು ದೊರೆತಿದ್ದು ಸಮರ್ಪಕವಾಗಿ ಬಳಸಿದ್ದರೆ, ದೇಶದ ಅರ್ಧದಷ್ಟು ರಾಜ್ಯಗಳು ಮಾತ್ರ ಪರಿಶಿಷ್ಟರ ರಕ್ಷಣಾ ಕೋಶವನ್ನು ಸ್ಥಾಪಿಸಿವೆ ಹಾಗೂ ಕೇವಲ ನಾಲ್ಕು ರಾಜ್ಯಗಳು ಮಾತ್ರ ವಿಶೇಷ ಪೋಲೀಸ್ ಠಾಣೆಗಳನ್ನು ಸ್ಥಾಪಿಸಿವೆ?

**ರಾಜ್ಯ/ಕೇಂದ್ರಾಡಳಿತ ಪ್ರದೇಶಗಳು ಈ ವಿಶೇಷ ನೆರವನ್ನು ತೃಪ್ತಿಕರವಾಗಿ ಬಳಸಿಕೊಂಡಿರುವರೇ?**
**ಕೇಂದ್ರದ ವಿಶೇಷ ನೆರವು: ರಾಜ್ಯ/ಕೇಂದ್ರಾಡಳಿತ ಪ್ರದೇಶಗಳಿಗೆ ನ್ಯಾಯಬದ್ಧವಾಗಿ ನೆರವು ಸಿಕ್ಕಿದೆಯೇ?**

- ಆಯಾ ರಾಜ್ಯ/ಕೇಂದ್ರಾಡಳಿತ ಪ್ರದೇಶದಲ್ಲಿ ***ದೌರ್ಜನ್ಯದ ಪ್ರಮಾಣ ಹಾಗೂ*** ಬಿಡುಗಡೆ ಮಾಡಲಾಗಿರುವ ನೆರವಿಗೆ ಹೋಲಿಕೆಯೇ ಸಾಧ್ಯವಿಲ್ಲ
- ***ಕೆಲವು ರಾಜ್ಯಗಳು ಕಡಿಮೆ ನೆರವು ಪಡೆಯುತ್ತಿವೆ:*** ಕೆಲವು ರಾಜ್ಯಗಳಲ್ಲಿ ಪ.ಜಾತಿ[ಮತ್ತು ಪ.ಪಂಗಡ]ಯವರ ಶೇಕಡಾವಾರು ಜನಸಂಖ್ಯೆ ಹೆಚ್ಚಿದ್ದು ಅವರ ಮೇಲೆ ದೌರ್ಜನ್ಯಗಳು ಆಗುತ್ತಿದ್ದರೂ ಕೇಂದ್ರದಿಂದ ಕಡಿಮೆ ನೆರವನ್ನು ಪಡೆದುಕೊಳ್ಳುತ್ತಿವೆ. ಇದರಲ್ಲಿ ಬಿಹಾರ, ಒರಿಸ್ಸಾ, ಪಂಜಾಬ್, ಪಶ್ಚಿಮ ಬಂಗಾಲ, ಅಸ್ಸಾಮ್, ಹಿಮಾಚಲ ಪ್ರದೇಶ ಇತ್ಯಾದಿ ರಾಜ್ಯಗಳು ಸೇರುತ್ತವೆ. ಇವುಗಳಲ್ಲಿ ವಿಶೇಷವಾಗಿ ಪಶ್ಚಿಮ ಬಂಗಾಳ, ದೇಶದಲ್ಲೇ ಅತ್ಯಂತ ಹೆಚ್ಚು ಪ.ಜಾತಿಗಳ ಜನರಿರುವ ಎರಡನೇ ರಾಜ್ಯ. ಪ್ರಾಯಶ: ಪ್ರಕರಣಗಳನ್ನು ದಾಖಲು ಮಾಡದೇ ಇರುವುದೇ ಹೆಚ್ಚಿನ ಪ್ರಮಾಣದ ನೆರವನ್ನು ಪಡೆಯದಿರಲು ಕಾರಣವೆಂದು ತೋರುತ್ತದೆ. ಇದರಿಂದ ಕಾಯ್ದೆಯ ಅನುಷ್ಠಾನದಲ್ಲಿ ಉದಾಸೀನತೆ ಪ್ರದರ್ಶಿಸಲಾಗುತ್ತಿದೆ ಎಂದು ಖಂಡಿತವಾಗಿ ನಿರ್ಧರಿಸಬಹುದು.
- ***ನೆರವಿನಲ್ಲಿ ಅಸಮತೋಲನ:*** ಮಧ್ಯಪ್ರದೇಶ, ಗುಜರಾತ್ ಮತ್ತು ಕರ್ನಾಟಕದಂತಹ ಕೆಲವು ರಾಜ್ಯ ಹೊರತುಪಡಿಸಿದರೆ ಎಲ್ಲಾ ರಾಜ್ಯಗಳಿಗೆ ನೆರವಿನ ಮೊತ್ತದಲ್ಲಿ ಅಸಮತೋಲನತೆ ಎದ್ದುಕಾಣುತ್ತದೆ. ಪ್ರಾಯಶ: ಕೆಲವು ವರ್ಷಗಳವರೆಗೆ ಈ ಮೊದಲು ನೀಡಿದ್ದ ನೆರವನ್ನು ತೃಪ್ತಿಕರವಾಗಿ ಬಳಸದೇ ಇದ್ದ ಕಾರಣಕ್ಕೆ ವಿತರಣೆಯಲ್ಲಿ ಅಸಮತೋಲನತೆ ಇರಬೇಕು. ಹಾಗಿದ್ದರೆ, ಕಾಯ್ದೆ ಅನುಷ್ಠಾನಗೊಳಿಸುವಲ್ಲಿ ಉದಾಸೀನತೆ ಕಾಣುತ್ತದೆ.
- ***ಕೆಲವು ರಾಜ್ಯಗಳಿಗೆ ಕೆಲ ಬಾರಿ ಹೆಚ್ಚು ನೆರವು:*** ಉತ್ತರಪ್ರದೇಶ, ತಮಿಳುನಾಡು ಮತ್ತು ರಾಜಸ್ಥಾನ ರಾಜ್ಯಗಳು ಈ ರೀತಿ ಹೆಚ್ಚು ನೆರವು ಪಡೆಯುತ್ತಿರುವ ರಾಜ್ಯಗಳು. ಇದಕ್ಕೆ ಸ್ಪಷ್ಟ ಕಾರಣ ಏನೆಂದು ತಿಳಿದಿಲ್ಲ. ಇದರಿಂದ ಬೇರೆ ರಾಜ್ಯಗಳಿಗಿಂತ ಈ ರಾಜ್ಯಗಳಲ್ಲಿ ಕಾಯ್ದೆಯ ಅನುಷ್ಠಾನ ಉತ್ತಮವಾಗಿದೆ ಎಂದೂ ಕಾಣುವುದಿಲ್ಲ. ಮಧ್ಯಪ್ರದೇಶ ರಾಜ್ಯವೊಂದು ಮಾತ್ರ ಸತತವಾಗಿ ಹೆಚ್ಚಿನ ನೆರವನ್ನು ಕೇಳುತ್ತಿದೆ.
- ***ಪರಿಶಿಷ್ಟರು ಹೆಚ್ಚಾಗಿರುವ ಮತ್ತು ಹೆಚ್ಚು ದೌರ್ಜನ್ಯಗಳಾಗುತ್ತಿರುವ ರಾಜ್ಯಗಳು ಕಡಿಮೆ ನೆರವು ಬೇಡುತ್ತಿವೆ.*** ಇದರಿಂದ ಕಾಯ್ದೆಯ ಅನುಷ್ಠಾನದಲ್ಲಿ ಆಸಕ್ತಿ ಇಲ್ಲವೆಂದೇ ಹೇಳಬೇಕು.

*(ಮಾನವ ಹಕ್ಕುಗಳ ರಾಷ್ಟ್ರೀಯ ಆಯೋಗ, ಪ.ಜಾತಿಯವರ ವಿರುದ್ಧ ದೌರ್ಜನ್ಯ ತಡೆ ವರದಿ, ನವದೆಹಲಿ, 2002, ಪುಟ 49)*

ದೌರ್ಜನ್ಯಗಳು ಪ್ರಗತಿಯನ್ನು ಮಸುಕುಗೊಳಿಸುತ್ತವೆ. ಆರ್ಥಿಕ ಪ್ರಗತಿಗಿಂತಲೂ ದುರ್ಬಲರಿಗೆ ನ್ಯಾಯ ಒದಗಿಸುವುದು ನಮ್ಮೆಲ್ಲರ ಆದ್ಯತೆಯ ಕೆಲಸವಾಗಬೇಕು. ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿಯಲ್ಲಿ ಪರಿಶಿಷ್ಟರಿಗೆ ಸಮಾನತೆ ಸೃಜಿಸುವುದು ಹಾಗೂ ಅವರ ನಾಗರಿಕ, ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಹಕ್ಕುಗಳ ಚ್ಯುತಿಯದಾಗ ಮತ್ತು ದೌರ್ಜನ್ಯಗಳಾದಾಗ ಅವುಗಳನ್ನು ಅವರೇ ನಿಭಾಯಿಸುವಂತೆ ಮಾಡುವುದು ನಮ್ಮ ಧ್ಯೇಯವಾಗಬೇಕು. ಈವರೆಗೆ ದಬ್ಬಾಳಿಕೆಗೆ ಒಳಗಾಗಿದ್ದವರಿಗೆ ಮುಕ್ತ ಸಮಾಜ ಮತ್ತು ಎಲ್ಲರನ್ನೂ ಒಳಗೊಂಡ ಪ್ರಜಾಪ್ರಭುತ್ವ ಎಲ್ಲರಿಗೆ ಕಡ್ಡಾಯವಾಗಿ ದೊರಕುವಂತಹ ಮತ್ತು ನಾವೆಲ್ಲರೂ ಅದನ್ನು ಅನುಭವಿಸುವ ಒಂದು ಅಭಿವೃದ್ಧಿಯ ಪಥ ನಮ್ಮದಾಗಬೇಕು"

ಪ್ರಧಾನ ಮಂತ್ರಿ ಮನಮೋಹನ ಸಿಂಗ್,
ಅಂತರರಾಜ್ಯ-ಕೌನ್ಸಿಲ್‌ಗಳ 10ನೇ ಸಭೆಯಲ್ಲಿ
ಮಾಡಿದ ಭಾಷಣ, ನವದೆಹಲಿ, 2006

# 9 ಕಾಯ್ದೆಯ ಹೊರಗುಳಿದ ದುರ್ಬಲರ ಮೇಲಿನ ದೌರ್ಜನ್ಯ-ಸ್ಥಿತಿಗತಿ

## I ಅಳತೆಗೋಲು?

- ಜೀವಿಸುವುದು ಪ್ರತಿಯೊಬ್ಬರ ಜನ್ಮಸಿದ್ಧ ಹಕ್ಕು. ಈ ಹಕ್ಕನ್ನು ಯಾರೊಬ್ಬರೂ ದಬ್ಬಾಳಿಕೆಯಿಂದ ಕಸಿದುಕೊಳ್ಳಬಾರದು *(ICCPR ಅನುಚ್ಛೇದ 6(1) ಸಂವಿಧಾನ, ಅನುಚ್ಛೇದ 21)*
- ಪ್ರತಿಯೊಬ್ಬರಿಗೂ ಅಭಿವ್ಯಕ್ತಿ ಸ್ವಾತಂತ್ರ ಮತ್ತು ಜೀವಕ್ಕೆ ಭದ್ರತೆಯ ಹಕ್ಕು ಇರುತ್ತದೆ. *(ಅನುಚ್ಛೇದ 9(1) ಐಸಿಸಿಪಿಆರ್; ಅನುಚ್ಛೇದ 21 ಸಂವಿಧಾನ)*
- ವ್ಯಕ್ತಿಯೊಬ್ಬರ ಹಕ್ಕು ಉಲ್ಲಂಘನೆಯಾದರೆ, ಅವರಿಗೆ ಪರಿಣಾಮಕಾರಿ ಪರಿಹಾರ ಸಿಗಬೇಕು ಮತ್ತು ಆ ಪರಿಹಾರ ಮಾನ್ಯತೆಯಿರುವ ನ್ಯಾಯಾಂಗ, ಆಡಳಿತ ಅಥವಾ ಶಾಸನಗಳ ಮೂಲಕ ಸಿಗುವಂತಿರಬೇಕು. *(ಅನುಚ್ಛೇದ 2(3) ಐಸಿಸಿಪಿಆರ್)*
- ಅಲ್ಪಸಂಖ್ಯಾತರು ಪಕ್ಷಪಾತಕ್ಕೆ ಒಳಗಾಗದೆ, ಕಾನೂನಿನ ಮುಂದೆ ಪೂರ್ಣ ಸ್ವಾತಂತ್ರದಿಂದ ತಮ್ಮ ಮಾನವ ಹಕ್ಕುಗಳು ಹಾಗೂ ಮೂಲಭೂತ ಸ್ವಾತಂತ್ರವನ್ನು ಸವಿಯುವಂತಾಗಲು ರಾಜ್ಯ ಕ್ರಮ ಕೈಗೊಳ್ಳಬೇಕು. *(ಅನುಚ್ಛೇದ 4(1) ಅಲ್ಪಸಂಖ್ಯಾತರ ಹಕ್ಕುಗಳ ಘೋಷಣೆ)*
- ದೇಶದ ಗಡಿಯೊಳಗೆ ಯಾವುದೇ ವ್ಯಕ್ತಿಗೆ ಕಾನೂನಿನ ಸಮಾನತೆಯನ್ನು ಹಾಗೂ ಕಾನೂನಿನ ಸಮಾನ ರಕ್ಷಣೆಯನ್ನು ನಿರಾಕರಿಸಬಾರದು *(ಅನುಚ್ಛೇದ 14, ಸಂವಿಧಾನ)*
- ರಾಜ್ಯಗಳು ತನ್ನ ಪ್ರಜೆಗಳಿಗೆ ಧರ್ಮ, ಜಾತಿ, ಜನಾಂಗ, ಲೈಂಗಿಕತೆ ಅಥವಾ ಹುಟ್ಟಿದ ಸ್ಥಳದ ಆಧಾರದಲ್ಲಿ ಪಕ್ಷಪಾತವನ್ನು ಮಾಡಬಾರದು *(ಅನುಚ್ಛೇದ 15(1) ಭಾರತದ ಸಂವಿಧಾನ)*

## II. ನಿಜಾಂಶ?

ದೇಶದ ಜನಸಂಖ್ಯೆಯಲ್ಲಿ ನಾಲ್ಕನೇ ಒಂದು ಭಾಗ ಪರಿಶಿಷ್ಟರಿದ್ದಾರೆ: ಪ.ಜಾತಿಯವರು 16% ಹಾಗೂ ಪ.ಪಂಗಡಗಳವರು 8%.

ಪರಿಶಿಷ್ಟರು ಹೆಚ್ಚಿನ ಆರ್ಥಿಕ ಮತ್ತು ಸಾಮಾಜಿಕ ಸಮಸ್ಯೆಗಳನ್ನು ಇಂದಿಗೂ ಎದುರಿಸುತ್ತಿದ್ದಾರೆ. ತಮ್ಮ ದೈನಂದಿನ ಬದುಕಿನಲ್ಲಿ ಅಪಮಾನ, ಅವಹೇಳನೆ, ನ್ಯಾಯ ನಿರಾಕರಣೆ ಹಾಗೂ ಹಿಂಸಾತ್ಮಕ ದೌರ್ಜನ್ಯವನ್ನೂ ಎದುರಿಸುತ್ತಿದ್ದಾರೆ. ಒಟ್ಟಾರೆ, ಪರಿಶಿಷ್ಟರು ಇಂದಿಗೂ ಹೆಚ್ಚಿನ ಬಡತನದ ಬೇಗೆಯಿಂದ ಬಳಲುತ್ತಿದ್ದಾರೆ, ವಿದ್ಯಾಭ್ಯಾಸ ಕೊರತೆ, ಉದ್ಯೋಗಾವಕಾಶದ ಮಿತಿ ಮತ್ತು ಸಾರ್ವಜನಿಕ ಬದುಕಿನ ಎಲ್ಲಾ ವಲಯದಲ್ಲಿ ಪರಿಶಿಷ್ಟರು ಕಡೆಗಣಿಸಲ್ಪಟ್ಟಿದ್ದಾರೆ. ಹೀಗೆ ಎಲ್ಲಾ ರೀತಿಯಿಂದ ವಂಚಿತರಾಗಿರುವ ಪರಿಶಿಷ್ಟರು ವಿವಿಧ ರೀತಿಯ ಹಿಂಸೆಗಳಿಗೂ ಒಳಗಾಗುತ್ತಾರೆ.

ಬಡತನ ಮತ್ತು ಸೌಲಭ್ಯಗಳಿಂದ ವಂಚಿತರಾಗಿರುವುದರ ಜೊತೆಗೆ, ದೇಶಾದ್ಯಂತ ಆದಿವಾಸಿಗಳನ್ನು ಬಾಧಿಸುವ ಸಮಸ್ಯೆಗಳಲ್ಲಿ ಸ್ವಯಂ-ಆಡಳಿತದ ಅನುಪಸ್ಥಿತಿ, ಅರಣ್ಯ ಮತ್ತು ಎಕ್ಸೈಸ್ ನೀತಿಗಳ ನಕಾರಾತ್ಮಕ ಪರಿಣಾಮಗಳು, ಭೂಮಿಯ ಪರಭಾರೆ, ಬಲಾತ್ಕಾರದ ಎತ್ತಂಗಡಿ ಮತ್ತು ನಿರಾಶ್ರಿತ ಸ್ಥಿತಿ, ವಿವಿಧ ರೀತಿಯ ಶೋಷಣೆಗಳು, ಸಾಂಸ್ಕೃತಿಕ ಅವಹೇಳನ ಮತ್ತು ರಾಜಕೀಯ ವಲಯದಲ್ಲಿ ಅವಕಾಶವಿಲ್ಲದಿರುವ ಸನ್ನಿವೇಶಗಳು ಹೆಚ್ಚು. ಷೆಡ್ಯೂಲ್ ಪ್ರದೇಶಗಳಲ್ಲಿ ರಕ್ಷಣೆ ನಿಯಂತ್ರಣ ಅನುಪಸ್ಥಿತಿ, ಸಾಲ ವ್ಯವಸ್ಥೆ ಇಲ್ಲದ ಕಾರಣ ಬಡ್ಡಿಸಾಲ ನೀಡುವವರ ಮೇಲಿನ ಅವಲಂಬನೆ, ಇದರಿಂದ ಭೂಮಿ ಕಳೆದುಕೊಳ್ಳುವ ಪರಿಸ್ಥಿತಿ ಹಾಗೂ ರಾಜ್ಯದ ಪ್ರಾಧಿಕಾರಗಳಿಂದ ಪದೇ ಪದೇ ಆಗುವ ಹಿಂಸೆ, ಅವರನ್ನು ಬಾಧಿಸುವ ಇತರೆ ಸಮಸ್ಯೆಗಳು. *(ಭಾರತೀಯ ಯೋಜನಾ ಆಯೋಗ, ಮೂಲಭೂತವಾದಿಗಳಿಂದ ಬಾಧಿತವಾಗಿರುವ ಪ್ರದೇಶಗಳಲ್ಲಿ ಅಭಿವೃದ್ಧಿಗೆ ಸವಾಲುಗಳು-ತಜ್ಞರ ತಂಡದ ವರದಿ, 2008, ಪುಟಪ್ಯಾರಾ 3-9)*

### 1. ಷೆಡ್ಯೂಲ್ ಪ್ರದೇಶದ ಹೊರಗೆ-ದೌರ್ಜನ್ಯ ಮತ್ತು ಪರಿಶಿಷ್ಟ ಅಂತರಾಜ್ಯ ವಲಸಿಗರು

#### (i) ಷೆಡ್ಯೂಲ್ ಪ್ರದೇಶಗಳಿಂದ ಹೊರಗಿರುವ ಪರಿಶಿಷ್ಟ ಪಂಗಡಗಳವರು.

**ಐದನೇ ಷೆಡ್ಯೂಲ್**

ಮೇಲಿನ ವಾಸ್ತವತೆ ಗಮನದಲ್ಲಿಟ್ಟು ಸಂವಿಧಾನದ *(ಅನುಚ್ಛೇದ 244(1)* ಐದನೇ ಷೆಡ್ಯೂಲನ್ನು ಅರ್ಥ ಮಾಡಿಕೊಳ್ಳಬೇಕಿದೆ. ಈ ಅನುಚ್ಛೇದ ಪರಿಶಿಷ್ಟ ಪ್ರದೇಶ ಮತ್ತು ಪರಿಶಿಷ್ಟ ಪಂಗಡಗಳವರ ಆಡಳಿತ ಹಾಗೂ ನಿಯಂತ್ರಣವನ್ನು ತಿಳಿಸುತ್ತದೆ ಮತ್ತು ಬುಡಕಟ್ಟುಗಳವರ ಭೂಮಿ, ಸಂಪನ್ಮೂಲ, ಪರಂಪರೆ, ಪದ್ಧತಿ, ಸಂಸ್ಕೃತಿ ಮತ್ತು ಸಂಪ್ರದಾಯಿಕ ಆಚರಣೆಗಳಿಗೆ ವಿಶೇಷ ರಕ್ಷಣೆ ನೀಡುವುದು ಇದರ ಮುಖ್ಯ ಗುರಿಯಾಗಿದೆ. ಈ ಸಂಪ್ರದಾಯಗಳಿಗೆ ಆಂತರಿಕ ಸಮಸ್ಯೆಗಳಾದ ಬಡತನ, ಅನಕ್ಷರತೆ ಮತ್ತು ಬಾಹ್ಯ ಶಕ್ತಿಗಳಾದ ಪ.ಪಂಗಡೇತರರ ವಲಸೆ, ಖಾಸಗಿ ಆರ್ಥಿಕತೆಯಿಂದ ದಾಳಿಯ ಈ ವಿಶೇಷ ರಕ್ಷಣೆ ಅಗತ್ಯವಿದೆ. ಸಧ್ಯಕ್ಕೆ ಒಂಭತ್ತು ರಾಜ್ಯಗಳಲ್ಲಿರುವ ಕೆಲವು ಪ.ಪಂಗಡ ಮತ್ತು ಬುಡಕಟ್ಟು ಪ್ರದೇಶಗಳನ್ನು ಮಾತ್ರ ಈ ಷೆಡ್ಯೂಲ್ ಗುರುತಿಸಲಾಗಿದೆ. ಈ ರಾಜ್ಯಗಳು: ಆಂಧ್ರಪ್ರದೇಶ, ಜಾರ್ಖಂಡ, ಗುಜರಾತ್, ಹಿಮಾಚಲ ಪ್ರದೇಶ, ಮಹಾರಾಷ್ಟ್ರ ಮಧ್ಯಪ್ರದೇಶ, ಛತೀಸಘಡ, ಒರಿಸ್ಸಾ ಮತ್ತು ರಾಜಸ್ಥಾನ.

**ಷೆಡ್ಯೂಲ್ ಪ್ರದೇಶಗಳಿಂದ ಹೊರಗಿರುವ ಪರಿಶಿಷ್ಟ ಪಂಗಡಗಳು:**

- ಐದನೇ ಷೆಡ್ಯೂಲ್ ಪ್ರಕಾರ ಮಾನ್ಯಗೊಳ್ಳದ ರಾಜ್ಯ/ಕೇಂದ್ರಾಡಳಿತ ಪ್ರದೇಶದಲ್ಲಿ ವಾಸಿಸುವ ಪರಿಶಿಷ್ಟ ಪಂಗಡಗಳವರು ಸಂಖ್ಯೆಯಲ್ಲಿ ಕಡಿಮೆಯೆಂಬ ಕಾರಣಕ್ಕೆ ಐದನೇ ಷೆಡ್ಯೂಲ್‌ರನ್ವಯ ದೊರೆಯುವ ವಿಶೇಷ ಸೌಲಭ್ಯ, ಹಕ್ಕು ಮತ್ತು ರಕ್ಷಣೆ ಸಿಗುವುದಿಲ್ಲ.
- ಇವರ ವಿಚಾರದಲ್ಲಿ ಮತ್ತೊಂದು ದುರಂತವೆಂದರೆ, ಷೆಡ್ಯೂಲ್ ಪಟ್ಟಿಯಲ್ಲಿ ಆ ಸಮುದಾಯ ಸೇರಿಸಿಲ್ಲವಾದರೆ, ದೌರ್ಜನ್ಯ ತಡೆ ಕಾಯ್ದೆಯಡಿ ರಕ್ಷಣೆ ಅಥವಾ ಐದನೇ ಷೆಡ್ಯೂಲ್‌ರನ್ವಯ ಸೌಲಭ್ಯಗಳು ಸಿಗುವುದಿಲ್ಲ.
- ಹೆಚ್ಚಿನದಾಗಿ ರಾಜ್ಯಗಳು ದೌರ್ಜನ್ಯ ತಡೆ ಕಾಯ್ದೆಯ ಅನುಷ್ಠಾನ ಸರಿಯಾಗಿ ಅಥವಾ ಮಾಡದೇ ಇರುವ ಹಿನ್ನೆಲೆಯಲ್ಲಿ ಈ ಪ.ಪಂಗಡಗಳವರು ಐದನೇ ಷೆಡ್ಯೂಲ್ ಪ್ರದೇಶ ಅಥವಾ ಷೆಡ್ಯೂಲ್ ಪಟ್ಟಿಯಲ್ಲಿ ಇಲ್ಲದಿದ್ದರೆ ಪಕ್ಷಪಾತ ಅಥವಾ ದೌರ್ಜನ್ಯಕ್ಕೆ ಸುಲಭವಾಗಿ ತುತ್ತಾಗುತ್ತಾರೆ.

### (ii) ತಮ್ಮ ರಾಜ್ಯ ತೊರೆದು ಬೇರೆ ರಾಜ್ಯಗಳಿಗೆ ವಲಸೆ ಹೋಗಿರುವ ಪ.ಜಾತಿ/ಪಂಗಡಗಳವರ ಸ್ಥಿತಿ

ಸಂವಿಧಾನದನ್ವಯ ಜಾತಿ ಅಥವಾ ಪಂಗಡ ರಾಜ್ಯ ಅಥವಾ ಕೇಂದ್ರಾಡಳಿತ ಪ್ರದೇಶಕ್ಕೆ ಅನುಗುಣವಾಗಿ ಗುರುತಿಸಲ್ಪಡುತ್ತದೆ. ಹಾಗೆ, ಒಬ್ಬರು ರಾಜ್ಯ/ಕೇಂದ್ರಾಡಳಿತ ಪ್ರದೇಶದಲ್ಲಿ ಹುಟ್ಟಿದರೆ, ಆ ಪ್ರದೇಶದಲ್ಲಿ ಘೋಷಿಸಿರುವ ಜಾತಿ/ಪಂಗಡದಲ್ಲಿ ವ್ಯಕ್ತಿಯ ತಂದೆ ಸೇರಿದ್ದರೆ, ಆಗ ಆ ವ್ಯಕ್ತಿಗೆ ಜಾತಿ ಪ್ರಮಾಣ ಪತ್ರ ಸಿಗುತ್ತದೆ. ಆ ವ್ಯಕ್ತಿ ಬೇರೊಂದು ರಾಜ್ಯಕ್ಕೆ ವಲಸೆ ಹೋದರೆ ಶಿಕ್ಷಣ ಸಂಸ್ಥೆಗಳಲ್ಲಿ, ಸರ್ಕಾರಿ ನೌಕರಿಗೆ ಇನ್ನಿತ್ಯಾದಿ ಕೆಲ ಉದ್ದೇಶಗಳಿಗೆ ವ್ಯಕ್ತಿಯ ಪರಿಶಿಷ್ಟ ಸ್ಥಾನ ಕಳೆದುಕೊಳ್ಳುತ್ತಾರೆ. ಆದರೆ, ದೌರ್ಜನ್ಯ ತಡೆ ಕಾಯ್ದೆಯಲ್ಲಿ ಸಂವಿಧಾನಾತ್ಮಕವಾಗಿ ದೊರೆತ ರಕ್ಷಣೆ ಎಲ್ಲಾ ರಾಜ್ಯ/ಕೇಂದ್ರಾಡಳಿತ ಪ್ರದೇಶದಲ್ಲಿ ದೊರೆಯುತ್ತದೆ. ಮತ್ತೊಂದು ಮಾತಿನಲ್ಲಿ ಹೇಳುವುದಾದರೆ ಯಾವುದೇ ರಾಜ್ಯ/ಕೇಂದ್ರಾಡಳಿತ ಪ್ರದೇಶದಲ್ಲಿ ಆ ವ್ಯಕ್ತಿಯ ಜಾತಿ/ಪಂಗಡ ಘೋಷಣೆಯಾಗಿದ್ದರೆ, ದೇಶದ ಯಾವುದೇ ಮೂಲೆಯಲ್ಲಿ ದೌರ್ಜನ್ಯ ತಡೆ ಕಾಯ್ದೆಯಡಿ ರಕ್ಷಣೆ ದೊರೆಯುತ್ತದೆ. ಒಂದು ವೇಳೆ ಅವನು/ಅವಳು ವಾಸಿಸುತ್ತಿರುವ ಪ್ರದೇಶದಲ್ಲಿ ಆತನ/ಆಕೆಯ ಜಾತಿಯು ಪ.ಜಾತಿ/ಪಂಗಡವೆಂದು ಘೋಷಣೆಯಾಗದಿದ್ದರೂ ಈ ರಕ್ಷಣೆ ಸಿಗುತ್ತದೆ.

**ವಲಸೆ ಹೋಗಿರುವ ಪರಿಶಿಷ್ಟರ ಮೇಲೆ ಪರಿಣಾಮ**

- ಬಡತನ, ಮೆಗಾ ಯೋಜನೆಗಳಿಂದಾಗಿ ಸ್ಥಳಾಂತರ, ಅಥವಾ ತೀವ್ರವಾದಿ ಮತ್ತು ಪೋಲೀಸ್ ಯಾ ಭದ್ರತಾ ಪಡೆಗಳ ನಡುವೆ ಉಂಟಾಗುವ ಘರ್ಷಣೆಯ ಕಾರಣಗಳಿಗೆ ವಲಸೆ ಹೋಗುವ ಬುಡಕಟ್ಟು ಜನಾಂಗದ ಜನರು ಯಾವ ರಾಜ್ಯ/ಕೇಂದ್ರಾಡಳಿತ ಪ್ರದೇಶಕ್ಕೆ ಹೋಗುತ್ತಾರೋ, ನಿಜಸ್ಥಿತಿಯಲ್ಲಿ ಅಂತಹ ಪ್ರದೇಶಗಳಲ್ಲಿ ದೌರ್ಜನ್ಯ ತಡೆ ಕಾಯ್ದೆಯಲ್ಲಿ ಸಾಮಾನ್ಯವಾಗಿ ದೊರೆಯಬೇಕಿರುವ ರಕ್ಷಣೆ ದೊರೆಯುವುದಿಲ್ಲ.
- ಒಂದು ರಾಜ್ಯ/ಕೇಂದ್ರಾಡಳಿತ ಪ್ರದೇಶದಲ್ಲಿ ಪರಿಶಿಷ್ಟ ಜಾತಿಗಳ ಪಟ್ಟಿಯಲ್ಲಿ ಸೇರಿರುವ ಪ.ಜಾತಿಯವರು ಕಾರಣಾಂತರಗಳಿಗೆ ಮತ್ತೊಂದು ರಾಜ್ಯ/ಕೇಂದ್ರಾಡಳಿತ ಪ್ರದೇಶಕ್ಕೆ ವಲಸೆ ಹೋದರೆ, ದೌರ್ಜನ್ಯ ತಡೆ ಕಾಯ್ದೆಯಲ್ಲಿ ಖಂಡಿತವಾಗಿಯೂ ದೊರೆಯಬೇಕಿರುವ ರಕ್ಷಣೆ ಸಿಗದಿರುವ ಅಪಾಯ ಹೆಚ್ಚು.

### ಪರಿಶಿಷ್ಟರ ಮೇಲೆ ದೌರ್ಜನ್ಯಕ್ಕೆ: ಸಂದರ್ಭಗಳು, ಕಾರಣಗಳು ಮತ್ತು ಅದರ ಪರಿಣಾಮಗಳು

*(i) ಶಸ್ತ್ರ ಸಂಘರ್ಷ ಮತ್ತು ಬಲವಂತದ ವಲಸೆ*

- ದೇಶದಲ್ಲಿ ಈಗ 28 ರಲ್ಲಿ 21 ರಾಜ್ಯಗಳು ಆಂತರಿಕ ಶಸ್ತ್ರ ಸಂಘರ್ಷಣೆಯಿಂದ ಬಾಧಿಸಲ್ಪಟ್ಟಿವೆ.
- ಜಮ್ಮು ಮತ್ತು ಕಾಶ್ಮೀರದ ಹೊರತು ಆಂತರಿಕ ಶಸ್ತ್ರ ಘರ್ಷಣೆಗಳಿಂದ ಬಾಧಿತವಾಗಿರುವ ಬೇರೆ ಪ್ರದೇಶಗಳಲ್ಲಿ ಹೆಚ್ಚಾಗಿ ಮೂಲನಿವಾಸಿಗಳು ಮತ್ತು ಬುಡಕಟ್ಟು ಜನಾಂಗದವರು (ಆದಿವಾಸಿಗಳು) ವಾಸಿಸುತ್ತಿದ್ದಾರೆ.
- ಭದ್ರತಾ ಪಡೆ ಹಾಗೂ ಎದುರಾಳಿ ಶಸ್ತ್ರ ತಂಡ, ಎರಡೂ ಕಡೆ ಆದಿವಾಸಿಗಳ ಮಾನವ ಹಕ್ಕುಗಳಿಗೆ ಚ್ಯುತಿಯಾಗುತ್ತದೆ. ಇಲ್ಲಿ ಭದ್ರತಾ ಪಡೆಗಳಿಗೆ *ಶಸ್ತ್ರ ಸಿಬ್ಬಂಧಿ (ವಿಶೇಷ ಅಧಿಕಾರಗಳ) ಕಾಯ್ದೆ 1958, ಸೆಕ್ಷನ್ 6 ಮತ್ತು ಐ.ಪಿ.ಸಿ ಸೆಕ್ಷನ್ 197ರಡಿ* ಪ್ರತಿರಕ್ಷಣೆ ಸಿಕ್ಕಿದೆ. ಇದರಿಂದ ಆದಿವಾಸಿಗಳ ಮಾನವ ಹಕ್ಕು ಮತ್ತಷ್ಟು ಚ್ಯುತಿಯಾಗುತ್ತವೆ.
- ಮಾಧ್ಯಮದಲ್ಲಿ ವರದಿಯಾದಂತೆ ಮಾವೋವಾದಿ ಮತ್ತು ಸಲ್ವಾ ಜುಡುಂ ಕಾರ್ಯಕರ್ತರ ನಡುವಿನ ಹಿಂಸೆಯಿಂದ ತಪ್ಪಿಸಿಕೊಳ್ಳಲು ಛತ್ತೀಸಘಡದ ಬಸ್ತಾರ್ ಮತ್ತು ಬಿಜಾಪುರ ಜಿಲ್ಲೆಗಳಿಂದ ಜನವರಿ–ಜೂನ್ 2008ರ ಅವಧಿಗೆ ಸುಮಾರು 1.2 ಲಕ್ಷ ಗುಟ್ಟಿ ಕೋಯ ಬುಡಕಟ್ಟು ಜನಾಂಗದವರು ಆಂಧ್ರಪ್ರದೇಶದ ಖಮ್ಮಂ ಜಿಲ್ಲೆಗೆ ವಲಸೆ ಹೋಗಿದ್ದಾರೆ.

*(IWGIA and AITPN, 'India: No democracy for those living on the margins', Universal Periodic Review Special, Vol II, No. 04, 2007, www.aitpn.org/IRO/vol-II/Issue-04/story02.html; Asian Indigenous & Tribal Peoples Network, The State of India's Indigenous and Tribal Peoples 2009, New Delhi, 2009, p.4)*

*(ii) ಪ್ರಬಲರ ದಬ್ಬಾಳಿಕೆ*

"ದಲಿತರು ಮತ್ತಿತರ ಹಿಂದುಳಿದ ವರ್ಗಗಳವರು ಸಾಮಾಜಿಕ ದಬ್ಬಾಳಿಕೆಯಲ್ಲಿ ನಲುಗುವ ಕಾರಣವನ್ನೇ ನಕ್ಸಲ್ ಹೋರಾಟದಲ್ಲಿ ಬಳಸಲಾಗುತ್ತದೆ."
*(ಭಾರತೀಯ ಯೋಜನಾ ಆಯೋಗ, ತೀವ್ರವಾದಿಗಳಿಂದ ಬಾಧಿಸಲ್ಪಟ್ಟ ಪ್ರದೇಶಗಳಲ್ಲಿ ಅಭಿವೃದ್ಧಿಯ ಸವಾಲುಗಳು–ತಜ್ಞರ ತಂಡದ ವರದಿ, 2008, ಪುಟ. 51)*

*(iii) ಪರಿಶಿಷ್ಟರ ಮೇಲೆ ಪ್ರಬಲ ಜಾತಿಯವರ ದೌರ್ಜನ್ಯ*

ಬಡತನ ಮತ್ತು ಭೂಮಿ ಪರಭಾರೆ ಕಾರಣಗಳ ಜೊತೆಯಲ್ಲಿ ಪರಿಶಿಷ್ಟರ ಮೇಲಿನ ದೌರ್ಜನ್ಯವು ನಕ್ಸರನ್ನು ಆಕರ್ಷಿಸುತ್ತದೆ. ಇದು 1991ರಲ್ಲಿ ಗುಂಟೂರಿನ ಸುಂಡೂರು ದಲಿತ ನರಮೇಧವಾಗಿರಬಹುದು ಅಥವಾ 22 ಜನವರಿ 2004ರಂದು ಕರ್ನೂಲು ಜಿಲ್ಲೆಯ ಕೊಯಿಲುಕುಂಟ್ಲಾದ ದಲಿತ ನಾಯಕ, ಬಿರುಸಾಂತಿ ಓಬಣ್ಣನ ಕೊಲೆ ಸಂದರ್ಭದಲ್ಲಿ ದುಷ್ಕರ್ಮಿಗಳು ಶಿಕ್ಷೆಗೊಳಗಾಗದೇ ತಪ್ಪಿಸಿಕೊಳ್ಳುತ್ತಾರೆ. *(Asian Centre fro Human Rights, Review embargoed for 13 October 2004, Review/42/2004, 222.achrweb.org/Review/2004/42-04.htm)*

*(iv) ಹಿಂಸೆಯ ಅಡಕತ್ತರಿ–ಭೂಮಾಲಿಕ ಮತ್ತು ರಾಜ್ಯದ ಘರ್ಷಣೆ*

"ದಂಗೆ/ನಕ್ಸಲ್ ಪೀಡಿತ ಪ್ರದೇಶಗಳಲ್ಲಿ ಪರಿಶಿಷ್ಟರು ಎರಡು ಕಡೆಯಿಂದ ಹಿಂಸೆ ಅನುಭವಿಸುತ್ತಾರೆ. ಒಂದು, ಹಿಂದೂ ಜಾತಿಯ ಭೂಮಾಲಿಕರ (ಖಾಸಗಿ ಮಿಲಿಟರಿ) ದೌರ್ಜನ್ಯ, ಮತ್ತೊಂದೆಡೆ ಸರ್ಕಾರ. ಇವೆರಡೂ ಹಿಂಸೆಗಳಲ್ಲಿ ಸಾಮ್ಯವಿದೆ, ಆದರೆ ಅವುಗಳಿಗಿರುವ ಪ್ರೇರಣೆ ಹಾಗೂ ಕಾರ್ಯವಿಧಾನ ಬೇರೆ. ಸಾರ್ವಜನಿಕ ಶಾಂತಿಯನ್ನು ಕಾಪಾಡಲು ದಂಗೆಕೋರ/ನಕ್ಸಲ್ ಸಂಘಟನೆ ಮತ್ತು ಪ್ರಬಲ ಜಾತಿಯ/ವರ್ಗಗಳ ಖಾಸಗಿ ಮಿಲಿಟರಿ ಪಡೆಗಳನ್ನು ಸರ್ಕಾರ ನಿಷೇಧಿಸಿದೆ. ಇದರಿಂದ ಶೋಧನಾ ಕಾರ್ಯಗಳಲ್ಲಿ ತೊಡಗುವ ಪೋಲೀಸರು ಮತ್ತು ಭದ್ರತಾ ಪಡೆಗಳು ಕೋಂಬಿಂಗ್ ಕಾರ್ಯಾಚರಣೆ ನಡೆಸುತ್ತಾರೆ. ಆದರೆ, ಇಲ್ಲಿ ಡಬಲ್ ಗೇಮ್ ಆಡುತ್ತಾರೆ. ಪರಿಶಿಷ್ಟರು ವಾಸಿಸುವ ಕೇರಿಗಳಲ್ಲಿ ಶೋಧನೆ ನಡೆಸುವಾಗ ಹಿಂಸೆಯ ಮಕ್ಕಳಂತೆ ವರ್ತಿಸುತ್ತಾರೆ. ಪರಿಶಿಷ್ಟರ ಮಹಿಳೆಯರನ್ನು ಹೇಳತೀರದ ಅವಮಾನಕ್ಕೊಳಪಡಿಸುತ್ತಾರೆ. ಇದೇ ಪಡೆಗಳು ಮೇಲ್ಜಾತಿ ಕೇರಿಯಲ್ಲಿ ಹೀಗೆ ವರ್ತಿಸುವುದಿಲ್ಲ. ಒತ್ತಡವಿದ್ದಾಗ ಹಾಗೆ ಮಾಡಿದರೂ ಸೌಮ್ಯವಾಗಿರುತ್ತಾರೆ ಮತ್ತು ಮಹಿಳೆಯರೊಟ್ಟಿಗೆ ಅಸಭ್ಯವಾಗಿ ವರ್ತಿಸುವುದಿಲ್ಲ. *(ಮಾನವ ಹಕ್ಕುಗಳ ರಾಷ್ಟ್ರೀಯ ಆಯೋಗ, ಪ.ಜಾತಿಯವರ ಮೇಲಿನ ದೌರ್ಜನ್ಯ ತಡೆಯ ವರದಿ, ನವದೆಹಲಿ, 2002, ಪುಟ 115)*

***(v) ಕಾನೂನು ಸುವ್ಯವಸ್ಥೆ ಮತ್ತು ಅಭಿವೃದ್ಧಿಯಲ್ಲಿ ಬಲಹೀನತೆ***

ದೇಶದ ಮಧ್ಯಭಾಗದ ಆಂಧ್ರಪ್ರದೇಶ, ಒರಿಸ್ಸಾ, ಛತ್ತೀಸಘಡ, ಮಧ್ಯಪ್ರದೇಶ, ಜಾರ್ಖಂಡ ಮತ್ತು ಮಹಾರಾಷ್ಟ್ರದ ಕೆಲವು ಭಾಗಗಳಲ್ಲಿ ಅಶಾಂತಿಯ ಪರಿಸ್ಥಿತಿ ಇದೆ. ಅಶಾಂತಿ ಮೂಡಿರುವ ಈ ಪ್ರದೇಶಗಳಲ್ಲಿ ರಾಜ್ಯಾಡಳಿತ ಅತ್ಯಂತ ಕಡಿಮೆ ಪ್ರಮಾಣದಲ್ಲಿ ಕಾರ್ಯ ನಿರ್ವಹಿಸುತ್ತದೆ. ಅಭಿವೃದ್ಧಿ ಮತ್ತು ಕಾನೂನು ಸುವ್ಯವಸ್ಥೆಯ ವಿಚಾರದಲ್ಲೂ ಸರ್ಕಾರದ ಪಾತ್ರ ಕಡಿಮೆ. ವಾಸ್ತವವಾಗಿ ಈ ಪ್ರದೇಶಗಳಲ್ಲಿ ಒಂದು ರೀತಿಯ ನಿರ್ವಾತ ವಾತಾವರಣ ಏರ್ಪಟ್ಟಿದೆ, ಶಸ್ತ್ರ ಸಂಘಟನೆಗಳು ಈ ಸನ್ನಿವೇಶವನ್ನು ತಮ್ಮ ಅನುಕೂಲಕ್ಕೆ ಬಳಕೆ ಮಾಡಿಕೊಳ್ಳುತ್ತವೆ, ಈ ಸಂದರ್ಭದಲ್ಲಿ ತೋರಿಕೆಯ ರಕ್ಷಣೆ ಮತ್ತು ನ್ಯಾಯವನ್ನು ಸ್ಥಳೀಯ ಜನರಿಗೆ ಈ ಸಂಘಟನೆಗಳು ನೀಡುತ್ತವೆ. *(ಭಾರತೀಯ ಯೋಜನಾ ಆಯೋಗ, ತೀವ್ರವಾದಿಗಳಿಂದ ಬಾಧಿಸಲ್ಪಟ್ಟ ಪ್ರದೇಶಗಳಲ್ಲಿ ಅಭಿವೃದ್ಧಿಯ ಸವಾಲುಗಳು–ತಜ್ಞರ ತಂಡದ ವರದಿ, 2008, ಪುಟ. 80)*

**ಸಂಕ್ಷಿಪ್ತವಾಗಿ:**

⇒ ಒಂದುಕಡೆ ಸೇನೆ ಮತ್ತು ಪೋಲೀಸರ ತಿಕ್ಕಾಟ ಮತ್ತೊಂದೆಡೆ ತೀವ್ರವಾದಿಗಳು. ಇವೆರಡೂ ಬಣಗಳ ಗೊಂದಲ ಘರ್ಷಣೆಯ ಕವಲುದಾರಿಯಲ್ಲಿ ನಿಂತಿರುವ ಪರಿಶಿಷ್ಟರು ಅಡಕತ್ತರಿಯಲ್ಲಿ ಸಿಕ್ಕ ಅಡಿಕೆಕಾಯಿಗಳಾಗಿದ್ದಾರೆ. ಈ ಸನ್ನಿವೇಶಗಳಲ್ಲಿ ಮಾನವ ಹಕ್ಕುಗಳ ರಕ್ಷಣೆಗಿಂತಲೂ ಕಾನೂನು ಸುವ್ಯವಸ್ಥೆ ಹೆಚ್ಚು ಮಹತ್ವ ಪಡೆಯುತ್ತದೆ, ಪರಿಣಾಮವಾಗಿ ದೌರ್ಜನ್ಯವೆಸಗುವ ರಾಜ್ಯಾಶ್ರಯದ ದುಷ್ಕರ್ಮಿಗಳು ದೌರ್ಜನ್ಯ ತಡೆ ಕಾಯ್ದೆಯ ಹಿಡಿತದಿಂದ ತಪ್ಪಿಸಿಕೊಳ್ಳುತ್ತಾರೆ.

⇒ ದುರ್ಬಲರನ್ನು ರಾಜ್ಯ ದಬ್ಬಾಳಿಕೆಯಿಂದ ಮುಕ್ತಿಗೊಳಿಸುವ ನೆಪದಲ್ಲಿ ಪರಿಶಿಷ್ಟರ ಮೇಲೆ ತೀವ್ರವಾದಿಗಳು ದೌರ್ಜನ್ಯವೆಸಗಿದಾಗ ದೌರ್ಜನ್ಯ ತಡೆ ಎಂಬ ಕಾಯ್ದೆ ಇದೆ ಎನ್ನುವುದು ಮರೆತುಕೊಳ್ಳಬೇಕು. ಕಾಯ್ದೆ ಅನುಷ್ಠಾನಗೊಳಿಸಬೇಕಿರುವ ರಾಜ್ಯಾಡಳಿತವು ತೀವ್ರವಾದಿಗಳನ್ನು ಹತೋಟಿಗೆ ತರುವಲ್ಲಿ ಬಲಹೀನತೆ ಪ್ರದರ್ಶಿಸುವುದಲ್ಲದೆ ದೌರ್ಜನ್ಯ ತಡೆ ಕಾಯ್ದೆಯನ್ನು ಅನುಷ್ಠಾನಗೊಳಿಸುವಲ್ಲಿ ವಿಫಲರಾದಾಗ ಪರಿಸ್ಥಿತಿ ಮತ್ತಷ್ಟು ಹದಗೆಡುತ್ತದೆ.

⇒ ಮೇಲೆ ತಿಳಿಸಿದ ಘರ್ಷಣೆಯ ಎರಡು ಸನ್ನಿವೇಶದ ಹೊರತಾಗಿ ಕೆಲವು ಬುಡಕಟ್ಟು ಜನಾಂಗದವರನ್ನು ಪರಿಶಿಷ್ಟರ ಪಟ್ಟಿಯಲ್ಲಿ ಸೇರಿಸದಿರುವ, ಬೇರೆ ರಾಜ್ಯ/ಕೇಂದ್ರಾಡಳಿತ ಪ್ರದೇಶಗಳಲ್ಲಿ ವಾಸಿಸುವ ಪರಿಶಿಷ್ಟ ಪಂಗಡಗಳ ಪ್ರದೇಶಗಳನ್ನು ಐದನೇ ಷೆಡ್ಯೂಲಿನಲ್ಲಿ ಸೇರಿಸದಿರುವ ಸಂದರ್ಭದಲ್ಲಿ, ನೈಸರ್ಗಿಕವಾಗಿ ಅಥವಾ ಮಾನವ ನಿರ್ಮಿತ ಸನ್ನಿವೇಶಗಳಿಂದ ವಲಸೆ ಹೋಗುವ ಪರಿಶಿಷ್ಟ ಪಂಗಡಗಳವರು ಮೇಲೆ ತಿಳಿಸಿರುವ ಎಲ್ಲಾ ಸನ್ನಿವೇಶಗಳಲ್ಲಿಯೂ ಅವರ ಹಕ್ಕುಗಳ ಉಲ್ಲಂಘನೆಯಾಗುತ್ತದೆ. ಇವರಿಗೆ ದೌರ್ಜನ್ಯ ತಡೆ ಕಾಯ್ದೆಯೂ ರಕ್ಷಣೆ ನೀಡುವುದಿಲ್ಲ.

**ಈ ಸನ್ನಿವೇಶಗಳಲ್ಲಿ ಪರಿಶಿಷ್ಟರಿಗಿರುವ ಮಾರ್ಗ?**

- ***ವಲಸೆ ಹೋಗುವ ಪ.ಪಂಗಡಗಳವರಿಗೆ ಜೀವನೋಪಾಯ:*** ಬುಡಕಟ್ಟು ಜನಾಂಗಗಳ ಅನೇಕರು ತಮ್ಮ ಗ್ರಾಮಗಳಿಂದ ಉದ್ಯೋಗ ಅರಸಿ ವಲಸೆ ಹೋಗುವ ಬಗ್ಗೆ ಸಮಿತಿ ಕಳಕಳಿ ವ್ಯಕ್ತಪಡಿಸುತ್ತದೆ. ಇದನ್ನು ತಡೆಯಲು ಸಮಿತಿ ಬುಡಕಟ್ಟು ಜನಾಂಗಗಳ ಸಚಿವಾಲಯಕ್ಕೆ ಶಿಫಾರಸ್ಸು ಮಾಡಿದೆ. ಶಿಫಾರಸ್ಸಿನಂತೆ ಸಚಿವಾಲಯ ಸಂಬಂಧಿಸಿದ ಪ್ರಾಧಿಕಾರಗಳ ಜೊತೆ ಚರ್ಚಿಸಿ, ಒಂದು ವರ್ಷದಲ್ಲಿ ಕೆಲವು ಸಮಯದವರೆಗೆ ಮಾತ್ರ ವಲಸೆ ಹೋಗುವ ಬುಡಕಟ್ಟು ಜನಾಂಗದ ಜನರನ್ನು ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಯಡಿ ತರುವುದನ್ನು ಖಚಿತಪಡಿಸಿಕೊಳ್ಳಬೇಕು, ಇದರಿಂದ ಅವರು ತಮ್ಮ ಮನೆಗಳನ್ನು ಬಿಟ್ಟು ಉದ್ಯೋಗ ಅರಸಿ ಹೊರಗೆ ಹೋಗುವುದನ್ನು ತಡೆಗಟ್ಟಬಹುದು. *(ಪ.ಜಾತಿ ಮತ್ತು ಪಂಗಡಗಳವರ ಕಲ್ಯಾಣಕ್ಕೆ ಸಂಸತ್ತು ಸಮಿತಿಯ 33ನೇ ವರದಿಯಲ್ಲಿ ಹೀಗೆಂದು ಉಲ್ಲೇಖಿಸಲಾಗಿದೆ, ನವದೆಹಲಿ, 2008, ಪ್ಯಾರಾ 4.17)*
- ***ಉತ್ತಮ ಆಡಳಿತ:*** ಈ ದಿಕ್ಕಿನಲ್ಲಿ ಸರ್ಕಾರ ಮಾಡಬೇಕಿರುವ ಕೆಲಸಗಳಲ್ಲಿ ವಿಶ್ವಾಸಾರ್ಹತೆ ಸ್ಥಾಪನೆಯೂ ಒಂದು ಕೆಲಸ; ಒಂದೆಡೆ ಜನರ ಆಶೋತ್ತರಗಳನ್ನು ಸತತವಾಗಿ ಪೂರೈಸುವತ್ತ ದೃಷ್ಟಿ ಹರಿಸುವುದರ ಜೊತೆಗೆ ಪರಿಣಾಮಕಾರಿ ರಕ್ಷಣೆ, ಶಾಂತಿ ಮತ್ತು ಉತ್ತಮ ಆಡಳಿತ ಸಹ ನೀಡಬೇಕಿದೆ; ಇಷ್ಟೇ ಅಲ್ಲದೆ ಸಾಮಾಜಿಕ ಸೇವೆಗಳನ್ನೂ ಒಳಗೊಂಡಂತೆ ಬುಡಕಟ್ಟು ಜನರ ಆರ್ಥಿಕ ಪರಿಸ್ಥಿತಿಯನ್ನು ಚೇತರಿಸುವಂತೆ; ಷೆಡ್ಯೂಲ್ ಪ್ರದೇಶಗಳಲ್ಲಿ ತಳಮಟ್ಟದಿಂದಲೂ ಸಮಗ್ರ ಪೂರ್ವಯೋಜನೆಗಳನ್ನು ತಯಾರಿಸಬೇಕು ಹಾಗೆಯೇ ಘರ್ಷಣೆ ಮತ್ತು ಗೊಂದಲ ಬಗೆಹರಿಸಲು ಮಾತುಕತೆ ಮಾಡುವತ್ತ ಗಮನಹರಿಸಬೇಕು." *(ಭಾರತೀಯ ಯೋಜನಾ ಆಯೋಗ, ತೀವ್ರಾದಿಗಳಿಂದ ಬಾಧೆಗೊಳಪಟ್ಟ ಪ್ರದೇಶಗಳಲ್ಲಿ ಅಭಿವೃದ್ಧಿಯ ಸವಾಲುಗಳು, ನವದೆಹಲಿ, 2008, ಪ್ಯಾರಾ 4.17)*
- ***ದೌರ್ಜನ್ಯ ತಡೆ ಪರಿಪೂರ್ಣ ಅನುಷ್ಠಾನ:*** ಒಂದು ಸಮಾಜದಲ್ಲಿ ಪಕ್ಷಪಾತ ನಿರ್ಮೂಲನೆಗೆ ನಕ್ಸಲ್‌ಬಾರ್ ಚಳುವಳಿಯಿಂದ ಪ್ರೇರಿತರಾದ ತಿವ್ರವಾದಿಗಳ ಅಗತ್ಯತೆ ಇರಲಿಲ್ಲ. ಜಾತಿ, ಲಿಂಗಬೇಧ, ಧರ್ಮ, ಇತ್ಯಾದಿ ಆಧರಿತ ಪಕ್ಷಪಾತವನ್ನು ಸಂವಿಧಾನ ಅನುಚ್ಛೇದ 14–17ರಲ್ಲಿ ನಿಷೇಧಿಸಿದೆ. ಇದರ ಮೇಲೂ ಪರಿಶಿಷ್ಟರಿಗೆ ಪಕ್ಷಪಾತ ತೋರಿಸಿದರೆ ದಂಡಿಸಲು ವಿಶೇಷ ಕಾಯ್ದೆಗಳನ್ನೂ ಜಾರಿಗೆ ತರಲಾಗಿದೆ. ದೌರ್ಜನ್ಯ ತಡೆ ಕಾಯ್ದೆಯು ಕೇವಲ ದಂಡಿಸುವ ಕಾಯ್ದೆಯಲ್ಲ, ಬದಲಿಗೆ ಅಂತಹ ದೌರ್ಜನ್ಯವನ್ನು ತಡೆಗಟ್ಟಲು ವಿಶಾಲವಾದ ವ್ಯವಸ್ಥೆಯನ್ನು ಈ ಕಾಯ್ದೆಯು ರೂಪಿಸುತ್ತದೆ. ಆದರೆ, ಇಲ್ಲಿಯವರೆಗೂ ಕೇವಲ ದಂಡಿಸುವ ಕಾಯ್ದೆ ಇದೆಂದು ಪರಿಗಣಿಸಲಾಗಿದ್ದು ದೌರ್ಜನ್ಯಕ್ಕೆ ಬಲಿಯಾದವರು ಮಾತ್ರ ಈ ಕಾಯ್ದೆಯ ಬೆನ್ನತ್ತಬೇಕೆಂಬ ತಪ್ಪು ಕಲ್ಪನೆ ಜನರಲ್ಲಿ ಮೂಡಿದೆ. ಪ್ರಸ್ತುತ ಇದರ ನಿಜ ಸಾಮರ್ಥ್ಯವನ್ನು ಸಾಕಾರಗೊಳಿಸುವುದರ ಬದಲಿಗೆ ಈ ಕಾಯ್ದೆಯ ದುರ್ಬಳಕೆ ಕುರಿತು ಚರ್ಚಿಸಲು ಹೆಚ್ಚಿನ ಸಮಯ ವ್ಯರ್ಥ ಮಾಡಿದೆ." *(ಭಾರತೀಯ ಯೋಜನಾ ಆಯೋಗ, ತೀವ್ರವಾದಿಗಳಿಂದ ಬಾಧಿಸಲ್ಪಟ್ಟಿರುವ ಪ್ರದೇಶಗಳಲ್ಲಿ ಅಭಿವೃದ್ಧಿಗಿರುವ ಸವಾಲುಗಳು–ತಜ್ಞ ತಂಡದ ವರದಿ, 2008,ಪುಟ ಪ್ಯಾರಾ, 51–2)*

## 2. ಈಶಾನ್ಯ ಪ್ರದೇಶಗಳಲ್ಲಿ ದೌರ್ಜನ್ಯ

**ಈಶಾನ್ಯ ಭಾರತ–ಆರನೇ ಷೆಡ್ಯೂಲ್ ಪ್ರದೇಶಗಳು**

ಸಂವಿಧಾನದ ಅನುಚ್ಛೇದ *244(2)* ಅನ್ವಯ ಅಸ್ಸಾಂ, ಮೇಘಾಲಯ, ತ್ರಿಪುರ ಮತ್ತು ಮಿಜೋರಾಂ ಬುಡಕಟ್ಟು ಪ್ರದೇಶಗಳಿಗೆ ವಿಶೇಷ ರಕ್ಷಣೆ ಖಚಿತಪಡಿಸುತ್ತದೆ. ಪರಿಶಿಷ್ಟ ಪಂಗಡಗಳವರು ಆರನೇ ಷೆಡ್ಯೂಲಿನಲ್ಲಿ ಪಡೆಯುವ ರಕ್ಷಣೆ ಹಾಗೂ ಈ ಮೊದಲು ವಿವರಿಸಿದಂತೆ ಐದನೇ ಷೆಡ್ಯೂಲಿನಲ್ಲಿ ದೌರ್ಜನ್ಯ ತಡೆ ಕಾಯ್ದೆಯಡಿ ದೊರೆಯುವ ರಕ್ಷಣೆ ಹೆಚ್ಚು ಕಡಿಮೆ ಒಂದೇ ರೀತಿಯಿದೆ. ಇಲ್ಲಿ ಗಮನಾರ್ಹ ವ್ಯತ್ಯಾಸವೇನೆಂದರೆ ಗಣರಾಜ್ಯದಿಂದ ರಕ್ಷಣೆ ಪಡೆಯುವಲ್ಲಿ ಎದುರಾಗುವ ಸಮಸ್ಯೆಗಳು. ಇದಕ್ಕೆ ಕಾರಣ ಸಹ ಆರನೇ ಷೆಡ್ಯೂಲ್ ಪ್ರದೇಶಗಳಲ್ಲಿರುವ ವಿಶೇಷ ಮತ್ತು ಅನನ್ಯ ಸನ್ನಿವೇಶಗಳು, ಇವುಗಳನ್ನು, ಹೆಸರಿಸುವುದಾದರೆ, ರಾಜ್ಯ ಶಸ್ತ್ರ ಪಡೆಗಳು ಹಾಗೂ ಇಲ್ಲಿನ ಮೂಲನಿವಾಸಿಗಳ ನಡುವಿನ ಘರ್ಷಣೆ, ಮೂಲನಿವಾಸಿ ಸಮುದಾಯಗಳ ಒಳಘರ್ಷಣೆ. ಇದರಿಂದ ದೌರ್ಜನ್ಯ ತಡೆ ಕಾಯ್ದೆ ಮತ್ತು ನಿಯಮಗಳ ವಿಶೇಷ ಪ್ರಾಮುಖ್ಯತೆ ಮತ್ತು ಅನುಷ್ಠಾನ ನಿರ್ಲಕ್ಷಕ್ಕೆ ಒಳಗಾಗಿದೆ.

**ಈಶಾನ್ಯ ಭಾರತ–ಷೆಡ್ಯೂಲ್ ವ್ಯಾಪ್ತಿಯಿಂದ ಹೊರಗಿರುವ ಪ್ರದೇಶಗಳು**

ಉಳಿದ ಮೂರು ರಾಜ್ಯಗಳು ಅರುಣಾಚಲ ಪ್ರದೇಶ, ಮಣಿಪುರ ಮತ್ತು ನಾಗಾಲ್ಯಾಂಡ್ ಷೆಡ್ಯೂಲ್ ಪ್ರದೇಶದಿಂದ ಹೊರಗಿವೆ ಹಾಗೂ ಆರನೇ ಷೆಡ್ಯೂಲ್ ಪ್ರದೇಶದಲ್ಲಿರುವ ಪ.ಪಂಗಡಗಳವರಿಗೆ ಸಮಾನರಲ್ಲವೆಂದು ಪರಿಗಣಿಸಲ್ಪಡುತ್ತಾರೆ. ಅಷ್ಟೇ ಅಲ್ಲದೆ, ಆರನೇ ಷೆಡ್ಯೂಲ್ ಸೌಲಭ್ಯ ಮತ್ತು ವಿಶೇಷ ರಕ್ಷಣೆಯ ಹಕ್ಕುಗಳು ಇವರಿಗೆ ಸಿಗುವುದಿಲ್ಲ.

### ಪರಿಶಿಷ್ಟರ ಮೇಲಿನ ದೌರ್ಜನ್ಯ: ಸನ್ನಿವೇಶ, ಕಾರಣ ಮತ್ತು ದುಷ್ಪರಿಣಾಮ

***(i) ಶಸ್ತ್ರ ಘರ್ಷಣೆ: ಬಹುಮುಖಿ ಸಮಸ್ಯೆಗಳು, ಪಾತ್ರಧಾರಿಗಳು, ಹಕ್ಕುಚ್ಯುತಿ, ನಷ್ಟ***

- ಅಸ್ಸಾಂ, ಅರುಣಾಚಲಪ್ರದೇಶ, ಮಣಿಪುರ, ಮೇಘಾಲಯ, ಮಿಝೋರಾಂ, ನಾಗಾಲ್ಯಾಂಡ್ ಹಾಗೂ ತ್ರಿಪುರ ಹೀಗೆ ಈಶಾನ್ಯ ಭಾರತದಲ್ಲಿ ಏಳು ರಾಜ್ಯಗಳಿವೆ. ಈ ಎಲ್ಲಾ ರಾಜ್ಯಗಳೂ ಕಳೆದ ಐದು ದಶಕಗಳಿಂದ ಘರ್ಷಣೆಯ ಅನೇಕ ಸಮಸ್ಯೆ ಮತ್ತು ವಿಭಿನ್ನ ಕಾರಣಗಳಿಗಾಗಿ ಬಾಧಿಸಲ್ಪಟ್ಟಿವೆ. ಭೂಮಿ ಹಂಚಿಕೆ, ಪರಪ್ರದೇಶದಿಂದ ಬಂದ ವಲಸಿಗರು, ಧರ್ಮ ಮತ್ತು ರಾಜಕೀಯ ಅಧಿಪತ್ಯದ ಸಮಸ್ಯೆಗಳು ಘರ್ಷಣೆಯೆಂಬ ಬೆಂಕಿಗೆ ಸದಾಕಾಲ ತುಪ್ಪ ಸುರಿದಿವೆ.
- ಭಾರತ ಸ್ವಾತಂತ್ರ್ಯ ಪಡೆದ ಸಂದರ್ಭದಿಂದ ಇಂದಿಗೆ ದಂಗೆಯ ಕಾರಣ ಈ ಪ್ರದೇಶಗಳಲ್ಲಿ ಐದು ಲಕ್ಷಕ್ಕೂ ಹೆಚ್ಚು ಜನರು ತಮ್ಮ ಪ್ರಾಣಗಳನ್ನು ಕಳೆದುಕೊಂಡಿದ್ದಾರೆ.
- ಪ್ರತಿ ಘರ್ಷಣೆಗೂ ತನ್ನದೇ ಆದ ಮೂಲ ಮತ್ತು ಇತಿಹಾಸ ಹಾಗೂ ಒಂದು ದಂಗೆಕೋರ ಗುಂಪು ಇದೆ. ಈಗ ಅಂತಹ 72 ದಂಗೆಕೋರ ಗುಂಪುಗಳಿವೆ ಮತ್ತು ಪ್ರತಿ ಗುಂಪಿಗೂ ತನ್ನದೇ ಅಜೆಂಡಾ ಇದೆ. ಅವು ಭಾಷೆ ಮತ್ತು ಜನಾಂಗದ ರಕ್ಷಣೆ ಮತ್ತು ಬುಡಕಟ್ಟುಗಳ ನಡುವಿನ ವೈಷಮ್ಯವನ್ನೂ ಒಳಗೊಂಡಿವೆ.

*(Mandy Turner & Binalakshmi Nepram, The impact of armed violence in Northeast India: A mini case study for the Armed Violence and Poverty Initiative, Centre for International Co-operation and Security, 2004, p. 8)*

***(ii) ಶಸ್ತ್ರ ಘರ್ಷಣೆ–ಮುಖ್ಯ ಪಾತ್ರಧಾರಿಗಳು: ರಾಜ್ಯ ಮತ್ತು ಜನಾಂಗೀಯ ಗುಂಪುಗಳು***

ಈಶಾನ್ಯ ಭಾರತ ಜನಾಂಗೀಯ ಗುಂಪುಗಳ ಸಾಗರ. ಇಲ್ಲಿ 160 ಪರಿಶಿಷ್ಟ ಬುಡಕಟ್ಟು ಜನಾಂಗ, ಅಲ್ಲದೆ ಸುಮಾರು 400 ಇತರೆ ಬುಡಕಟ್ಟು ಅಥವಾ ಉಪ–ಪಂಗಡಗಳು, ಸಮುದಾಯಗಳು ಮತ್ತು ಗುಂಪುಗಳು ಇಲ್ಲಿವೆಯೆಂಬ ಅಂದಾಜಿದೆ. ಆದ್ದರಿಂದ ಇಲ್ಲಿ ಉದ್ಭವಿಸುವ ಅಶಾಂತಿಯ ಸುಂಟರಗಾಳಿಗೆ ಜನಾಂಗೀಯ ಗುಂಪುಗಳ ಪ್ರತ್ಯೇಕವಾದದ ಶಸ್ತ್ರ ಗುಂಪುಗಳು ಮತ್ತು ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರಗಳ ನಡುವಿನ ಘರ್ಷಣೆ ಅಥವಾ ತಮ್ಮ ಲಾಂಛನಗಳು ಅಥವಾ ಪ್ರತ್ಯೇಕ ಪ್ರದೇಶದ ಬೇಡಿಕೆ ಮಾತ್ರ ಕಾರಣವಲ್ಲ. ಕೆಲವು ಜನಾಂಗೀಯ ಗುಂಪುಗಳು ಒಂದು ಪ್ರದೇಶದ ಮೇಲೆ ಪ್ರಾಬಲ್ಯತೆ ಸಾಧಿಸಲು ತಮ್ಮ ತಮ್ಮಲ್ಲಿಯೇ ಪದೇ ಪದೇ ಕದನವಾಡುತ್ತಾರೆ. *(Wasbir Hussain, India's North-East: The Problem: Part 1,paper presented as part of the Interaction on the North East, conducted by Observer Research Foundation, New Delhi, 18/11/2004)*

- ಇಲ್ಲಿಯ ಬುಡಕಟ್ಟು ಜನಾಂಗಗಳ ಹಕ್ಕುಗಳ ಸಾರಾಸಗಟು ಉಲ್ಲಂಘನೆಗೆ ಬಹುಮುಖ್ಯ ಕಾರಣ ಭದ್ರತಾ ಪಡೆಗಳು. ಹೇಳದ ಕೇಳದ ಬಂಧನ, ಅಕ್ರಮವಾಗಿ ಬಂಧಿಸಿಟ್ಟು ಹಿಂಸಿಸುವುದು, ಕಸ್ಟಡಿಯಲ್ಲಿರುವಾಗ ಸಾಯಿಸುವುದು ಹಾಗೂ ಭಯೋತ್ಪಾದನೆ ನಿಯಂತ್ರಣದ ಹೆಸರಿನಲ್ಲಿ ನ್ಯಾಯಾಂಗದ ಮಿತಿ ಮೀರಿ ಸಾಯಿಸುವ ಕ್ರಮಗಳು ಇದಕ್ಕೆ ಕಾರಣ. *(Asian Indigenous & Tribal Peoples Network, The State of India's Indigenous and Tribal Peoples 2009, New Delhi, 2009, p4)*

***(iii) ದೌರ್ಜನ್ಯಕ್ಕೆ ಕಾರಣ***

ಅಶಾಂತಿಗೆ ಪ್ರಮುಖ ಕಾರಣ ಸೇನೆ. ಎಲ್ಲಾ ಅಧಿಕಾರವೂ ಸೇನೆಯ ಕೈಯಲ್ಲಿದ್ದು ಜನಸಾಮಾನ್ಯರಿಗೆ ನ್ಯಾಯ ಎಂಬುದು ಕನಸಿನ ಮಾತು. ಅಭಿವೃದ್ಧಿಯ ಕಾರ್ಯತಂತ್ರಗಳಲ್ಲಿ ನಾಗರಿಕ ಸಂಸ್ಥೆಗಳನ್ನೂ ಗಣನೆಗೆ ತೆಗೆದುಕೊಳ್ಳುವುದಿಲ್ಲ. ಅಭಿವೃದ್ಧಿಯನ್ನು ಜನರ ಮೇಲೆ ಹೇರಲಾಗುತ್ತದೆ. ಇದರಿಂದ ಸರ್ಕಾರದ ಮೇಲೆ ಜನರಲ್ಲಿ ಮನೆಮಾಡಿರುವ ಅಸಹ್ಯ ಭಾವನೆ ಕಡಿಮೆಯಾಗುತ್ತಿಲ್ಲ. ಅದ್ದರಿಂದ ಅಭಿವೃದ್ಧಿ ಕಾರ್ಯತಂತ್ರ ಮತ್ತು ಮಿಲಿಟರೀಕರಣ ಪ್ರಕ್ರಿಯೆಯನ್ನು ಜೊತೆಜೊತೆಗೇ ಸರಿಪಡಿಸಿಕೊಳ್ಳಬೇಕಿದೆ." *(Mandy Turner & Binalakshmi Nepram, The impact of armed violence in Northeast India: A mini case study for the Armed Violence and Poverty Initiative, Centre for International Co-operation and Security, 2004, p.25)*

***(iv) ಶಸ್ತ್ರ ಸಂಘರ್ಷ–ದುಷ್ಪರಿಣಾಮ***

*ಬೃಹತ್ ಪ್ರಮಾಣದ ಸ್ಥಳಾಂತರ:* ಒಂದು ಅಂದಾಜಿನಂತೆ ದೇಶಾದ್ಯಂತ ಶಸ್ತ್ರ ಮತ್ತು ಜನಾಂಗೀಯ ಸಂಘರ್ಷದಿಂದಾಗಿ ಒಟ್ಟು 4,01,425 ಬುಡಕಟ್ಟು ಜನರು ಸ್ಥಳಾಂತರಗೊಂಡಿದ್ದಾರೆ, ಇದರಿಂದಾಗಿ ಬೃಹತ್ ಪ್ರಮಾಣದಲ್ಲಿ ಈ ಜನರ ಜೀವನೋಪಾಯವನ್ನು ಕಿತ್ತುಕೊಂಡಂತಾಗಿದೆ. ಈ ಸ್ಥಳಾಂತರದಲ್ಲಿ:

- 47,940 ಆದಿವಾಸಿಗಳು..... ಛತ್ತೀಸಘಡದಲ್ಲಿ
- 2,03,485 ಬುಡಕಟ್ಟು ಜನರು (ಬೋಡೋಗಳು, ಸಂತಾಳರು ಮತ್ತು ಗರೋಸ್)–.....ಅಸೋಮ್ (ಈ ಮೊದಲು ಅಸ್ಸಾಮ್)
- ಗುಟ್ಟಿ ಕೋಯಾ ಬುಡಕಟ್ಟಿನ ಸುಮಾರು 1,20,000 (ಛತ್ತೀಸಘಡದಿಂದ) ....ಆಂಧ್ರ ಪ್ರದೇಶ
- 30,000 ಬ್ರೂಸ್––––––ತ್ರಿಪುರದಲ್ಲಿ

*(Asian Indigenous & Tribal Peoples Network, The State of India's Indigenous and Tribal Peoples 2009, New Delhi, 2009, pp. 7-8)*

## ಕಾಯ್ದೆಯ ಹೊರಗುಳಿದ ದುರ್ಬಲರ ಮೇಲಿನ ದೌರ್ಜನ್ಯ-ಸ್ಥಿತಿಗತಿ

- ***ಮಕ್ಕಳು ಟಾರ್ಗೆಟ್:*** ದಂಗೆಕೋರರು ಹಿಂಸೆಯಲ್ಲಿ ತೊಡಗಿರುವಾಗ ಮಕ್ಕಳು ಸಿಕ್ಕಿಕೊಳ್ಳುವುದಷ್ಟೇ ಅಲ್ಲ, ಅವರನ್ನು ಮತ್ತು ಹಸುಗೂಸುಗಳನ್ನು ತುರ್ತು ಪರಿಸ್ಥಿತಿ ಕಾಯ್ದೆಯನ್ವಯ ಪದೇ ಪದೇ ಬಂಧನ ಮತ್ತು ಬಂಧಿಸಿಡುವುದು ಮಾಡುತ್ತಾರೆ. ಮಣಿಪುರದ ಉದಾಹರಣೆ ತೆಗೆದುಕೊಂಡರೆ ಮಕ್ಕಳು ಮತ್ತು ಯುವಕರನ್ನು ಬಂಧಿಸಿದ ಸೇನಾ ಪಡೆಗಳು ಅವರನ್ನು ಹಿಂಸಿಸಿದ್ದಾರೆ ಎಂಬುದಾಗಿ ಪುರಾವೆಗಳು ತಿಳಿಸುತ್ತವೆ. ಅಷ್ಟೇ ಅಲ್ಲ ಕೆಲವೊಮ್ಮೆ ಕಸ್ಟಡಿಯಲ್ಲಿರುವ ಮಕ್ಕಳು ಕಣ್ಮರೆಯಾಗುತ್ತಾರೆ ಕೂಡ. ಇದರೊಟ್ಟಿಗೆ ತಮ್ಮ ತಾಯಂದಿರಿಗೆ ಭದ್ರತಾ ಪಡೆಗಳವರು ಲೈಂಗಿಕ ಕಿರುಕುಳ ನೀಡುವುದನ್ನೂ ಹಾಗೂ ಅತ್ಯಾಚಾರ ಮಾಡುವುದನ್ನೂ ಈ ಮಕ್ಕಳು ನೋಡಿದ್ದಾರೆ. *(Mandy Turner & Binalakshmi Nepram, The impact of armed violence in Northeast India: A mini case study for the Armed Violence and Poverty Initiative, Centre for International Cooperation and Security, 2004, pp.25)*
- ***ನಾಗರಿಕ ಮತ್ತು ರಾಜಕೀಯ ಹಕ್ಕುಗಳಿಗೆ ಚ್ಯುತಿ:*** ಹೆಚ್ಚುತ್ತಿರುವ ಶಸ್ತ್ರ ಸಂಘರ್ಷಗಳ ಹಿನ್ನೆಲೆಯಲ್ಲಿ ಮೂಲನಿವಾಸಿಗಳು/ಬುಡಕಟ್ಟು ಜನಾಂಗಗಳ ನಾಗರಿಕ ಮತ್ತು ರಾಜಕೀಯ ಹಕ್ಕುಗಳಿಗೆ ತೀವ್ರಸ್ವರೂಪದ ಧಕ್ಕೆಯಾಗುತ್ತಿದೆ, ಅಂಕೆಶಂಕೆಯಿಲ್ಲದೆ ಬಂಧಿಸುವ, ಬಂಧನದಲ್ಲಿ ಕೂಡಿಹಾಕುವ, ಹಿಂಸಿಸುವ, ನ್ಯಾಯಾಂಗದ ಮಿತಿ ಮೀರಿ ಸಾಯಿಸುವ, ಅತ್ಯಾಚಾರ ಎಸಗುವ ಇತ್ಯಾದಿ ಸಮಸ್ಯೆಗಳನ್ನು ಭದ್ರತಾ ಪಡೆಗಳ ಕೈಯಲ್ಲಿ ಅನುಭವಿಸುತ್ತಾರೆ." *(IWGIA and AITPN, 'India: No democracy for those living on the margins', Universal Periodic Review Special, Vol. II, No. 4, 2007, www.aitpn.org/IRQ?vol-II/Issue-04/story02.htpl)*
- ***ಅಡೆತಡೆಯಿಲ್ಲದ ತುಪಾಕಿ ಬಳಕೆ-ಜನಬಲಿ:*** ಮೂಲನಿವಾಸಿಗಳು/ಬುಡಕಟ್ಟು ಜನಾಂಗದವರು ಸಾಮಾಜಿಕ ಸಭೆ ಸಮಾರಂಭಗಳಲ್ಲಿ ಒಟ್ಟು ಸೇರಿದಾಗ, ಅಡೆತಡೆಯಿಲ್ಲದ ತುಪಾಕಿಗಳ ಘರ್ಷಣೆಯಲ್ಲಿ ಇವರು ಬಲಿಯಾಗುತ್ತಾರೆ. *(IWGIA and AITPN, 'India: No democracy for those living on the margins, Joint Submission for Examination of India's human rights obligations and commitments under the UPR of the Human Rights Council, 2007, p.13)*

***ಈಶಾನ್ಯ ಭಾರತ-ದಂಗೆಕೋರ ಮತ್ತು ತೀವ್ರವಾದಿಗಳ ಘರ್ಷಣೆಯಲ್ಲಿ ಬಲಿಯಾದವರ ವಿವರ: 1992-2001***

| ಇಸವಿ | ನಾಗರಿಕರು | ಭದ್ರತಾಪಡೆ | ತೀವ್ರವಾದಿಗಳು | ಒಟ್ಟು |
|---|---|---|---|---|
| 1992 | 257 | 115 | 492 | 492 |
| 1993 | 551 | 188 | 174 | 913 |
| 1994 | 685 | 181 | 192 | 1058 |
| 1995 | 621 | 196 | 254 | 1071 |
| 1996 | 710 | 240 | 285 | 1235 |
| 1997 | 839 | 250 | 556 | 1680 |
| 1998 | 865 | 189 | 377 | 1431 |
| 1999 | 578 | 208 | 430 | 1216 |
| 2000 | 907 | 162 | 585 | 1654 |
| 2001 | 662 | 137 | 581 | 1380 |

*(Ajai Sahni, Survey of Conflicts & Resolution in India's Northeast, www.satp.org/satporgtp/publication/faultines/volume12/Article3.htm, accessed 12/12/2009)*

**ಬಾಧಿತ ಪ.ಪಂಗಡಗಳವರಿಗೆ ಪರಿಹಾರ ಮಾರ್ಗ?**

- ***ಉತ್ತಮ ಆಡಳಿತ:*** ಕಾನೂನು ಸುವ್ಯವಸ್ಥೆಯನ್ನು ಮರಳಿ ಹತೋಟಿಗೆ ತರಲು ಹಾಗೂ ಸಂವಿಧಾನಬದ್ಧ ರಾಜಕಾರಣವನ್ನು ಮರುಸ್ಥಾಪಿಸಬೇಕು. ಇದಕ್ಕಾಗಿ ನ್ಯಾಯಾಂಗದ ಆಡಳಿತ, ನಾಗರಿಕ ಆಡಳಿತವನ್ನು ನಿಯಂತ್ರಿಸುವ ಎಲ್ಲಾ ಸಂಸ್ಥೆ ಮತ್ತು ಮುಖ್ಯವಾಗಿ ಆಡಳಿತ ವ್ಯವಸ್ಥೆ ಸಧೃಡಗೊಳ್ಳಬೇಕು.
- **ಹಿಂಸೆ ಮತ್ತು ಪ್ರತಿರಕ್ಷೆ ಸಂಸ್ಕೃತಿಗೆ ಕಡಿವಾಣ:** ಭಯೋತ್ಪಾದನೆ ವಿರೋಧಿ ನೀತಿಯಲ್ಲಿರುವ ಅಸ್ಪಷ್ಟತೆಯನ್ನು ಹೋಗಲಾಡಿಸಿ, ಸ್ಪಷ್ಟವಾದ ನೀತಿಯನ್ನು ಮರುರೂಪಿಸುವ ಅಗತ್ಯವಿದೆ. ಅದರ ಜೊತೆಯಲ್ಲಿಯೇ ಬಾಧಿಸುತ್ತಿರುವ ರಾಜಕೀಯ ಬಿಕ್ಕಟ್ಟು ಮತ್ತು ಗೊಂದಲಗಳನ್ನು ಪರಿಹರಿಸಿಕೊಳ್ಳಲು ಈಗ ಹಿಂಸೆಯ ಮಾರ್ಗವನ್ನು ಹಿಡಿಯಲಾಗಿದೆ. ಇದನ್ನು ಬದಲಾಯಿಸಿ ಶಾಂತಿಯ ಸಂಸ್ಕೃತಿಯನ್ನು ಪರಿಚಯಿಸಬೇಕು. *(Ajai Sahni, Survey of Conflicts & Resolution in India's Northeast, www.satp.org/satporgtp/publication/faultines/volume12/Article3.htm, accessed 12/12/2009)*

ಆಯೋಗ 1996-97ರ ವರದಿಯಲ್ಲಿ ಶಸ್ತ್ರಪಡೆಗಳಿಗೆ ಮಾನವಹಕ್ಕುಗಳ ಕಾಯ್ದೆಯಿಂದ ನೀಡಿರುವ ಪ್ರತಿರಕ್ಷೆಯನ್ನು ಪ್ರಶ್ನಿಸಿತ್ತು. ಈ ಪ್ರತಿರಕ್ಷೆಯಿಂದಾಗಿ ಮಾನವ ಹಕ್ಕುಗಳನ್ನು ಸಂರಕ್ಷಿಸುವ ನಿಟ್ಟಿನಲ್ಲಿ ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗದ ಘನತೆ ಗೌರವಗಳು ತಗ್ಗುತ್ತವೆ ಎಂದು ಸಹ ತಿಳಿಸಲಾಗಿತ್ತು. ಇಷ್ಟೇ ಅಲ್ಲದೆ, ಮಾನವ ಹಕ್ಕುಗಳ ಉಲ್ಲಂಘನೆ ವಿಚಾರದಲ್ಲಿ ಶಸ್ತ್ರ ಪಡೆಗಳಿಗೆ ನೀಡಿರುವ ಸೌಕರ್ಯವನ್ನು ತೆಗೆದುಹಾಕಿ ನೇರವಾಗಿ ಆಯೋಗದಡಿಯಲ್ಲಿ ಬರುವಂತೆ ಮಾಡಬೇಕೆಂದು ನಿರ್ದಿಷ್ಟವಾಗಿ ಶಿಫಾರಸ್ಸು ಮಾಡಲಾಗಿತ್ತು. ಈ ಮೊದಲಿನ ವರದಿಯಲ್ಲಿ ಕೂಡ ಶಸ್ತ್ರಪಡೆಗಳು ತಮ್ಮ ಕಸ್ಟಡಿಯಲ್ಲಿರುವವರು ಮರಣ ಹೊಂದಿದರೆ, ಅತ್ಯಾಚಾರ ಅಥವಾ ಹಿಂಸೆಗೊಳಗಾದರೆ ಅದನ್ನು ನೇರವಾಗಿ ಮತ್ತು ಪ್ರಾಮಾಣಿಕವಾಗಿ ಆಯೋಗಕ್ಕೆ ವರದಿ ಮಾಡಬೇಕೆಂದೂ, ಹಾಗೊಂದು ವೇಳೆ ಮಾಡಲು ವಿಫಲವಾದಲ್ಲಿ ಸತ್ಯವನ್ನು ಮರೆಮಾಚಲು ಅಂತಹ ಘಟನೆಗಳನ್ನು ವರದಿ ಮಾಡಿಲ್ಲ ಎಂಬ ನಿರ್ಧಾರಕ್ಕೆ ಆಯೋಗ ಬರುವುದಾಗಿಯೂ ತನ್ನ ಹಿಂದಿನ ವರದಿಯಲ್ಲಿ ಶಿಫಾರಸ್ಸು ಮಾಡಿತ್ತು.

*(ಮಾನವಹಕ್ಕುಗಳ ರಾಷ್ಟ್ರೀಯ ಆಯೋಗವು ಪ.ಜಾತಿಗಳವರ ವಿರುದ್ಧ ದೌರ್ಜನ್ಯ ತಡೆಯ ತನ್ನ ವರದಿಯಲ್ಲಿ, ನವದೆಹಲಿ, 2002, ಪುಟ 105)*

## 3. ಪರಿಶಿಷ್ಟ ಧಾರ್ಮಿಕ ಅಲ್ಪಸಂಖ್ಯಾತರ ಮೇಲೆ ದೌರ್ಜನ್ಯ

ಕ್ರಿಶ್ಚಿಯನ್ ಧರ್ಮಕ್ಕೆ ಸೇರಿಕೊಂಡಿರುವ ಪ.ಜಾತಿಯವರಿಗೆ ದೌರ್ಜನ್ಯ ತಡೆ ಕಾಯ್ದೆಯಡಿ ರಕ್ಷಣೆ ಸಿಗುವುದಿಲ್ಲ. ಆದರೆ, ಪ.ಜಾತಿಗೆ ಸೇರಿರುವ ಕ್ರಿಶ್ಚಿಯನ್ನರೂ ಸಹ ದೌರ್ಜನ್ಯಕ್ಕೆ ಒಳಗಾಗುತ್ತಾರೆ. ಈ ರೀತಿಯ ದೌರ್ಜನ್ಯಕ್ಕೆ ಕಾರಣ ಅವರಿಗಿರುವ ಧಾರ್ಮಿಕ ಹಿನ್ನೆಲೆಯಲ್ಲ. ಬದಲಾಗಿ ಪ.ಜಾತಿಯ ಹಿಂದೂಗಳು ದೌರ್ಜನ್ಯಕ್ಕೆ ಒಳಗಾಗುವ ಕಾರಣಗಳಿಗಾಗಿಯೇ ಇವರೂ ಸಹ ದೌರ್ಜನ್ಯಕ್ಕೆ ಒಳಪಡುತ್ತಾರೆ. ಆಂಧ್ರದ ಸುಂಡೂರು ಪ್ರಕರಣದಲ್ಲಿ ವಿಚಾರಣೆ ನವೆಂಬರ್ 2004ರವರೆಗೆ ವಿಳಂಬವಾಗಲು ಈ ಹಿನ್ನೆಲೆ ಕಾರಣವಾಯಿತು. *(ಪಿ.ಎಸ್. ಕೃಷ್ಣನ್, ದಲಿತರ ವಿರುದ್ಧದ ದೌರ್ಜನ್ಯ ಒಂದು ಆತ್ಮಾವಲೋಕನ, ಕಾಂಬಾಟ್ ಲಾ ಪತ್ರಿಕೆಯಲ್ಲಿ, ಸಂಪುಟ 8, ಸಂಚಿಕೆ 5 ಮತ್ತು 6, 2009, ಪುಟ 15)*

ದಲಿತ ಕ್ರಿಶ್ಚಿಯನ್ ಮತ್ತು ಮುಸ್ಲಿಮರನ್ನು ಅವರ ಧಾರ್ಮಿಕ ಸಮುದಾಯಗಳಲ್ಲಿಯೇ ಅವರನ್ನು ಪರಕೀಯರಂತೆ ಕಾಣುತ್ತಾರೆ ಎನ್ನುವುದರಲ್ಲಿ ಎರಡು ಮಾತಿಲ್ಲ. ಅಷ್ಟೇ ಅಲ್ಲದೆ ಸಹಧರ್ಮೀಯರು ಸಹ ಅವರನ್ನು ಕೀಳ್ಮಟ್ಟದ ಸಮುದಾಯದವರೆಂದು ಪರಿಗಣಿಸುತ್ತಾರೆ ಎಂಬುದೂ ನಿಸ್ಸಂಶಯದ ಮಾತು. ಒಂದೇ ಮಾತಲ್ಲಿ ಹೇಳುವುದಾದರೆ ದಲಿತ ಮುಸ್ಲಿಮರು ಮತ್ತು ಕ್ರಿಶ್ಚಿಯನ್ನರು ಬಹುತೇಕ ಸಂದರ್ಭಗಳಲ್ಲಿ ಮೊದಲು ದಲಿತರು ನಂತರ ಮುಸ್ಲಿಮ್ ಮತ್ತು ಕ್ರಿಶ್ಚಿಯನ್ನರು *(ಅಲ್ಪಸಂಖ್ಯಾತರುಗಳ ರಾಷ್ಟ್ರೀಯ ಆಯೋಗ, Dalits in the Muslim and Christian Communities: A Status Report on Current Social Scientific Knowledge, New Delhi, 2008, p 78)*

ಪ.ಜಾತಿಯ ಪಟ್ಟಿಗೆ ಸಂಬಂಧಿಸಿದಂತೆ 1950ರ ಸಂವಿಧಾನದ ಆದೇಶವು ಪ.,ಜಾತಿಯ ಸ್ಥಾನವನ್ನು ಅಶುದ್ಧ ಕಾಯಕವನ್ನು ಮಾಡುತ್ತಿರುವ ಹಿಂದೂ ಸಮುದಾಯದವರಿಗೆ ಮಾತ್ರ ದೊರಕಿದೆ. ನಂತರ 1956 ಹಾಗೂ 1990ರಲ್ಲಿ ಕ್ರಮವಾಗಿ ಸಿಖ್ಖರನ್ನು ಹಾಗೂ ಬೌದ್ಧರನ್ನು ಈ ಪಟ್ಟಿಯಲ್ಲಿ ತರಲು ಎರಡು ಬಾರಿ ತಿದ್ದುಪಡಿ ಮಾಡಲಾಯಿತು. ಬೇರೆ ಧರ್ಮಕ್ಕೆ ಮತಾಂತರಗೊಂಡ ಪ.ಜಾತಿಯವರ ಸಮಾನ ಜನರನ್ನು ಮಾತ್ರ ಇತರೆ ಹಿಂದುಳಿದ ವರ್ಗದವರು ಎಂಬ ಸ್ಥಾನ ಕಲ್ಪಿಸಲಾಯಿತು. ಮುಸ್ಲಿಮರಲ್ಲಿ ಅಶ್ರಫ್‌ಗಳು ಉನ್ನತ ಸ್ಥಾನವನ್ನು, ಅಜ್ಲಲರು ಮಧ್ಯಮ ಸ್ಥಾನವನ್ನು ಪಡೆದಿದ್ದರೆ ಪ.ಜಾತಿಯವರಂತೆ ಸಾಂಪ್ರದಾಯಿಕ ಕೆಲಸಗಳನ್ನು ಮಾಡುತ್ತಿರುವ ಅರಜಲರು ಕಡೆಯ ಸ್ಥಾನವನ್ನು ಹೊಂದಿದ್ದಾರೆ. ಇವರೆಲ್ಲರೂ ಅಸ್ಪೃಶ್ಯ ಹಿಂದೂ ವರ್ಗದವರಿಂದ ಮತಾಂತರ ಆಗಿದ್ದಾರೆ ಎಂಬುದೇ ಎಲ್ಲರ ಆಳವಾದ ನಂಬಿಕೆ. ಇವರು ಧರ್ಮವನ್ನು ಬದಲಾಯಿಸಿದ ತಕ್ಷಣ ಅವರ ಆರ್ಥಿಕ ಮತ್ತು ಸಾಮಾಜಿಕ ಸ್ಥಾನಮಾನಗಳಲ್ಲಿ ಬದಲಾವಣೆ ಕಾಣಲಿಲ್ಲ. ಅವರ ಸಾಂಪ್ರದಾಯಿಕ ಉದ್ಯೋಗಕ್ಕೆ ಅಂಟಿಕೊಂಡಿರುವ ಕಳಂಕದ ಕಾರಣ, ಇವರೆಲ್ಲರೂ ಸಾಮಾಜಿಕವಾಗಿ ಹೊರಗುಳಿದಿದ್ದಾರೆ ಹಾಗೂ ಬಡತನದ ಬೇಗೆಯಲ್ಲಿ ಬಳಲುತ್ತಿದ್ದಾರೆ. ಇಷ್ಟಾಗಿಯೂ ಸಹ, ಹಿಂದೂ ಸಂಬಂಧಿಗಳಿಗೆ ದೊರೆತಿರುವ ಪ.ಜಾತಿ ಸ್ಥಾನ ಇವರಿಗೆ ಲಭ್ಯವಾಗಿಲ್ಲ *(ಭಾರತದಲ್ಲಿರುವ ಮುಸ್ಲಿಮ್ ಸಮುದಾಯದಾಯದವರ ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕ ಸ್ಥಿತಿಗತಿಗಳಿಗೆ ಪ್ರಧಾನಮಂತ್ರಿಯವರ ಉನ್ನತ ಮಟ್ಟದ ಸಮಿತಿ, ಪುಟ 193–202)*

⇒ ***ಹಾಗಿದ್ದರೆ ಅನುಚ್ಛೇದ 14, 15, 16 ಮತ್ತು 25ರನ್ವಯ ಧರ್ಮ ಅಥವಾ ಜಾತಿ ಹಿನ್ನೆಲೆಯಲ್ಲಿ ಪಕ್ಷಪಾತ ತೋರಿಸದೆ ಸಮಾನ ಅವಕಾಶ, ತನ್ನ ಆತ್ಮಸಾಕ್ಷಿಗೆ ತಕ್ಕಂತೆ ನಡೆದುಕೊಳ್ಳುವ ಸ್ವಾತಂತ್ರ ಮತ್ತು ಪ್ರಜೆಗಳ ರಕ್ಷಣೆಯನ್ನು ಘೋಷಿಸಿರುವ ಸಂವಿಧಾನದ ಆಶಯಕ್ಕೆ 1950ರ ಸಂವಿಧಾನದ ಆದೇಶ ವಿರುದ್ಧವಾಗಿದೆಯಲ್ಲವೇ? ಒಂದೆಡೆ ಸಿಕ್ಖರು ಹಾಗೂ ಬೌದ್ಧರನ್ನು ಪ.ಜಾತಿಯಡಿ ತರಲು ಮಾಡಿರುವ ತಿದ್ದುಪಡಿಯಂತೆ ಅಸ್ಪೃಶ್ಯತೆ ಮತ್ತು ಪಕ್ಷಪಾತಕ್ಕೆ ಒಳಗಾಗುತ್ತಿರುವ ಮುಸ್ಲಿಮ್ ಹಾಗೂ ಕ್ರಿಶ್ಚಿಯನ್ ದಲಿತರನ್ನೂ ಷೆಡ್ಯೂಲ್ ಪಟ್ಟಿಯಲ್ಲಿ ತರಲು ತಿದ್ದುಪಡಿಗಳಾಗಬೇಕಲ್ಲವೇ?***

### ಪ.ಜಾತಿ/ಪಂಗಡಗಳವರ ಧಾರ್ಮಿಕ ವಿಂಗಡಣೆ.

2006ರಲ್ಲಿ ಹೊರಬಿದ್ದ ಸಾಚಾರ್ ವರದಿ ಎನ್‌ಎಸ್‌ಎಸ್‌ನ 61ನೇ ಸಮೀಕ್ಷೆಯನ್ನು ಉಲ್ಲೇಖಿಸಿ ಭಾರತದಲ್ಲಿರುವ ಶೇ. 90% ಬುದ್ಧರು ಹಾಗೂ ಮೂರನೇ ಒಂದರಷ್ಟು ಸಿಕ್ಖರು ಸಂವಿಧಾನದಲ್ಲಿ ಅಧಿಸೂಚನೆಗೊಂಡಿರುವ ಪ.ಜಾತಿಯವರ ಪಟ್ಟಿಯಲ್ಲಿಯೂ ಹಾಗೂ ಮೂರನೇ ಒಂದರಷ್ಟು ಕ್ರಿಶ್ಚಿಯನ್ನರು ಪರಿಶಿಷ್ಟ ಪಂಗಡಗಳವರೂ ಆಗಿದ್ದಾರೆ ಎಂದು ತಿಳಿಸಿದೆ.

| ಧರ್ಮ | ಪ.ಜಾತಿ | ಪ.ಪಂಗಡ |
|---|---|---|
| ಬೌದ್ಧ | 89.5% | 7.4% |
| ಕ್ರಿಶ್ಚಿಯನ್ | 9.0% | 32.8% |
| ಹಿಂದೂ | 22.2% | 9.1% |
| ಇಸ್ಲಾಂ | 0.8% | 0.5% |
| ಜೈನರು | – | 2.6% |
| ಸಿಖ್ಖರು | 30.7% | 0.9% |
| ಜರೋಸ್ತರು | – | 15.9% |
| ಇತರೆ | 2.6% | 82.5% |

*(ಭಾರತದಲ್ಲಿರುವ ಮುಸ್ಲಿಮ್ ಸಮುದಾಯದಾಯದವರ ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕ ಸ್ಥಿತಿಗತಿಗಳಿಗೆ ಪ್ರಧಾನಮಂತ್ರಿಯವರ ಉನ್ನತ ಮಟ್ಟದ ಸಮಿತಿ, ಪುಟ 7)*

ಇನ್ನು ದಲಿತ ಮುಸ್ಲಿಮರು ಹಾಗೂ ದಲಿತ ಕ್ರಿಶ್ಚಿಯನ್ನರನ್ನು ಒಟ್ಟಾಗಿ ತೆಗೆದುಕೊಂಡರೆ, ಸುಮಾರು 30 ಲಕ್ಷದಷ್ಟಿದ್ದು, ಎಲ್ಲಾ ಗ್ರಾಮೀಣ ದಲಿತರ ಶೇ 1.25%ರಷ್ಟೂ ಹಾಗೂ ಎಲ್ಲಾ ನಗರಗಳಲ್ಲಿ ಇರುವ ದಲಿತರ ಸುಮಾರು 2.25%ರಷ್ಟಿದ್ದಾರೆ *(NCM, Dalits in the Muslim and Christian Communities: A Status Report on Current Social Scientific Knowledge, New Delhi, 2008, p.82)*

ಪ.ಪಂಗಡಗಳವರ ವಿಚಾರದಲ್ಲಿ ಪ.ಜಾತಿಯವರಂತಿಲ್ಲ. ಅವರು ಯಾವುದೇ ಧಾರ್ಮಿಕ ಹಿನ್ನೆಲೆಯುಳ್ಳವರಾಗಿದ್ದರೂ ಸಹ ಅವರಿಗೆ ಮೀಸಲಾತಿ ದೊರೆಯುತ್ತದೆ. ಪ.ಪಂಗಡಗಳಿಗೆ ಸೇರಿದ ಮುಸ್ಲಿಮರು ಬಹಳ ಕಡಿಮೆ ಸಂಖ್ಯೆಯಲ್ಲಿದ್ದಾರೆ. 1991ರ ಜನಗಣತಿಯ ಪ್ರಕಾರ, ಇಡೀ ದೇಶದ ಪ.ಪಂಗಡಗಳವರ ಜನಸಂಖ್ಯೆಯ ಶೇ. 0.25% ಮಾತ್ರ ಇವರಿದ್ದಾರೆ. ಇಲ್ಲಿ ಒಂದು ವಿಚಾರವನ್ನು ನಾವೆಲ್ಲ ಗಮನಿಸಬೇಕಿದೆ, ಅದೇನೆಂದರೆ ಪ.ಪಂಗಡಗಳವರು ಯಾವುದೇ ಧಾರ್ಮಿಕ ಹಿನ್ನೆಲೆಯುಳ್ಳವರಾಗಿದ್ದರೂ ಅವರಿಗೆ ಪರಿಶಿಷ್ಟ ಪಂಗಡಗಳ ಸ್ಥಾನಮಾನ ದೊರೆಯುತ್ತದೆ. ಆದರೆ, ಬುಡಕಟ್ಟು ಜನಾಂಗದ ಹಿನ್ನೆಲೆಯಿರುವ ಯಾವುದೇ ಮುಸ್ಲಿಮರಿಗೆ ಮಾತ್ರ ಈ ಪರಿಶಿಷ್ಟ ಪಂಗಡಗಳ ಸ್ಥಾನಮಾನ ದೊರೆಯುವುದಿಲ್ಲ. ಮುಸ್ಲಿಮ್ ಸಮೂಹವು ಪ.ಪಂಗಡಗಳ ಸ್ಥಾನಮಾನವನ್ನು ಕೋರಿ ಸಲ್ಲಿಸಿರುವ ಅನೇಕ ಕೋರಿಕೆಗಳು ಸ್ಪಂದನೆಗೊಳ್ಳದೆ ಹಾಗೇ ಉಳಿದಿವೆ. *(ಭಾರತದಲ್ಲಿರುವ ಮುಸ್ಲಿಮ್ ಸಮುದಾಯದಾಯದವರ ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕ ಸ್ಥಿತಿಗತಿಗಳಿಗೆ ಪ್ರಧಾನಮಂತ್ರಿಯವರ ಉನ್ನತ ಮಟ್ಟದ ಸಮಿತಿ, ಪುಟ 82)*

# ಕಾಯ್ದೆಯ ಹೊರಗುಳಿದ ದುರ್ಬಲರ ಮೇಲಿನ ದೌರ್ಜನ್ಯ-ಸ್ಥಿತಿಗತಿ

**ಧಾರ್ಮಿಕ ಅಲ್ಪಸಂಖ್ಯಾತ ಪರಿಶಿಷ್ಟರ ಮೇಲೆ ದೌರ್ಜನ್ಯ ಯಾವು? ಅವುಗಳ ಪರಿಣಾಮವೇನು?**

**ಧಾರ್ಮಿಕ ಘರ್ಷಣೆ-ಏರುಮುಖ:**

| **2007ರಲ್ಲಿ** | **2008ರಲ್ಲಿ** |
|---|---|
| 761 ಘಟನೆಗಳು | 943 ಘಟನೆಗಳು |
| 99 ಜನರ ಹತ್ಯೆ | 167 ಜನರು ಸಾವನ್ನಪ್ಪಿದರು |
| 2,227 ಜನರು ಗಾಯಗೊಂಡರು | 2,354 ಜನರು ಗಾಯಗೊಂಡರು |

ಹಿಂಸಾತ್ಮಕ ಧಾರ್ಮಿಕ ಘರ್ಷಣೆ ಹೆಚ್ಚುತ್ತಿವೆ. ವಿಶೇಷವಾಗಿ ಇತ್ತೀಚೆಗೆ ಒಂದು ರಾಜ್ಯದಲ್ಲಿ(ಗುಜರಾತ್) ಮುಸ್ಲಿಮ್ ಮಹಿಳೆಯರನ್ನು ಗುರಿಯಾಗಿಸಿಕೊಂಡು ಅವರ ಮೇಲೆ ಲೈಂಗಿಕ ಹಿಂಸಾಚಾರ ಮಾಡಲಾಯಿತು. ಇದರಿಂದಾಗಿ ಈ ಹಿಂಸೆಯ ನೇರ ಪರಿಣಾಮ ಬೀರದಿರುವ ದೇಶದ ಇತರ ಪ್ರದೇಶಗಳಲ್ಲಿಯೂ ಭೀತಿಯ ವಾತಾವರಣ ಮೂಡಿತ್ತು. ಈ ಘಟನೆ ಕಣ್ಣಿಗೆ ಕಾಣುವ ದುಷ್ಪರಿಣಾಮ ಬೀರಿದೆ, ವಿಶೇಷವಾಗಿ ಹೆಣ್ಣುಮಕ್ಕಳ ಸ್ವಾತಂತ್ರ ಮತ್ತು ಅವರ ಶಿಕ್ಷಣದ ಮೇಲಾಗಿರುವ ಪರಿಣಾಮ. ಪೋಲೀಸ್ ಇಲಾಖೆಯಲ್ಲಿ ಮುಸ್ಲಿಮ್ ಸಿಬ್ಬಂಧಿಗಳ ಕೊರತೆಯಿಂದಾಗಿ ದೇಶದ ಎಲ್ಲಾ ರಾಜ್ಯಗಳಲ್ಲಿಯೂ ಹೆಚ್ಚಿನ ಅಭದ್ರತೆಯ ಪ್ರಜ್ಞೆ ವಿಶೇಷವಾಗಿ ಧಾರ್ಮಿಕ ಘರ್ಷಣೆಗಳ ಸಂದರ್ಭದಲ್ಲಿ ಕಾಣುತ್ತಿದೆ.

*(ಪ್ರಧಾನ ಮಂತ್ರಿಗಳ ಉನ್ನತ ಸಮಿತಿ, ಭಾರತದ ಮುಸ್ಲಿಮ್ ಸಮುದಾಯದ ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕ ಸ್ಥಿತಿಗತಿ, 2006, ಪುಟ 14)*

**ಹಿಂದೂ-ಮುಸ್ಲಿಮರ ಘರ್ಷಣೆ:**

*2007ರಲ್ಲಿ*

⇒ **ಘಟನೆಗಳು:** ದೇಶಾದ್ಯಂತ ಒಟ್ಟು 681 ಧಾರ್ಮಿಕ ಘರ್ಷಣೆಗಳು ಜರುಗಿದೆಯೆಂದು ವರದಿಯಾಗಿವೆ. ತತ್ಪರಿಣಾಮ 93 ಜನರು ಮರಣ ಹೊಂದಿದ್ದಾರೆ ಹಾಗೂ 2117 ಜನರಿಗೆ ಗಾಯಗಳಾಗಿವೆ.

*2008ರಲ್ಲಿ*

⇒ **ಘಟನೆಗಳು:** 656 ಘರ್ಷಣೆ, 4 ದಂಗೆ, ಇದರಿಂದಾಗಿ 123 ಜನರು ಅಸುನೀಗಿದ್ದಾರೆ, 2,272 ಜನರು ಗಾಯಗೊಂಡಿದ್ದಾರೆ.

⇒ **ಬಹುತೇಕ ಘರ್ಷಣೆ-:** ಮಧ್ಯಪ್ರದೇಶ, ಉತ್ತರಪ್ರದೇಶ, ಮಹಾರಾಷ್ಟ್ರ ಮತ್ತು ಕರ್ನಾಟಕ ರಾಜ್ಯಗಳಲ್ಲಿ ಉಂಟಾದವು.

⇒ **ದಂಗೆ-ಪ್ರದೇಶ:** ಜುಲೈ 3ರಂದು ಮಧ್ಯಪ್ರದೇಶದ ಇಂಡೋರ್‌ನಲ್ಲಿ ದಂಗೆಯಾಯಿತು. ತತ್ಪರಿಣಾಮವಾಗಿ 8 ಜನರು ಸಾವನ್ನಪ್ಪಿದರು ಮತ್ತು 30 ಜನ ಗಾಯಗೊಂಡರು;

ಅಕ್ಟೋಬರ್ 5-8 ರವರೆಗೆ ಮಹಾರಾಷ್ಟ್ರದ ಧೂಲೆಯಲ್ಲಿ ದಂಗೆಯಾಯಿತು. ಇದರಿಂದಾಗಿ 9 ಜನರು ಅಸುನೀಗಿ 176 ಜನರು ಗಾಯಗೊಂಡರು;

ಆಂಧ್ರಪ್ರದೇಶದ ಆದಿಲಾಬಾದಿಅಲ್ಲಿ ಅಕ್ಟೋಬರ್ 10ರಿಂದ 12ರವರೆಗೆ ದಂಗೆಯಾಯಿತು ತತ್ಪರಿಣಾಮ 10 ಜನರು ಪ್ರಾಣ ಕಳೆದುಕೊಂಡರು, 4 ಜನರು ಗಾಯಗೊಂಡರು;

ಅಕ್ಟೋಬರ್ 11ರಂದು ಮಧ್ಯಪ್ರದೇಶದ ಬುರಾನಪುರದಲ್ಲಿ ಉಂಟಾದ ದಂಗೆಯ ಪರಿಣಾಮ 9 ಜನರು ಸಾವನ್ನಪ್ಪಿದರು 25 ಜನರು ಗಾಯಗೊಂಡರು

*(ಗೃಹ ಸಚಿವಾಲಯ, ವಾರ್ಷಿಕ ವರದಿಗಳು 2007-08 ಮತ್ತು 2008-09)*

**ಹಿಂದೂ-ಕ್ರಿಶ್ಚಿಯನ್ ಘರ್ಷಣೆ**

*2007ರಲ್ಲಿ:*

⇒ **ಘಟನೆಗಳು:** 80 ಧಾರ್ಮಿಕ ಘರ್ಷಣೆ, ಇದರಿಂದ 3 ಜನರು ಮರಣವನ್ನಪ್ಪಿ 110 ಜನರು ಗಾಯಗೊಂಡರು

*2008ರಲ್ಲಿ:*

⇒ **ಘಟನೆಗಳು:** ದೇಶಾದ್ಯಂತ 287 ಹಿಂದೂ-ಕ್ರಿಶ್ಚಿಯನ್ ಘರ್ಷಣೆಗಳಾದವು. ಇದರಿಂದಾಗಿ 44 ಜನರು ಸಾವನ್ನಪ್ಪಿ 82 ಜನರು ಗಾಯಗೊಂಡರು

***ಹೆಚ್ಚಿನ ಘಟನೆಗಳು ಜರುಗಿದ ರಾಜ್ಯಗಳು:***

- ಓರಿಸ್ಸಾದಲ್ಲಿ ಕ್ರಿಶ್ಚಿಯನ್ ಸಮುದಾಯ ಹಾಗೂ ಅವರ ಧಾರ್ಮಿಕ ಕಟ್ಟಡಗಳ ಮೇಲೆ ಹೆಚ್ಚು ಪ್ರಮಾಣದ ದಾಳಿಗಳಾದವು. ವಿಶೇಷವಾಗಿ 23/08/2008ರಂದು, ಸ್ವಾಮಿ ಲಕ್ಷ್ಮಣಾನಂದ ಸರಸ್ವತಿ ಮತ್ತವರ ನಾಲ್ಕು ಸಹಚರರು ಕೊಲೆಯಾದ ಹಿನ್ನೆಲೆಯಲ್ಲಿ ಖಂಡಮಾಲ್ ಜಿಲ್ಲೆಯಲ್ಲಿ ಜರುಗಿದ ಘರ್ಷಣೆಗಳಲ್ಲಿ, ಉಂಟಾದ ಪ್ರಕ್ಷೋಭೆಯಿಂದ 40 ಜನರು ಸಾವಿಗೀಡಾದರು. ಈ ಹಿಂಸಾತ್ಮಕ ಘಟನೆಯಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಧಾರ್ಮಿಕ ಆಸ್ತಿಪಾಸ್ತಿಗಳು ಹಾನಿಗೊಳಗಾದವೆಂದು ವರದಿಯಾಗಿದೆ.
- ಸೆಪ್ಟೆಂಬರ್ 2008ರಲ್ಲಿ ಕರ್ನಾಟಕದಲ್ಲಿಯೂ ಕ್ರಿಶ್ಚಿಯನ್ ಧಾರ್ಮಿಕ ಕಟ್ಟಡಗಳು ದಾಳಿಗೊಳಗಾಗಿ ಹಾನಿಗೊಳಪಟ್ಟವು.
- ಕೇಂದ್ರದ ಗೃಹಮಂತ್ರಾಲಯವು ಈ ಸಂದರ್ಭದಲ್ಲಿ ಹಿಂಸೆಯನ್ನು ಹತ್ತಿಕ್ಕಲು ಹಾಗೂ ಶಾಂತಿಯನ್ನು ಪುನರ್‌ಸ್ಥಾಪಿಸುವ ಸಲುವಾಗಿ ರಾಜ್ಯ ಸರ್ಕಾರಗಳಿಗೆ ಸಲಹೆ ಸೂಚನೆಗಳನ್ನು ಕೊಡುವುದರ ಜೊತೆಗೆ ಹೆಚ್ಚುವರಿ ಅರೆಸೇನಾಪಡೆಗಳನ್ನು ಕಳುಹಿಸಿತು.

*(ಗೃಹ ಸಚಿವಾಲಯ, ವಾರ್ಷಿಕ ವರದಿಗಳು 2007-08 ಮತ್ತು 2008-09)*

**ಓರಿಸ್ಸಾದ ಘಟನೆಗಳಿಗೆ ಸಂಬಂಧಿಸಿದಂತೆ ಸ್ವತಂತ್ರ ಸತ್ಯಶೋಧನೆ ತಂಡವು ಈ ರೀತಿಯಾಗಿ ವರದಿ ಮಾಡುತ್ತಾರೆ.**

ಓರಿಸ್ಸಾದ ಖಂಡಮಾಲ್‌ನಲ್ಲಿ ಜರುಗಿದ ಧಾರ್ಮಿಕ ಘರ್ಷಣೆಗಳ ಮೊದಲು ದೇಶದಾದ್ಯಂತ ಜರುಗಿರುವ 200ಕ್ಕೂ ಹೆಚ್ಚು ಹಿಂಸೆಯ ಪ್ರಕರಣಗಳನ್ನು(ಕ್ರಿಶ್ಚಿಯನ್ನರ ಮೇಲೆ) ನಾವು ದಾಖಲಿಸಿದ್ದೇವೆ. ಖಂಡಮಾಲ್‌ನಲ್ಲಿ ಜರುಗಿರುವ ಹಿಂಸೆಗಳನ್ನು ಬುಡಕಟ್ಟು ಜನಾಂಗ ಹಾಗೂ ಕ್ರಿಶ್ಚಿಯನ್ನರ ನಡುವಿನ ಘರ್ಷಣೆ ಎಂದು ಬಿಂಬಿಸಲು ಪ್ರಯತ್ನಗಳು ನಡೆಯುತ್ತಿವೆ. ಆದರೆ ಸಾಕ್ಷ್ಯಾಧ್ಯಾರಗಳು ವಿರುದ್ಧ ಸ್ಥಿತಿಯನ್ನು ತಿಳಿಸುತ್ತವೆ. ಬುಡಕಟ್ಟು ಕ್ರಿಶ್ಚಿಯನ್ನರ ಹಾಗೂ ಕ್ರಿಶ್ಚಿಯನ್ನೇತರ ಬುಡಕಟ್ಟು ಜನಾಂಗದವರ ನಡುವಿನ ಸಂಬಂಧ ಹಾಗೂ ದಲಿತರ ಹಾಗೂ ಕ್ರಿಶ್ಚಿಯನ್ ದಲಿತರ ಸಂಬಂಧ ಈ ಹಿಂದಿನಂತೆ ಉತ್ತಮವಾಗಿದೆ. ದಲಿತರನ್ನು ಹಾಗೂ ಬುಡಕಟ್ಟು ಕ್ರಿಶ್ಚಿಯನ್ನರನ್ನು ಗುರಿಯಾಗಿಸಿಕೊಂಡು ರಾಜಕೀಯ ಧಾರ್ಮಿಕ ಮೂಲಭೂತವಾದಿಗಳು ಮಾಡುತ್ತಿರುವ ದಾಳಿಯ ಸಮಸ್ಯೆ ಹಾಗೆಯೇ ಉಳಿದುಕೊಂಡಿದೆ

*(Preliminary Report of Non-Government Fact-Finding Team on Violence in Kandhamal District, Orissa, based on visits 29/12/2007-03/01/2008, releaseed at Bhubaneswar on 05/01/2008)*

## ಧಾರ್ಮಿಕ ಅಲ್ಪ ಸಂಖ್ಯಾತರ ಸಾಮಾಜಿಕ ಆರ್ಥಿಕ ಪರಿಸ್ಥಿತಿಗೆ ಸ್ಪಂದನೆ?
## ಧಾರ್ಮಿಕ ಅಲ್ಪ ಸಂಖ್ಯಾತರ ವಿರುದ್ಧ ಧಾರ್ಮಿಕ ಘರ್ಷಣೆಗಳಿಗೆ ಸ್ಪಂದನೆ?

⇒ **2006ರ ಸಾಚಾರ್ ವರದಿ:** ಭಾರತದಲ್ಲಿ ಮುಸ್ಲಿಮರ ಇಂದಿನ ಸಾಮಾಜಿಕ ಆರ್ಥಿಕ ದುಸ್ಥಿತಿಯ ಕುರಿತು ಹೆಚ್ಚು ಕಾಳಜಿ ವಹಿಸಿ ಈ ಸಮುದಾಯಕ್ಕೆ ಉದ್ಯೋಗದಲ್ಲಿ ಹಾಗೂ ಶೈಕ್ಷಣಿಕ ಸಂಸ್ಥೆಗಳಲ್ಲಿ ಹೆಚ್ಚಿನ ಪಾಲು ದೊರಕುವಂತೆ ಮಾಡಿತು. *(ಭಾರತದಲ್ಲಿರುವ ಮುಸ್ಲಿಮ್ ಸಮುದಾಯದಾಯದವರ ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕ ಸ್ಥಿತಿಗತಿಗಳಿಗೆ ಪ್ರಧಾನಮಂತ್ರಿಯವರ ಉನ್ನತ ಮಟ್ಟದ ಸಮಿತಿ, 2006)*

ಆದರೆ ಮುಸ್ಲಿಮರನ್ನು ಹೆಚ್ಚು ಓಲೈಸಲಾಗುತ್ತಿದೆ ಎಂಬುದಾಗಿ ಸುಳ್ಳು ಪ್ರಚಾರ ಮಾಡುತ್ತಿರುವ ಬಿ.ಜೆ.ಪಿ ಮತ್ತು ಸಂಘ ಪರಿವಾರದ ನಿಜ ಬಣ್ಣವನ್ನು ಸಾಚಾರ್ ವರದಿ ಬಯಲು ಮಾಡಿತ್ತು. ಆದರೆ ಮತ್ತೊಂದೆಡೆ ಕಾಂಗ್ರೆಸ್ ನಾಯಕತ್ವದ ಕಾಂಗ್ರೆಸ್ ಸರ್ಕಾರ ಸಾಚಾರ್ ವರದಿಯನ್ನು ಅರೆಮನಸ್ಸಿನಿಂದ ಅನುಷ್ಠಾನಗೊಳಿಸಿದ್ದು ಅದರಲ್ಲಿರುವ ಬಹುತೇಕ ಬಹುಮುಖ್ಯ ಶಿಫಾರಸ್ಸುಗಳನ್ನು ನಿರ್ಲಕ್ಷಿಸಿದೆ.

⇒ **ರಂಗನಾಥ್ ಮಿಶ್ರಾ ವರದಿ 2007:** ಜಾತಿ ಒಂದು ಸಾಮಾಜಿಕ ಸಮಸ್ಯೆಯಾಗಿದ್ದು ಭಾರತದ ಬಹುತೇಕ ಎಲ್ಲಾ ಸಮುದಾಯಗಳೂ ಯಾವುದೇ ಧಾರ್ಮಿಕ ಹಿನ್ನೆಲೆಯಿದ್ದಾಗ್ಯೂ ಎಲ್ಲಾ ಧರ್ಮದಲ್ಲಿರುವ ಪರಿಶಿಷ್ಟ ಜಾತಿಯವರೂ ಸಾಮಾಜಿಕವಾಗಿ ಕೀಳ್ಮಟ್ಟದ ಸ್ಥಾನ ಹಾಗೂ ಕೀಳು ಉಪಚಾರದಿಂದ ಬಾಧಿತರಾಗಿದ್ದಾರೆ. ಸಧರ್ಮೀಯರೂ ಹಾಗೂ ಇತರರಿಂದಲೂ ಈ ಸಮಸ್ಯೆಗೆ ಒಳಗಾಗಿದ್ದಾರೆ ಎಂಬುದಾಗಿ ಈ ಆಯೋಗವು ಗುರುತಿಸಿತು. ಹಾಗೆ ಒಂದು ಶಿಫಾರಸ್ಸನ್ನು ಸಹ ಮಾಡಿತು. ಅದೇನೆಂದರೆ 1950ರ ಸಂವಿಧಾನದ ಅದೇಶದ (ಪ.ಜಾತಿಯವರ) 3ನೇ ಪ್ಯಾರಾವನ್ನು ಪೂರ್ಣವಾಗಿ ತೆಗೆದುಹಾಕಿ, ಬದಲಿಗೆ ಪ.ಪಂಗಡಗಳವರು ಬೇರೆ ಧರ್ಮದಲ್ಲಿ ಇದ್ದರೂ ದೊರೆಯುವ ಪರಿಶಿಷ್ಟ ಸ್ಥಾನಮಾನವನ್ನು ಪ.ಜಾತಿಯವರಿಗೂ ನೀಡಬೇಕು. *(Ministry of Minority Affairs, Report of the National Commission for Religious and Lingusitic Minorites, New Delhi, 2007, pp. 153-4)*

ಆದರೆ ರಂಗನಾಥ್ ಮಿಶ್ರಾ ಆಯೋಗವು ಶಿಫಾರಸ್ಸುಗಳನ್ನು ಮಾಡಿದ್ದಾಗ್ಯೂ ಈ ವರದಿಯನ್ನು ಸಂಸತ್ತಿನಲ್ಲಿ ಮಂಡಿಸಲು ಸರ್ಕಾರ ವಿಫಲವಾಗಿದೆ *(Communist Party of India (Marxist), Highlights of Pamphlet on Minorities 27/03/2009, www.cpim.org/content/highlights-pamphlet-minorities)*

⇒ **ಅಲ್ಪ ಸಂಖ್ಯಾತರ ರಾಷ್ಟ್ರೀಯ ಆಯೋಗ:** ದಲಿತ ಮುಸ್ಲಿಮರಿಗೆ ಹಾಗೂ ದಲಿತ ಕ್ರಿಶ್ಚಿಯನ್ನರಿಗೆ ಪರಿಶಿಷ್ಟ ಜಾತಿಯ ಸ್ಥಾನಮಾನ ನೀಡದೇ ಇರಲು ಬಲವಾದ ಕಾರಣಗಳೇನೂ ಕಾಣುತ್ತಿಲ್ಲ.... ಇದನ್ನು ಸಕಾರಾತ್ಮಕವಾಗಿ ನೋಡಬೇಕೋ (ಪರಿಶಿಷ್ಟ ಸ್ಥಾನದ ಸಮರ್ಥನೆ) ನಕಾರಾತ್ಮಕವಾಗಿ ನೋಡಬೇಕೋ(ಪರಿಶಿಷ್ಟ ಸ್ಥಾನ ನೀಡದಿರುವುದು). ಆದರೆ, ದಲಿತ ಮುಸ್ಲಿಮರನ್ನು ಹಾಗೂ ದಲಿತ ಕ್ರಿಶ್ಚಿಯನ್ನರನ್ನು ಇತರೆ ವರ್ಗದವರಿಗಿಂತ ಭಿನ್ನವಾಗಿ ಪರಿಗಣಿಸಬೇಕೆಂಬ ವಾದವನ್ನು ಸಮರ್ಥಿಸಿಕೊಳ್ಳಲಾಗುವುದಿಲ್ಲ.... ದಲಿತ ಮುಸ್ಲಿಮ್ ಮತ್ತು ಕ್ರಿಶ್ಚಿಯನ್ನರಿಗೆ ಶಾಸನಬದ್ಧ ಸ್ಥಾನಮಾನ ನೀಡುವುದರಿಂದ, ಆಗಿರುವ ತಪ್ಪನ್ನು ಸರಿಪಡಿಸಿದಂತಾಗುತ್ತದೆ. ಅಷ್ಟೇ ಅಲ್ಲದೆ ರಾಜಕೀಯ-ನ್ಯಾಯಾಂಗ ವ್ಯವಸ್ಥೆಯಲ್ಲಿರುವ ನ್ಯೂನತೆಯನ್ನು ಸರಿಪಡಿಸಿ ಪಕ್ಷಪಾತವನ್ನು ನಿರ್ಮೂಲನೆ ಮಾಡಿದಂತಾಗುತ್ತದೆ. *(NCM, Dalits in the Muslim and Christian Communities: A Status Report on Current Social Scientific Knowledge, New Delhi, 2008, pp.81, 83)*

⇒ **UN CERD Committee:** ಜಾತಿ ಬೇಧಭಾವದಿಂದ ತಪ್ಪಿಸಿಕೊಳ್ಳಲು ಇಸ್ಲಾಮ್ ಹಾಗೂ ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರಗೊಳ್ಳುವ ದಲಿತರು ತಮಗೆ ನ್ಯಾಯವಾಗಿ ಲಭಿಸಬೇಕಿರುವ ಸವಲತ್ತುಗಳನ್ನು ಕಳೆದುಕೊಳ್ಳುತ್ತಾರೆ. ಇದು ಬೌದ್ಧ ಅಥವಾ ಸಿಖ್ ಧರ್ಮಕ್ಕೆ ಮತಾಂತರಕ್ಕಿಂತ ಭಿನ್ನವಾಗಿದೆ ಎಂಬುದು ಈ ಸಮಿತಿ ಗುರುತಿಸುತ್ತದೆ. ಇದೊಂದು ಕಳವಳಕಾರಿ ವಿಚಾರ ಎಂಬುದನ್ನು ಈ ಸಮಿತಿ ಮನಗಂಡಿದೆ. ಈ ನಿಟ್ಟಿನಲ್ಲಿ ಯಾವುದೇ ಧರ್ಮಗಳಿಗೆ ಮತಾಂತರಗೊಂಡಿರುವ ಎಲ್ಲಾ ಪರಿಶಿಷ್ಟರಿಗೆ ರಾಷ್ಟ್ರೀಯ ಕಾರ್ಯಕ್ರಮಗಳ ಸೌಕರ್ಯಗಳನ್ನು (ಹಾಗೂ ದೌರ್ಜನ್ಯ ತಡೆ ಕಾಯ್ದೆಯಡಿ ರಕ್ಷಣೆಯನ್ನೂ) ಪಡೆಯುವಂತಾಗಲು ರಾಜ್ಯ ಸರ್ಕಾರಗಳು ಕ್ರಮ ಕೈಗೊಳ್ಳಬೇಕಾಗಿ ಈ ಸಮಿತಿ ಶಿಫಾರಸ್ಸು ಮಾಡುತ್ತದೆ*(UN CERD Committee, Concluding Observations on Government of India Report, CERD/IND/CO/19, 2007, para 21)*

# ಭವಿಷ್ಯ: ಶಿಫಾರಸ್ಸು ಮತ್ತು ತಿದ್ದುಪಡಿ ಪ್ರಸ್ತಾವನೆ

ಸಾರ್ವಭೌಮ ಭಾರತ ಗಣರಾಜ್ಯಗ ಕೇಂದ್ರ ಮತ್ತು ರಾಜ್ಯ ಸರ್ಕಾರಗಳೆರಡೂ ಪರಿಶಿಷ್ಟರ ಮೇಲೆ ಹೆಚ್ಚಿರುವ ಹಾಗೂ ಮುಂದುವರೆದಿರುವ ದೌರ್ಜನ್ಯಗಳ ಕುರಿತು ಆದ್ಯತೆಯಲ್ಲಿ ಸ್ಪಂದಿಸಬೇಕು. ಆ ಮೂಲಕ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ (ದೌರ್ಜನ್ಯ ತಡೆ) ಕಾಯ್ದೆ–1989 ಹಾಗೂ ನಿಯಮ 1995ರ ಪರಿಣಾಮಕಾರಿ ಅನುಷ್ಠಾನಕ್ಕಾಗಿ ಜರೂರು ಕ್ರಮ ಜರುಗಿಸಬೇಕು.

**ಈ ನಿಟ್ಟಿನಲ್ಲಿ ಮೊದಲ ಹೆಜ್ಜೆಯಾಗಿ ಕಾಯ್ದೆಯ ಅನುಷ್ಠಾನ ಪರಿಶೀಲಿಸಲು, ಕಾಯ್ದೆಯ ಉದ್ದೇಶಗಳು ಈಡೇರಿವೆಯೇ ಎಂಬುದನ್ನು ವಿಶ್ಲೇಷಿಸಲು, ಕಾಯ್ದೆಯ ಬಲವರ್ಧನೆಗಾಗಿ ಕ್ರಮ ಕೈಗೊಳ್ಳಲು ಹಾಗೂ ಭವಿಷ್ಯದಲ್ಲಿ ಪರಿಣಾಮಕಾರಿ ಅನುಷ್ಠಾನಕ್ಕಾಗಿ ಕೇಂದ್ರ ಮತ್ತು ರಾಜ್ಯ/ಕೇಂದ್ರಾಡಳಿತ ಪ್ರದೇಶಗಳಲ್ಲಿ ಉನ್ನತ ಮಟ್ಟದ ಸಮಿತಿ ರಚನೆಯಾಗಬೇಕು. ಅಂತಹ ಕ್ರಮಗಳಲ್ಲಿ ಕಾಯ್ದೆ ಮತ್ತು ನಿಯಮಗಳ ಯಶಸ್ವೀ ಅನುಷ್ಠಾನಕ್ಕಾಗಿ ಅವುಗಳ ಬಲವರ್ಧನೆಗೆ ಅಗತ್ಯದ ತಿದ್ದುಪಡಿ ಮಾಡಲು ಸೂಕ್ತ ಕ್ರಮ ಕೈಗೊಳ್ಳುವಂತೆ ಕೇಂದ್ರ ಮತ್ತು ರಾಜ್ಯ ಸಚಿವಾಲಯಗಳಿಗೆ ನಿರ್ದೇಶನ ಸಹ ಇರಬೇಕು.**

ದೌರ್ಜನ್ಯಗಳನ್ನು ತಗ್ಗಿಸಲು, ಒಂದೊಮ್ಮೆ ದೌರ್ಜನ್ಯಗಳಾದರೆ ದೌರ್ಜನ್ಯಕ್ಕೆ ಬಲಿಯಾದ ಪರಿಶಿಷ್ಟರಿಗೆ ನ್ಯಾಯ ದೊರಕುವಂತಾಗಲು ಕಾಯ್ದೆಗೆ ಈ ಮುಂದಿನ ತಿದ್ದುಪಡಿ ಮಾಡಬೇಕೆಂದು ಸಾರ್ವಭೌಮ ಭಾರತ ಗಣರಾಜ್ಯಕ್ಕೆ ಪ್ರಸ್ತಾವನೆ ಸಲ್ಲಿಸುತ್ತೇವೆ.

## ಪ್ರಸ್ತಾವಿತ ತಿದ್ದುಪಡಿ–ಪ್ರಸ್ತಾವನೆ

**"ಈ ದೌರ್ಜನ್ಯ ಮತ್ತು ನಿಂದನೆ ಪ್ರಕರಣದಲ್ಲಿ ಅರೋಪಿ ಮೇಲ್ಜಾತಿಯ ರೆಡ್ಡಿಯಾಗಿದ್ದು, ದೌರ್ಜನ್ಯಕ್ಕೊಳಗಾದ ವ್ಯಕ್ತಿ ಕೀಳು ಜಾತಿಯವರು ಎಂಬ ಏಕೈಕ ಕಾರಣಕ್ಕೆ ಈ ದೌರ್ಜನ್ಯ ಎಸಗಲಾಗಿದೆ. ಈ ಅಪರಾಧ ದೌರ್ಜನ್ಯಕ್ಕೆ ಬಲಿಯಾದ ವ್ಯಕ್ತಿಗೆ ಮಾತ್ರವಲ್ಲ, ಬದಲಿಗೆ ಇಡೀ ಸಮಾಜಕ್ಕೆ ಮಾಡಿದ ಅಪರಾಧ, ಅಂತಿಮವಾಗಿ ರಾಷ್ಟ್ರಕ್ಕೆ ಮಾಡಿದ ಅಪರಾಧವಾಗಿದೆ".** *(ಶ್ರೀ. ಬಾಲಯೋಗಿ, ವಿಶೇಷ ಸೆಷನ್ ನ್ಯಾಯಾಧೀಶರು, ಗುಂಟೂರು ಪ್ರಕರಣ–ಗುಂಟೂರು, 55/ ಎಸ್ /2003)*

ಈ ಮಾತುಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಕಾಯ್ದೆಯ ಸಾರಾಂಶವನ್ನು ತಿಳಿಸುತ್ತವೆ. ಸಂವಿಧಾನ ಸ್ಥಾಪಿಸಿದ ಗಣರಾಜ್ಯದ ಮೌಲ್ಯಗಳಿಗೆ ಜಾತಿ ಪದ್ಧತಿ ವಿರೋಧಿಯಾಗಿದೆ. ಆದರೂ, ಜಾತಿ ಬೇಧಭಾವ ದೇಶಾದ್ಯಂತ ವ್ಯಾಪಕವಾಗಿ ಹಬ್ಬಿದೆ. ಹಲವು ದಶಕಗಳಿಂದ ಪರಿಶಿಷ್ಟರ ಸಾಮಾಜಿಕ ಸ್ಥಿತಿಗತಿಗಳ ಅಭಿವೃದ್ಧಿಗಾಗಿ ಹಲವಾರು ಕಾಯ್ದೆ, ನೀತಿ, ನಿಯಮಗಳನ್ನು ಹೊರಹೊಮ್ಮಿವೆ. ದುರಾದೃಷ್ಟವಶಾತ್ ಇವುಗಳಿಗೂ ದೇಶದಲ್ಲಿ ಆಳವಾಗಿ ಬೇರೂರಿರುವ ಜಾತಿಯಾಧಾರದ ತಾರತಮ್ಯವನ್ನು ನಿರ್ಮೂಲನೆ ಮಾಡಲು ಸಾಧ್ಯವಾಗಿಲ್ಲ.

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಸಾಮಾಜಿಕ ಸ್ಥಿತಿಗತಿಯ ರಕ್ಷಣೆಗಾಗಿ ಜಾರಿಮಾಡಿದ ಹಲವು ಕಾಯ್ದೆಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ (ದೌರ್ಜನ್ಯ ತಡೆ) ಕಾಯ್ದೆ 1989 ಸಹ ಒಂದು. ಇದು ವಿಶೇಷ ಕಾಯ್ದೆಯಾಗಿದ್ದು ಪರಿಶಿಷ್ಟರ ಮೇಲೆ, ಪರಿಶಿಷ್ಟರಲ್ಲದವರು ಮಾಡುವ ದೌರ್ಜನ್ಯವನ್ನು ನಿಗ್ರಹಿಸಲು ಜಾರಿಗೊಳಿಸಲಾಗಿದೆ.

ಈ ವಿಚಾರದಲ್ಲಿ ದೌರ್ಜನ್ಯಕ್ಕೊಳಗಾದವರು, ಸಾಕ್ಷಿಗಳು, ಕಾರ್ಯಕರ್ತರು, ಮತ್ತು ಸಂಘಟನೆಗಳ ಅನುಭವ ಈ ಕಾಯ್ದೆಯ ಅನುಷ್ಠಾನದಲ್ಲಿ ನ್ಯೂನತೆಗಳು ಸಾಕಷ್ಟಿವೆ ಎಂದು ಸಾರಿ ತಿಳಿಸುತ್ತವೆ. ಈ ಕಾಯ್ದೆ ತನ್ನ ನಿರ್ಬಂಧಕ ಶಿಕ್ಷೆ ಮೂಲಕ ಪರಿಶಿಷ್ಟರ ಮೇಲೆ ನಡೆಯುವ ದೌರ್ಜನ್ಯಗಳನ್ನು ತಡೆಯುವಲ್ಲಿ ಸಣ್ಣ ಪ್ರಮಾಣದ ಪರಿಣಾಮ ಉಂಟು ಮಾಡಿದೆ. ಆದರೂ ಪ್ರಾಧಿಕಾರಗಳು ಕೈಗೊಳ್ಳಬೇಕಿರುವ ಪರಿಹಾರೋಪಾಯ, ಕಾಯ್ದೆಯ ಪರಿಣಾಮಕಾರಿ ಅನುಷ್ಠಾನದಲ್ಲಿ ಸಮಗ್ರ ಕ್ರಮ ಕೈಗೊಳ್ಳುವಲ್ಲಿ ಕೆಲವು ನ್ಯೂನತೆಗಳು ಕಂಡಿವೆ. ಪರಿಶಿಷ್ಟ ಜಾತಿಗಳ ರಾಷ್ಟ್ರೀಯ ಆಯೋಗ, ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ ಮತ್ತು ನ್ಯಾಯಮೂರ್ತಿ ಪುನ್ನಯ್ಯ ಆಯೋಗ ಈ ಕಾಯ್ದೆಯ ನ್ಯೂನತೆಗಳನ್ನು ಕೂಲಂಕುಷವಾಗಿ ಪರೀಕ್ಷಿಸಿವೆ ಮತ್ತು ಕಾಯ್ದೆಗೆ ಬಹಳಷ್ಟು ತಿದ್ದುಪಡಿ ತರಲು ಸೂಚಿಸಿವೆ. ಮಾನವ ಹಕ್ಕುಗಳ ಸಂಘ ಸಂಸ್ಥೆಗಳು ಈ ಕಾಯಿದೆ ಮತ್ತು ನಿಯಮಗಳ ಅನುಷ್ಠಾನದಲ್ಲಿರುವ ಅನೇಕ ಕುಂದು ಕೊರತೆಗಳನ್ನು ಎತ್ತಿ ತೋರಿಸಿವೆ. ಅನುಷ್ಠಾನದಲ್ಲಿ ಲೋಪದೋಷವನ್ನು ಸರಿಪಡಿಸಲು ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಸಚಿವಾಲಯ ಹಾಗೂ ಗೃಹ ಸಚಿವಾಲಯ ಅನೇಕ ಸಲಹೆಗಳನ್ನು ರಾಜ್ಯ ಸರ್ಕಾರಗಳಿಗೆ ನೀಡಿವೆ.

ದೌರ್ಜನ್ಯ ತಡೆ ಕಾಯ್ದೆಗೆ 20 ವರ್ಷ ತುಂಬಿದ ಹಿನ್ನೆಲೆಯಲ್ಲಿ ಉತ್ತಮ ಅನುಷ್ಠಾನಕ್ಕಾಗಿ ಕಾರ್ಯನಿರತರಾಗಿರುವ ಸಂಸ್ಥೆ, ಸಂಘಟನೆ, ಕಾರ್ಯಕರ್ತರು ಮತ್ತು ತಜ್ಞರು, ಕಾಯ್ದೆಯ ಆಶಯ ಮತ್ತು ಉದ್ದೇಶಗಳನ್ನು ಗಮನದಲ್ಲಿಟ್ಟು ಅಧ್ಯಯನ ನಡೆಸಿ, ಕಾಯ್ದೆ ಮತ್ತು ನಿಯಮಗಳನ್ನು ಬಲಗೊಳಿಸಿ ಹೆಚ್ಚು ನಿರ್ಬಂಧಕಾರಿ ಕಾಯ್ದೆನ್ನಾಗಿ ಮಾಡಬೇಕಿದೆ.

ದಲಿತ ಮಾನವ ಹಕ್ಕುಗಳ ರಾಷ್ಟ್ರೀಯ ಆಂದೋಲನ (ಎನ್.ಸಿ.ಡಿ.ಹೆಚ್. ಆರ್)–ನ್ಯಾಯಕ್ಕಾಗಿ ರಾಷ್ಟ್ರಮಟ್ಟದ ದಲಿತ ಚಳುವಳಿ ಎಂಬ ಒಂದು ಆಂದೋಲನದ ಮೂಲಕ ಈ ಕಾರ್ಯಕ್ಕೆ ಚಾಲನೆ ನೀಡಿತು. ಜೂನ್ 25 2009ರಂದು ಭಾರತೀಯ ಸಾಮಾಜಿಕ ಸಂಸ್ಥೆ, ದೆಹಲಿಯಲ್ಲಿ, ಈ ಕಾಯ್ದೆಯ ವಸ್ತುಸ್ಥಿತಿ ವರದಿ ಮತ್ತು ಕರಡು ತಿದ್ದುಪಡಿ ತಯಾರಿಸಲು ಕಾರ್ಯತಂಡವನ್ನು ರಚಿಸಲಾಯಿತು. ಈ ಕಾರ್ಯಕಾರಿ ತಂಡದಲ್ಲಿ, ಶ್ರೀಯುತ ಓಸ್ಸಿ ಫರ್ನಾಂಡಿಸ್, ಶ್ರೀಯುತ ನರೇಂದರ್, ಶ್ರೀಯುತ ನಂದಗೋಪಾಲ್, ಪ್ರೊ. ಕ್ರಿಷ್ಣದೇವರಾವ್, ಶ್ರೀಮತಿ ವೃಂದಾ ಗ್ರೋವರ್, ಶ್ರೀ. ರಮೇಶನಾಥನ್ ಮತ್ತು ಡಾ. ಸಿರಿವೆಲ್ಲಾ ಪ್ರಸಾದ್ ಒಳಗೊಂಡಿದ್ದರು.

ಈ ವರದಿಯಲ್ಲಿ ನಾಲ್ಕು ವಿಭಾಗಗಳಿದ್ದು ಮೊದಲ ವಿಭಾಗ ದೌರ್ಜನ್ಯ ತಡೆ ಕಾಯ್ದೆಯ ಹಿನ್ನೆಲೆ ಮತ್ತು ಲಕ್ಷಣಗಳನ್ನು ತಿಳಿಸುತ್ತದೆ, ಎರಡನೆ ವಿಭಾಗ, ಹಲವಾರು ಆಯೋಗಗಳ, ಸಚಿವಾಲಯದ, ಸಂಸ್ಥೆಗಳ ಮತ್ತು ತಜ್ಞರ ವರದಿಗಳನ್ನು ಆಧರಿಸಿ, ಸದರಿ ಕಾಯ್ದೆಯ ಅನುಷ್ಠಾನದಲ್ಲಿ ಕಂಡು ಬಂದಿರುವ ನ್ಯೂನತೆ ಮತ್ತು ಕೊರತೆಗಳನ್ನು ಪರಿಶೀಲಿಸಿದೆ, 3ನೇ ವಿಭಾಗ ಅಗತ್ಯವಿರುವ ತಿದ್ದುಪಡಿ ಹಾಗೂ ಸಮರ್ಥನೆಯನ್ನೂ ಮತ್ತು ಅಂತಿಮವಾಗಿ ಈಗಿರುವ ಕಾಯ್ದೆಯ ಸೆಕ್ಷನ್‌ಗಳು ಹಾಗೂ ಪ್ರಸ್ತಾವಿತ ತಿದ್ದುಪಡಿಯ ಸೆಕ್ಷನ್‌ಗಳನ್ನು ವಿವರವಾಗಿ ತಿಳಿಸುತ್ತದೆ.

## ಭಾಗ-1: ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ (ದೌರ್ಜನ್ಯ ತಡೆ) ಕಾಯ್ದೆ-1989 ಹಿನ್ನೆಲೆ

ಅನಾದಿಕಾಲದಿಂದಲೂ ಆಚರಣೆಯಲ್ಲಿರುವ ಕ್ರೂರ ಅಸ್ಪೃಶ್ಯತೆ ಪದ್ಧತಿಯನ್ನು ಸಂವಿಧಾನದ 17 ನೇ ಅನುಚ್ಛೇದ ನಿಶೇಧಿಸಿದೆ. 17ನೇ ಅನುಚ್ಛೇದ ಭಾರತೀಯರಿಗೆ ನೀಡುವ ವಚನವಾಗಿದೆ. ಇದು ದಲಿತರಿಗೆ ಆಗುವ ಅವಮಾನ, ಕಿರುಕುಳ ಮತ್ತು ತೊಂದರೆಗಳನ್ನು ಹೋಗಲಾಡಿಸಿ, ಅವರಿಗೆ ನ್ಯಾಯವಾಗಿ ದೊರಕಬೇಕಿರುವ ಮೂಲಭೂತ ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಹಕ್ಕುಗಳನ್ನು ಸಲ್ಲುವಂತೆ ಮಾಡಲು ನೀಡಿರುವ ವಚನ. ಈ ವಚನ ಸಂವಿಧಾನ ಅಂಗೀಕೃತಗೊಂಡ ಆರು ವರ್ಷಗಳಲ್ಲಿ ಆಚರಣೆಗೆ ಬಂದಿತು. 1955ರಲ್ಲಿ ಅಸ್ಪೃಶ್ಯತೆ (ಅಪರಾಧ) ಕಾಯ್ದೆ-1955 ರಚನೆಯಾಯಿತು. ಆದರೆ, ಇದರಲ್ಲಿ ಲೋಪದೋಷಗಳಿದ್ದವು, ಈ ಕಾಯ್ದೆಯನ್ನು ಸರಿಪಡಿಸಲು ಸರ್ಕಾರ ಮುಂದಾಯಿತು. ಹಾಗೆ 1976ರಲ್ಲಿ ಈ ಕಾಯ್ದೆಯು ಪರಿಷ್ಕೃತಗೊಂಡು ನಾಗರಿಕ ಹಕ್ಕುಗಳ ಸಂರಕ್ಷಣೆ ಕಾಯ್ದೆಯಾಯಿತು(ಪಿ.ಸಿ.ಆರ್ ಕಾಯ್ದೆ-1976).

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿಗಾಗಿ ಅನೇಕ ಕಾನೂನು ಕಾಯ್ದೆಗಳನ್ನು ಜಾರಿ ಮಾಡಿದ ನಂತರವೂ ಪಕ್ಷಪಾತ ಮುಂದುವರೆದಿದೆ. ಅವರು ಅನೇಕ ಅಪಮಾನ ಅವಹೇಳನದ ವಸ್ತುಗಳಾಗಿ ಕಿರುಕುಳ ಅನುಭವಿಸುತ್ತಿದ್ದಾರೆ. ಹಾಗೊಂದು ಸಮಯ ಅಸ್ಪೃಶ್ಯತೆ ವಿರುದ್ಧ ಪ್ರತಿಭಟಿಸಿ ಹಕ್ಕುಗಳನ್ನು ಪ್ರತಿಪಾದಿಸಿದರೆ, ಪಟ್ಟಭದ್ರ ಹಿತಾಸಕ್ತಿಗಳು ಅವರನ್ನು ಭೀತಿಗೊಳಪಡಿಸುತ್ತಾರೆ.

ಈಗಿರುವ ಪಿ.ಸಿ.ಆರ್ ಕಾಯ್ದೆ, ಐ.ಪಿ.ಸಿ ಪರಿಶಿಷ್ಟರ ಮೇಲೆ ಆಗುವ ದೌರ್ಜನ್ಯಗಳನ್ನು ಹತ್ತಿಕ್ಕಲು ಅಸಮರ್ಥವಾಗಿದೆ. ಈ ವಾಸ್ತವತೆಯನ್ನು ಮನಗಂಡು, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ (ದೌರ್ಜನ್ಯ ತಡೆ) ಕಾಯ್ದೆ 1989 ಹಾಗೂ ನಿಯಮ 1995ನ್ನು ಸಂಸತ್ತು ಅನುಮೋದಿಸಿ ಜಾರಿ ಮಾಡಿದೆ. ಈ ಮಸೂದೆಯನ್ನು ಸಂಸತ್ತಿನ ಮುಂದೆ ಮಂಡಿಸಿದಾಗ, ಕಾಯ್ದೆಯ ಅಗತ್ಯತೆ ಮತ್ತು ಉದ್ದೇಶವನ್ನು ಹೀಗೆ ತಿಳಿಸಲಾಯಿತು: "ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿಗಾಗಿ ಕೈಗೊಂಡ ಕಾನೂನು ಕ್ರಮಗಳ ನಂತರವೂ ಪಕ್ಷಪಾತ ಮುಂದುವರೆದಿದೆ. ಪರಿಶಿಷ್ಟರು ಅವಮಾನ, ಅವಹೇಳನ ಮತ್ತು ಅಪರಾಧಗಳಿಗೆ ಬಲಿಯಾಗುವ ವಸ್ತುವಾಗಿ ಕಿರುಕುಳ ಅನುಭವಿಸುತ್ತಿದ್ದಾರೆ. ಅಸ್ಪೃಶ್ಯತೆಯ ವಿರುದ್ಧ ಪ್ರತಿಭಟಿಸಿ ತಮ್ಮ ಹಕ್ಕುಗಳನ್ನು ಪ್ರತಿಪಾದಿಸಿದಾಗ, ಅಂತಹ ಹೋರಾಟಗಳನ್ನು ಹತ್ತಿಕ್ಕಲು ಪಟ್ಟಭದ್ರ ಹಿತಾಸಕ್ತಿಗಳ ಪ್ರಯತ್ನಕ್ಕೆ ಪರಿಶಿಷ್ಟರು ತಮ್ಮ ಆಸ್ತಿ ಮತ್ತು ಜೀವ ಎರಡನ್ನೂ ಕಳೆದುಕೊಂಡಿದ್ದಾರೆ. ಹಲವು, ಐತಿಹಾಸಿಕ, ಸಾಮಾಜಿಕ ಮತ್ತು ಆರ್ಥಿಕ ಕಾರಣಗಳಿಂದ ಅವರ ಮೇಲೆ ಸತತ ಮತ್ತು ಗಂಭೀರತರ ದೌರ್ಜನ್ಯ ಮುಂದುವರೆದಿದೆ.

ಕಾಯ್ದೆಯ ಪ್ರಸ್ತಾವನೆಯು ಮತ್ತೊಮ್ಮೆ ಕಾಯ್ದೆಯ ಧ್ಯೇಯ, ಉದ್ದೇಶ ಮತ್ತು ಆಶಯವನ್ನು ತಿಳಿಸುತ್ತ, "ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಮೇಲೆ ನಡೆಯುತ್ತಿರುವ ಹಲವು ಅಪರಾಧ, ಅಪಮಾನ ಮತ್ತು ಕಿರುಕುಳವನ್ನು ಹತ್ತಿಕ್ಕಲು, ದೌರ್ಜನ್ಯಗಳ ವಿಚಾರಣೆಗೆ ವಿಶೇಷ ನ್ಯಾಯಾಲಯ ಸ್ಥಾಪನೆ, ಪರಿಹಾರ ಮತ್ತು ದೌರ್ಜನ್ಯಕ್ಕೊಳಗಾದವರಿಗೆ ಪುನರ್ವಸತಿ ಕೇವಲ ಪ್ರಾಸಂಗಿಕ ವಿಚಾರಗಳು. ಆದುದರಿಂದ ದೌರ್ಜನ್ಯದ ವಿಚಾರದಲ್ಲಿ, ಪರಿಶಿಷ್ಟ ಸಮುದಾಯಗಳಿಗೆ ನ್ಯಾಯ ದೊರಕಿಸುವಲ್ಲಿ ಸರ್ಕಾರ ಸ್ವತ: ಕಾರ್ಯಪ್ರವೃತ್ತಿಯಾಗಿ ಈ ಸಮುದಾಯದ ಮೇಲೆ ಮೇಲ್ಜಾತಿಯವರ, ಭಯ, ಭೀತಿ, ಹಿಂಸೆ ಮತ್ತು ದಮನಗಳನ್ನು ದೂರ ಮಾಡಿ ಗೌರವ ಮತ್ತು ಘನತೆಯಿಂದ ಬಾಳುವಂತೆ ಅವಕಾಶ ಮಾಡಿಕೊಡುವುದು ಈ ಕಾಯ್ದೆಯ ಧ್ಯೇಯೋದ್ದೇಶ ಎಂದು ಸ್ಪಷ್ಟವಾಗಿ ಒತ್ತಿಹೇಳುತ್ತವೆ.

ದೌರ್ಜನ್ಯ ತಡೆ ಕಾಯ್ದೆ ಮತ್ತು ನಿಯಮಗಳನ್ನು ಮೂರು ಪ್ರತ್ಯೇಕ ವಿಭಾಗ ಮಾಡಬಹುದು. ಮೊದಲನೆಯ ಭಾಗದಲ್ಲಿ ಅಪರಾಧ ಸಂಹಿತೆ (ಪೀನಲ್ ಕೋಡ್) ಉಪಬಂಧಗಳಿವೆ. ವಿಶಿಷ್ಟವಾಗಿ ರೂಪಿಸಿರುವ ಈ ಭಾಗದಲ್ಲಿ ದೌರ್ಜನ್ಯ ಅಪರಾಧಕ್ಕೆ ಬದ್ಧತೆ ಸ್ಥಾಪಿಸುತ್ತದೆ ಹಾಗೂ ಐ.ಪಿ.ಸಿ (ಇಂಡಿಯನ್ ಪೀನಲ್ ಕೋಡ್)ಯಲ್ಲಿ ತಿಳಿಸುವ ಕೆಲವು ಶಿಕ್ಷೆಯ ವ್ಯಾಪ್ತಿಯನ್ನು ವಿಸ್ತಾರ ಮಾಡಿ ತಿಳಿಸುತ್ತದೆ; ಎರಡನೆ ಭಾಗದಲ್ಲಿ ದೌರ್ಜನ್ಯಕ್ಕೆ ಬಲಿಯಾದವರಿಗೆ ಪರಿಹಾರ, ಪುನರ್ವಸತಿ ಮತ್ತು ನೆರವು ಕುರಿತು ತಿಳಿಸಲಾಗಿದೆ. ಮೂರನೆಯ ಭಾಗದಲ್ಲಿ ಕಾಯ್ದೆಯನ್ನು ಹೇಗೆ ಅನುಷ್ಠಾನ ಮತ್ತು ಮೇಲ್ವಿಚಾರಣೆ ಮಾಡಬೇಕು ಎನ್ನುವ ಕುರಿತು ತಿಳಿಸಲಾಗಿದೆ. ಒಟ್ಟಾರೆ, ಇದು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಮೇಲಿನ ದೌರ್ಜನ್ಯ ಹಾಗೂ ಅವರ ಸಾಮಾಜಿಕ ಸ್ಥಾನಮಾನದ ವಿವರಗಳನ್ನು ಒಳಗೊಂಡಿದೆ.

ದೌರ್ಜನ್ಯ ತಡೆ ಕಾಯ್ದೆ ಮತ್ತು ನಿಯಮಗಳನ್ನು ಮೂರು ಪ್ರತ್ಯೇಕ ವಿಭಾಗ ಮಾಡಬಹುದು. ಮೊದಲನೆಯ ಭಾಗದಲ್ಲಿ ಅಪರಾಧ ಸಂಹಿತೆ (ಪೀನಲ್ ಕೋಡ್) ಉಪಬಂಧಗಳಿವೆ. ವಿಶಿಷ್ಟವಾಗಿ ರೂಪಿಸಿರುವ ಈ ಭಾಗದಲ್ಲಿ ದೌರ್ಜನ್ಯ ಅಪರಾಧಕ್ಕೆ ಬದ್ಧತೆ ಸ್ಥಾಪಿಸುತ್ತದೆ ಹಾಗೂ ಐ.ಪಿ.ಸಿ (ಇಂಡಿಯನ್ ಪೀನಲ್ ಕೋಡ್)ಯಲ್ಲಿ ತಿಳಿಸುವ ಕೆಲವು ಶಿಕ್ಷೆಯ ವ್ಯಾಪ್ತಿಯನ್ನು ವಿಸ್ತಾರ ಮಾಡಿ ತಿಳಿಸುತ್ತದೆ; ಎರಡನೆ ಭಾಗದಲ್ಲಿ ದೌರ್ಜನ್ಯಕ್ಕೆ ಬಲಿಯಾದವರಿಗೆ ಪರಿಹಾರ, ಪುನರ್ವಸತಿ ಮತ್ತು ನೆರವು ಕುರಿತು ತಿಳಿಸಲಾಗಿದೆ. ಮೂರನೆಯ ಭಾಗದಲ್ಲಿ ಕಾಯ್ದೆಯನ್ನು ಹೇಗೆ ಅನುಷ್ಠಾನ ಮತ್ತು ಮೇಲ್ವಿಚಾರಣೆ ಮಾಡಬೇಕು ಎನ್ನುವ ಕುರಿತು ತಿಳಿಸಲಾಗಿದೆ. ಒಟ್ಟಾರೆ, ಇದು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಮೇಲಿನ ದೌರ್ಜನ್ಯ ಹಾಗೂ ಅವರ ಸಾಮಾಜಿಕ ಸ್ಥಾನಮಾನದ ವಿವರಗಳನ್ನು ಒಳಗೊಂಡಿದೆ. ಈ ಕಾಯ್ದೆಯಲ್ಲಿ ಅಪರಾಧಿಯನ್ನು ಗುರುತಿಸಲು ಒಂದು ಅಂಶವನ್ನು ಮಾತ್ರ ಬಳಸಲಾಗಿದೆ. ಪರಿಶಿಷ್ಟರ ಮೇಲೆ ಪರಿಶಿಷ್ಟರಲ್ಲದ ವ್ಯಕ್ತಿ ಅಪರಾಧ ಮಾಡಿದರೆ ಈ ಕಾಯ್ದೆ ಮತ್ತು ನಿಯಮದಡಿ ದೌರ್ಜನ್ಯ ಎಂದು ಸಾಬೀತಾಗುತ್ತದೆ.

**ಈ ಕಾಯ್ದೆಯಲ್ಲಿ ಎಂಟು ಮುಖ್ಯ ಲಕ್ಷಣಗಳಿವೆ:**

1. **ಹೊಸ ರೀತಿಯ ಅಪರಾಧ:** ಐ.ಪಿ.ಸಿ, ಮತ್ತು ಹಿಂದಿನ ಅಸ್ಪೃಶ್ಯತೆ ನಿಶೇಧ ಕಾಯ್ದೆ ಮತ್ತು ಪರಿಷ್ಕೃತ ಪಿ.ಸಿ.ಆರ್ ಕಾಯ್ದೆಯಲ್ಲಿ ಎಲ್ಲದಿರುವ ಅಪರಾಧ ಕೃತ್ಯಗಳನ್ನು ಈ ಕಾಯ್ದೆಯಲ್ಲಿ ಸೇರಿಸಲಾಗಿದೆ.
2. **ನಿರ್ದಿಷ್ಟ ವ್ಯಕ್ತಿಯಿಂದ ಮಾತ್ರ ಅಪರಾಧ:** ಈ ಕಾಯ್ದೆಯಲ್ಲಿ ಅಪರಾಧಿ ಮತ್ತು ಬಲಿಯಾದ ವ್ಯಕ್ತಿಯ ಜಾತಿಯ ಹಿನ್ನೆಲೆಯಿಂದ ದೌರ್ಜನ್ಯ ಕೃತ್ಯವನ್ನು ಗುರುತು ಹಚ್ಚಲಾಗುವುದು. ಅಪರಾಧಿಯು ಪರಿಶಿಷ್ಟರಲ್ಲದ ಜಾತಿಗೆ ಸೇರಿರಬೇಕು ಹಾಗೂ ದೌರ್ಜನ್ಯಕ್ಕೊಳಗಾದವರು ಪರಿಶಿಷ್ಟರಾಗಿರಬೇಕು.
3. **ವಿವಿಧ ದೌರ್ಜನ್ಯಕ್ಕೆ ರಕ್ಷಣೆ:** ಸಾಮಾಜಿಕ ಜೀವನ, ಆರ್ಥಿಕ, ಆಸ್ತಿಗೆ ಹಾನಿ, ದ್ವೇಷಸಾಧನೆ, ರಾಜಕೀಯ ಹಕ್ಕುಗಳ ಚ್ಯುತಿಯ ವಿರುದ್ಧ ಪರಿಶಿಷ್ಟರನ್ನು ಈ ಕಾಯ್ದೆ ರಕ್ಷಿಸುತ್ತದೆ.
4. **ಆಡಳಿತ ಕ್ರಮ:** ಅಪರಾಧಗಳ ಶೀಘ್ರ ವಿಚಾರಣೆಗೆ ಅಗತ್ಯವಿರುವ ವಿಶೇಷ ನ್ಯಾಯಾಲಯ ಸ್ಥಾಪನೆಗೆ ಈ ಕಾಯ್ದೆ ವ್ಯವಸ್ಥೆ ಮಾಡುತ್ತದೆ. ವಿಶೇಷ ನ್ಯಾಯಾಲಯದ ಮುಂದೆ ವಿಚಾರಣೆಗೆ ಸಹಾಯ ಮಾಡಲು ವಿಶೇಷ ಪಬ್ಲಿಕ್ ಪ್ರಾಸಿಕ್ಯೂಟರನ್ನು ನೇಮಕ ಮಾಡಲಾಗುವುದು.
5. **ಕಾಯ್ದೆಯ ವಿಶಿಷ್ಟತೆ:** ವ್ಯಕ್ತಿಯೊಬ್ಬ ಅಪರಾಧ ಮಾಡಬಹುದು ಎಂದು ಅನುಮಾನ ಬಂದಲ್ಲಿ, ಅಂತಹ ವ್ಯಕ್ತಿಯನ್ನು ಪರಿಶಿಷ್ಟ ಪ್ರದೇಶ, ಪರಿಶಿಷ್ಟ ಪಂಗಡಗಳವರ ಕೇರಿ, ವಾಸಿಸುವ ಸ್ಥಳದಿಂದ ಗಡಿಪಾರು ಮಾಡಲು ನ್ಯಾಯಾಲಯಕ್ಕೆ ಅಧಿಕಾರ ನೀಡುತ್ತದೆ, ಅಪರಾಧಿಗೆ ಶಿಕ್ಷೆ ನೀಡುವುದಷ್ಟೇ ಅಲ್ಲದೆ, ಸೆಕ್ಷನ್ 3-6ರಲ್ಲಿ ಆತನ ಸ್ಥಿರ ಮತ್ತು ಚರಾಸ್ತಿಗಳನ್ನು ಜಪ್ತಿ ಮಾಡಲು, ಶಂಕಿತ ಆರೋಪಿಗೆ ನೀರಿಕ್ಷಣಾ ಜಾಮೀನು ನಿಷೇಧ, ಮುನ್ನೆಚ್ಚರಿಕೆ ಕ್ರಮವಾಗಿ ಶಂಶಯಾಸ್ಪದ ವ್ಯಕ್ತಿಗಳ ಆಯುಧ ಪರವಾನಗಿ ರದ್ದು, ಪರಿಶಿಷ್ಟರ ಆತ್ಮರಕ್ಷಣೆಗೆ ಆಯುಧಗಳ ಪರವಾನಗಿ ನೀಡುವುದು ಈ ಕಾಯ್ದೆಯ ವೈಶಿಷ್ಟ್ಯತೆ.

6. **ಹೆಚ್ಚುವರಿ ಶಿಕ್ಷೆ:** ದೌರ್ಜನ್ಯವನ್ನು ನಿರ್ಬಂಧಿಸಲು ಐ.ಪಿ.ಸಿಯಲ್ಲಿ ತಿಳಿಸಲಾಗಿರುವ 10 ವರ್ಷದ ಸಜೆಗೆ ಹೆಚ್ಚುವರಿ ಶಿಕ್ಷೆಯನ್ನು ತಿಳಿಸುತ್ತದೆ.
7. **ಸರ್ಕಾರಿ ಸಿಬ್ಬಂಧಿಗೆ ಹೆಚ್ಚಿದ ಕನಿಷ್ಠ ಶಿಕ್ಷೆ:** ಕಾಯ್ದೆಡಿ ಸರ್ಕಾರಿ ಸೇವಕರು ಆರೋಪಿಯಾದರೆ, ಕನಿಷ್ಠ ಶಿಕ್ಷೆಗೆ(ಹೆಚ್ಚಿನ) ಅರ್ಹರಾಗುತ್ತಾರೆ. ಕರ್ತವ್ಯ ನಿರ್ಲಕ್ಷತೆಯನ್ನೂ ಶಿಕ್ಷಾರ್ಹ ಎನ್ನುತ್ತದೆ.
8. **ದೌರ್ಜನ್ಯಕ್ಕೆ ಬಲಿಯಾದವರಿಗೆ ಅಥವಾ ವಾರಸುದಾರರಿಗೆ ಪರಿಹಾರ:** ದೌರ್ಜನ್ಯಕ್ಕೆ ಬಲಿಯಾದವರಿಗೆ ಅಥವಾ ಅವರ ಕಾನೂನುಬದ್ಧ ವಾರಸುದಾರರಿಗೆ ಕನಿಷ್ಠ ಪರಿಹಾರ ಮತ್ತು ಆಗಿರುವ ನಷ್ಟವನ್ನು ತುಂಬಿಕೊಡಲು ಅವಕಾಶ ಮಾಡಲಾಗಿದೆ. ದೌರ್ಜನ್ಯಕ್ಕೆ ಬಲಿಯಾದವರಿಗೆ ಕೊಡುವ ಕನಿಷ್ಠ ಪರಿಹಾರದ ಜೊತೆ ಹೆಚ್ಚುವರಿ ಪರಿಹಾರವಾಗಿದೆ.

## 2. ದೌರ್ಜನ್ಯ ಕಾಯ್ದೆಯ ಅನುಷ್ಠಾನದಲ್ಲಿ ಲೋಪದೋಷಗಳು

ಕಾಯ್ದೆಯ ಧ್ಯೇಯ ಮತ್ತು ಉದ್ದೇಶಗಳನ್ನು ಗಮನದಲ್ಲಿಟ್ಟು ಅನುಷ್ಠಾನದಲ್ಲಿ, ಕಾಯ್ದೆ ಮತ್ತು ನಿಯಮಗಳ ಸ್ವಭಾವ, ವ್ಯಾಪ್ತಿಯನ್ನು ವಿಶ್ಲೇಷಿಸಲು ಪ್ರಯತ್ನಿಸಿದ್ದೇವೆ. ಇದಕ್ಕಾಗಿ ಪ.ಜಾ/ಪ.ಪಂ ಆಯೋಗದ ವಿವಿಧ ವರದಿ, ದಲಿತ ವಿರುದ್ಧ ದೌರ್ಜನ್ಯದ ಕುರಿತು ಮಾನವ ಹಕ್ಕುಗಳ ರಾಷ್ಟ್ರೀಯ ಆಯೋಗದ ವರದಿ, ಪುನ್ನಯ್ಯ ಸಮಿತಿಯ ವರದಿ, ವಿವಿಧ ಸಚಿವಾಲಯಗಳ ವರದಿ, ಮತ್ತು ವಿವಿಧ ಮಾನವ ಹಕ್ಕು ಆಯೋಗಗಳ ಎದುರು ದೂರು ದಾಖಲಾದ ದಿನದಿಂದ ತೀರ್ಪು ಹೊರಬೀಳುವ ಪ್ರಕರಣಗಳಲ್ಲಿ ಇದ್ದ ಲೋಪದೋಷಗಳನ್ನು ಪತ್ತೆ ಹಚ್ಚಲು ಪ್ರಯತ್ನಿಸಿದ್ದೇವೆ.

1. **ದೌರ್ಜನ್ಯ ಪ್ರಕರಣಗಳು ಕಾಯ್ದೆಯಡಿ ದಾಖಲಾಗುವುದು ಕಡಿಮೆ ದೌರ್ಜನ್ಯಗಳ ದೂರು ನೀಡಲು ಹಿಂಜರಿಕೆ::** ದೌರ್ಜನ್ಯ ಪ್ರಕರಣ ವರದಿ ಮಾಡುವಲ್ಲಿ ಹಿಂಜರಿಕೆ ಸಾಮಾನ್ಯ ವಿಚಾರವಾಗಿದೆ. ಮಾನವ ಹಕ್ಕುಗಳ ರಾಷ್ಟ್ರೀಯ ಆಯೋಗ ತನ್ನ ವರದಿಯಲ್ಲಿ (ಪರಿಶಿಷ್ಟರ ವಿರುದ್ಧ ದೌರ್ಜನ್ಯ ವರದಿ–2002) ತಿಳಿಸಿರುವಂತೆ, ಘೋರ ಅಪರಾಧಗಳು ಆದರೂ, ಉದ್ದೇಶಪೂರಕವಾಗಿ ಬಹುತೇಕ ರಾಜ್ಯಗಳ ಪೋಲೀಸ್ ವ್ಯವಸ್ಥೆ ದೌರ್ಜನ್ಯ ಕಾಯ್ದೆಯಡಿ ಪ್ರಕರಣ ದಾಖಲಾಗದಂತೆ ನೋಡಿಕೊಳ್ಳುತ್ತವೆ. ವರದಿಯಲ್ಲಿ ಮುಂದೆ ಪರಿಶಿಷ್ಟರು ದೌರ್ಜನ್ಯ ತಡೆ ಕಾಯ್ದೆಯಲ್ಲಿ ದೂರು ದಾಖಲು ಮಾಡದಿರಲು, ದೌರ್ಜನ್ಯದ ಗಂಭೀರತೆಯನ್ನು ತಿಳಿಗೊಳಿಸಲು, ಆರೋಪಿಯನ್ನು ಬಂಧಿಸದಿರಲು, ಪೋಲೀಸರು ಪರಿಶಿಷ್ಟರಿಗೆ ದೌರ್ಜನ್ಯ ತಡೆ ಕಾಯ್ದೆಯಲ್ಲಿ ಕೇಸು ದಾಖಲಿಸದಂತೆ ಧೈರ್ಯಗೆಡಿಸುತ್ತಾರೆ ಮತ್ತು ಕೆಲವೊಮ್ಮೆ ಹಿಂಸೆಯನ್ನು ಅವರೇ ಪ್ರಚೋದಿಸುತ್ತಾರೆ. ಇವೆಲ್ಲವೂ ಮುಖ್ಯವಾಗಿ ಭ್ರಷ್ಟಾಚಾರದಿಂದ ಆಗುತ್ತವೆ, ಜೊತೆಗೆ ಅಪರಾಧಗಳ ಸಂಖ್ಯೆಯನ್ನು ತಗ್ಗಿಸುವಂತೆ ಪೋಲೀಸರ ಮೇಲೆ ಇರುವ ಒತ್ತಡ ಅವರನ್ನು ಹೀಗೆ ಮಾಡುವಂತೆ ಪ್ರೇರೇಪಿಸುತ್ತದೆ. ಇದರಿಂದ ಸ್ಥಳೀಯ ಮಟ್ಟದಲ್ಲಿ ದೌರ್ಜನ್ಯದ ಗಂಭೀರತೆ ತಗ್ಗುತ್ತದೆ. ಮುಂದೆ ಈ ಪ್ರಕರಣಗಳು ರಾಜ್ಯ ಮತ್ತು ರಾಷ್ಟ್ರ ಮಟ್ಟಕ್ಕೆ ಬಂದಾಗ ದೌರ್ಜನ್ಯದ ಗಂಭೀರತೆ ಮತ್ತಷ್ಟು ತಗ್ಗುತ್ತದೆ.
2. **ಸಮರ್ಪಕ ಸೆಕ್ಷನ್ ಅಡಿ ದೂರು ನೊಂದಾಯಿಸುವುದಿಲ್ಲ:** ದೇಶದ ವಿವಿಧೆಡೆಗಳಲ್ಲಿ, ಹಲವು ಸಂಘಟನೆಗಳು, ಮಾನವ ಹಕ್ಕುಗಳ ರಾಷ್ಟ್ರೀಯ ಆಯೋಗ ಹಾಗೂ ಸರ್ಕಾರಗಳ ಹಲವು ಆಯೋಗಗಳು ಮತ್ತು ಸಚಿವಾಲಯಗಳ ವರದಿಯನ್ನು ಗಮನಿಸಿದರೆ, ಕಾಯ್ದೆಯ ಸಮರ್ಪಕ ಸೆಕ್ಷನ್ ಅಡಿಯಲ್ಲಿ ಎಫ್.ಐ.ಆರ್ ದಾಖಲಿಸದಿರುವುದು ಕಾಣುತ್ತದೆ. ರಾಷ್ಟ್ರೀಯ ಅಪರಾಧಗಳ ಬ್ಯೂರೋ ಪ್ರಕಾರ 1992–2000 ಅವಧಿಗೆ, ಸುಮಾರು ಶೇ. 67%ರಷ್ಟು ಪ್ರಕರಣಗಳು ಹಾಗೂ 2001–2007 ಅವಧಿಗೆ ಸುಮಾರು ಶೇ. 64.9% ಪ್ರಕರಣಗಳು ದೌರ್ಜನ್ಯ ತಡೆ ಕಾಯ್ದೆಯಡಿ ದಾಖಲಾಗಲಿಲ್ಲ. ಶೇ. 88.4% ಘೋರ ಹಿಂಸಾತ್ಮಕ ಅಪರಾಧಗಳಲ್ಲಿ, ದೌರ್ಜನ್ಯದ ಘೋರತೆಯನ್ನು ಮುಚ್ಚಿಡಲು ತಪ್ಪು ಸೆಕ್ಷನ್ ಅಡಿಯಲ್ಲಿ ಪ್ರಕರಣ ದಾಖಲಾಗಿವೆ. ಪೋಲೀಸರು ಉದ್ದೇಶಪೂರಕವಾಗಿಯೇ ಈ ಕೆಲಸ ಮಾಡುತ್ತಾರೆ. ಘೋರ ದೌರ್ಜನ್ಯ ಪ್ರಕರಣಗಳಾದ ಕೊಲೆ, ಅತ್ಯಾಚಾರ, ಅಸ್ತಿನಾಶ, ಭೂಮಿ ಕೈತಪ್ಪಿಹೋದ, ಕುಡಿಯುವ ನೀರನ್ನು ಮಾಲಿನ್ಯಗೊಳಿಸಿದ ಪ್ರಕರಣಗಳಿಗೆ ಸಹ ಕಾಯ್ದೆಯ ಸೆಕ್ಷನ್ 3(1)(10)ರಡಿ ದಾಖಲಿಸುತ್ತಾರೆ. ಈ ಸೆಕ್ಷನ್ ಸಣ್ಣ ಮಟ್ಟದ ದೌರ್ಜನ್ಯಕ್ಕೆ (ಸಾರ್ವಜನಿಕವಾಗಿ ಅವಮಾನ, ಬೆದರಿಕೆ, ಅವಹೇಳನ) ಸಣ್ಣ ಶಿಕ್ಷೆ ವಿಧಿಸುತ್ತದೆ. ಇದರಿಂದ ದುಷ್ಕರ್ಮಿಗಳಿಗೆ ಒಂದು ವೇಳೆ ಶಿಕ್ಷೆಯಾದರೂ ಸಣ್ಣ ಶಿಕ್ಷೆಯಿಂದ ದೊಡ್ಡ ಶಿಕ್ಷೆಯನ್ನು ತಪ್ಪಿಸಿಕೊಳ್ಳಲು ಪೋಲೀಸರು ಈ ಅವಕಾಶ ಮಾಡುತ್ತಾರೆ.
3. **ಆರೋಪ ಪಟ್ಟಿ ಸಲ್ಲಿಸಲು ವಿಳಂಬ:** ದೌರ್ಜನ್ಯದ ಪ್ರಕರಣಗಳಲ್ಲಿ ದೋಷಾರೋಪಣ ಪಟ್ಟಿ ಸಲ್ಲಿಸಲು ತಡ ಮಾಡುವುದು ಸಾಮಾನ್ಯ. ಇದರೊಟ್ಟಿಗೆ, ಪೋಲೀಸರು ಅರ್ಹ ಪ್ರಕರಣಗಳಿದ್ದರೂ ದಾಖಲಿಸದೆ ಅಪರಾಧಿಗಳೊಟ್ಟಿಗೆ ಶಾಮೀಲಾಗಿ, ಸಾಕ್ಷ್ಯಾಧಾರವನ್ನು ಇಲ್ಲದಂತೆ ಮಾಡಲು ಕೈಚಳಕ ಪ್ರದರ್ಶಿಸುತ್ತಾರೆ. ಇದರಿಂದ ಅನುಷ್ಠಾನದ ಪರಿಣಾಮ ಕಡಿಮೆಯಾಗುತ್ತದೆ. ಆಂಧ್ರಪ್ರದೇಶದ ಪೋಲೀಸ್ ಇಲಾಖೆಯು, ಆಂಧ್ರಪ್ರದೇಶದ ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರ ಪ್ರಶ್ನೆಗೆ ಉತ್ತರವಾಗಿ 14 452 ಪ್ರಕರಣಗಳಲ್ಲಿ ವಿಳಂಬವಾಗಿದೆಯೆಂದು ಸಾಕ್ಷಿ ಹ್ಯೂಮನ್ ರೈಟ್ಸ್ ವಾಚ್ ಸಲ್ಲಿಸಿದ್ದ ಸಾರ್ವಜನಿಕ ಹಿತಾಸಕ್ತಿಯ ದಾವೆಯಲ್ಲಿ ಒಪ್ಪಿಕೊಂಡು ವಿಳಂಬಕ್ಕೆ ಕೆಳಕಂಡ ಕಾರಣಗಳನ್ನು ನೀಡಿದೆ.

i. 3,381 ಪ್ರಕರಣಗಳಲ್ಲಿ–ಅನುಮೋದನೆ, ಕಾನೂನು ಅಭಿಪ್ರಾಯ ಮತ್ತು ಹಿರಿಯ ಅಧಿಕಾರಿಗಳ ಆದೇಶ ಪಡೆಯುವಲ್ಲಿ ವಿಳಂಬ;
ii. 1,464 ಪ್ರಕರಣಗಳಲ್ಲಿ–ಹೆಚ್ಚು ಸಾಕ್ಷಿಗಳು ಇರುವುದರಿಂದ;
iii. 1,893 ಪ್ರಕರಣಗಳಲ್ಲಿ–ಜಾತಿ ಪ್ರಮಾಣ ಪತ್ರ ಪಡೆಯಲು ವಿಳಂಬ;
iv. 2,972 ಪ್ರಕರಣಗಳಲ್ಲಿ–ದಾಖಲೆ ಮತ್ತು ಸಾಕ್ಷಿ ಸಂಗ್ರಹಣೆ ವಿಳಂಬ;
v. 1,462 ಪ್ರಕರಣಗಳಲ್ಲಿ–ಗಾಯ, ವೈದ್ಯಕೀಯ ಪ್ರಮಾಣ ಪತ್ರ ಹಾಗೂ ಮರಣೋತ್ತರ ವರದಿ ಪಡೆಯುವಲ್ಲಿ ವಿಳಂಬ;
vi. 1,006 ಪ್ರಕರಣಗಳಲ್ಲಿ–ಆರೋಪಿಯು ಕಣ್ಮರೆಯಾಗಿದ್ದರಿಂದ;
vii. 752 ಪ್ರಕರಣಗಳಲ್ಲಿ–ದೌರ್ಜನ್ಯಕ್ಕೊಳಗಾದವರು/ಸಾಕಿಗಳನ್ನು ಹುಡುಕುವಲ್ಲಿ ಮತ್ತು ವಿಚಾರಣೆ ಮಾಡುವಲ್ಲಿ ವಿಳಂಬ;
viii. 813 ಪ್ರಕರಣಗಳಲ್ಲಿ–ಅಧಿಕಾರಿಗಳ ಎಡೆಬಿಡದ ಕಾರ್ಯ/ಒತ್ತಡದಿಂದ ವಿಳಂಬ;
ix. 375 ಪ್ರಕರಣಗಳಲ್ಲಿ–ಅಧಿಕಾರಿಯ ವರ್ಗಾವಣೆ;
x. 78 ಪ್ರಕರಣಗಳಲ್ಲಿ–ಸಿಐಡಿ/ಸಿಬಿಐಡಿ ತನಿಖೆ ಮಾಡುತ್ತಿರುವ ಕಾರಣ;
xi. 48 ಪ್ರಕರಣಗಳಲ್ಲಿ–ಕೇಸು ಡೈರಿಗಳು ದೊರೆಯದಿರುವ ಕಾರಣ

ಆಂಧ್ರಪ್ರದೇಶ ಹೇಕೋರ್ಟ್ ತನ್ನ ಮಧ್ಯಂತರ ಆದೇಶದಲ್ಲಿ ದೌರ್ಜನ್ಯ ತಡೆ ಕಾಯ್ದೆಯಲ್ಲಿ ದಾಖಲಾದ ಕೇಸುಗಳ ಬಗ್ಗೆ ಪೋಲೀಸ್ ನಿರ್ದೇಶಕರು ನೀಡಿರುವ ಅಂಕಿಅಂಶಗಳಲ್ಲಿ ಕೆಳಕಂಡ ಅಂಶಗಳನ್ನು ಪರಿಗಣಿಸಿದೆ:

- 1 ಕೇಸು ಆರು ವರ್ಷಗಳಿಂದ ತನಿಖೆಯಾಗದೇ ಬಾಕಿಯಿದೆ
- 53 ಕೇಸುಗಳು ಮೂರರಿಂದ ಐದು ವರ್ಷ ತನಿಖೆಯಾಗದೇ ಬಾಕಿಯಿದೆ
- 190 ಕೇಸುಗಳು ಸುಮಾರು ಎರಡು ವರ್ಷಗಳಿಂದ ಬಾಕಿಯಿದೆ
- 805 ಕೇಸುಗಳು ಸುಮಾರು ಒಂದು ವರ್ಷ ತನಿಖೆಯಾಗದೆ ಬಾಕಿಯಿದೆ.

ಇದರಿಂದ ಸರ್ಕಾರಿ ವ್ಯವಸ್ಥೆ, ವಿಶೇಷವಾಗಿ ಪೋಲಿಸರ ನಿರ್ಲಕ್ಷ್ಯವನ್ನು ಸೂಚಿಸುತ್ತದೆ. ಇಂತಹ ನಿರ್ಲಕ್ಷ್ಯ, ಪರಿಶಿಷ್ಟರ ಮೇಲೆ ನಿರ್ಭೀತಿಯಿಂದ ದೌರ್ಜನ್ಯ ಎಸಗಬಹುದೆಂಬ ಭಾವನೆ ಸೃಷ್ಟಿಸಿದೆ.

4. **ಆರೋಪಿಗಳ ಬಂಧನ–ಮಾಡುವುದಿಲ್ಲ:** ಆರೋಪಿಗಳನ್ನು ಒಂದೇ ರೀತಿ ಬಂಧಿಸುವುದಿಲ್ಲ. ಹಾಗೊಂದು ವೇಳೆ ಬಂಧಿಸಿದರೂ ಜಾಮೀನು ಮೇಲೆ ಬಿಡುಗಡೆ ಮಾಡುತ್ತಾರೆ. ಆಂಧ್ರ ಪ್ರದೇಶ ಸರ್ಕಾರದ ನ್ಯಾಯ ಮೂರ್ತಿ ಪುನ್ನಯ್ಯ ಆಯೋಗ ವರದಿಯಲ್ಲಿ ಲಭ್ಯ ಮಾಹಿತಿಯಂತೆ ಸಬ್ ಇನ್ಸ್‌ಪೆಕ್ಟರ್, ಇನ್ಸ್‌ಪೆಕ್ಟರ್ ಎಫ್.ಐ.ಆರ್ ದಾಖಲಿಸಿದ್ದರೂ ದೌರ್ಜನ್ಯ ಎಸಗಿದ ಆರೋಪಿಯನ್ನು ಬಂಧಿಸಿಲ್ಲ.

5. **ಆರೋಪಿಗಳಿಗೆ ಜಾಮೀನು:** ಹಲವು ವರದಿಗಳಲ್ಲಿ, ಘೋರ ದೌರ್ಜನ್ಯ ಪ್ರಕರಣದಲ್ಲಿಯೂ ಆರೋಪಿಯನ್ನು ಜಾಮೀನು ಮೇಲೆ ಬಿಡುಗಡೆ ಮಾಡಲಾಗಿದೆ ಎಂದು ತಿಳಿಸಿವೆ. ಕೊನೆಗೆ ಪ್ರಕರಣದಲ್ಲಿ ದೌರ್ಜನ್ಯ ತಡೆ ಕಾಯ್ದೆಯ ವ್ಯಾಪ್ತಿಯನ್ನು ನಿಸ್ಸಾರಗೊಳಿಸುವುದರಿಂದ ಪರಿಶಿಷ್ಟ ಜಾತಿಯವರು ನ್ಯಾಯದಿಂದ ವಂಚಿತರಾಗುತ್ತಾರೆ. ಮಾನವ ಹಕ್ಕುಗಳ ರಾಷ್ಟ್ರೀಯ ಆಯೋಗ ತನ್ನ ಅಧ್ಯಯನದಲ್ಲಿ ನ್ಯಾಯಂಗದ ಪ್ರವೃತ್ತಿಯನ್ನು ಹೀಗೆ ಗಮನಿಸಿದೆ:

a) ಕಾಯ್ದೆಯ ಆಶಯ, ಉದ್ದೇಶಕ್ಕಿಂತಲೂ ಮತ್ತು ಪ್ರಕರಣದಲ್ಲಿರುವ ವಸ್ತುಸ್ಥಿತಿಗಿಂತಲೂ ಕಾಯ್ದೆಯ ತಾಂತ್ರಿಕತೆ ಮಹತ್ವ ಪಡೆಯುತ್ತದೆ.

b) ಬಹುಪಾಲು ದೌರ್ಜನ್ಯ ಪ್ರಕರಣಗಳಲ್ಲಿ ಲೈಂಗಿಕ ತೃಷೆ, ಅತ್ಯಾಚಾರ ಪ್ರಕರಣದಲ್ಲಿ–ಅನೈತಿಕ ಸಂಬಂಧ, ರಾಜಕೀಯ ಪ್ರತಿಸ್ಪರ್ಧೆ, ಕೊಲೆಯ ಪ್ರಕರಣದಲ್ಲಿ–ದ್ವೇಶ, ತೀವ್ರಸ್ವರೂಪದ ಗಾಯ, ಇತ್ಯಾದಿ ಕಾರಣಗಳನ್ನು ನೀಡಿ ಕೇಸುಗಳು ವಜಾಗೊಳ್ಳುತ್ತವೆ. ದೌರ್ಜನ್ಯಕ್ಕೊಳಗಾದವರು ಪರಿಶಿಷ್ಟರು ಎಂಬ ಕಾರಣ ನೀಡುವುದಿಲ್ಲ.

c) ಪರಿಶಿಷ್ಟರಲ್ಲದವರಿಂದ ಸಾಕ್ಷಿ ಪಡೆಯುವ ಪ್ರವೃತ್ತಿ. ಪ.ಜಾತಿ ಮತ್ತು ಪಂಗಡಗಳ ರಾಷ್ಟ್ರೀಯ ಆಯೋಗ ಐವತ್ತು–ಅರವತ್ತು ಪ್ರಕರಣಗಳನ್ನು ಅಧ್ಯಯನ ಮಾಡಿದಾಗ, ನ್ಯಾಯಾಧೀಶರು ಪರಿಶಿಷ್ಟರ ಸಾಕ್ಷಿ ಸಮರ್ಥನೀಯವಲ್ಲ, ಏಕೆಂದರೆ ಅವರು ಹಿತಾಸಕ್ತ ಪಕ್ಷದವರು ಎಂದು ಏಕಪ್ರಕಾರವಾಗಿ ತೀರ್ಮಾನಕ್ಕೆ ಬಂದಿರುತ್ತಾರೆ.

d) ಸಾಕ್ಷಿಯನ್ನು ಒಪ್ಪಿಕೊಳ್ಳುವಲ್ಲಿ ವ್ಯಕ್ತಿಗತ ನಂಬಿಕೆ ಮತ್ತು ಪೂರ್ವಾಗ್ರಹ ಭಾವನೆ ಕೆಲಸ ಮಾಡುತ್ತವೆ. ಈ ಭಾವನೆಗಳು ಸಾಮಾಜದ ಕುರಿತು ಪೂರ್ವಭಾವನೆ, ಜಾತಿ ಮತ್ತು ಲಿಂಗದ ಪಕ್ಷಪಾತ ಪೂರ್ವಾಗ್ರಹಪೀಡಿತ ಭಾವನೆಯಿಂದ ಕೂಡಿರುತ್ತವೆ.

# III

# ಅಗತ್ಯವಿರುವ ತಿದ್ದುಪಡಿಗಳು ಮತ್ತು ಸಮರ್ಥನೆ

ಈ ವಿಭಾಗ ಅಗತ್ಯವಿರುವ ತಿದ್ದುಪಡಿ ತಿಳಿಸುವುದರ ಜೊತೆಗೆ ಅದನ್ನು ಸಮರ್ಥಿಸಿಕೊಳ್ಳುತ್ತದೆ. ಈ ಸಮರ್ಥನೆಯು ಅನುಷ್ಠಾನದಲ್ಲಿ ಮೇಲೆ ತಿಳಿಸಿದ ಅನುಭವಗಳು ಹಾಗೂ ಎನ್‌ಸಿಎಸ್‌ಸಿ, ಎನ್‌ಹೆಚ್‌ಆರ್‌ಸಿಯನ್ನೂ (ಶಿಫಾರಸ್ಸುಗಳ ವಿವರಗಳಿಗಾಗಿ ಅನುಬಂಧ 1 ನೋಡಿರಿ) ಒಳಗೊಂಡಂತೆ ಹಲವಾರು ಸಂಸ್ಥೆ ಮತ್ತು ನಿಯೋಗಗಳು ಮಾಡಿದ ಶಿಫಾರಸ್ಸುಗಳನ್ನು ಆಧರಿಸಿದೆ. ಪ್ರಸ್ತಾವಿತ ತಿದ್ದುಪಡಿಗಳನ್ನು ವಿಶಾಲವಾಗಿ ಈ ಕೆಳಕಂಡಂತೆ ವಿಭಾಗಿಸಲಾಗಿದೆ:

1. ಅಪರಾಧಗಳ ತೀವ್ರತೆ ಮತ್ತು ಶಿಕ್ಷೆ
2. ಕಾಯ್ದೆಯಲ್ಲಿ ತಿಳಿಸದೇ ಇರುವ ಹೊಸ ರೀತಿಯ ಅಪರಾಧಗಳು
3. ಕೆಲವು ಪದಗಳಿಗೆ ನಿರ್ದಿಷ್ಟ ಅರ್ಥ
4. ಕಾಯ್ದೆಯಲ್ಲಿ ತಿಳಿಸಲಾಗಿರುವ ವ್ಯಾಖ್ಯಾನಗಳ ವ್ಯಾಪ್ತಿ
5. ಉದ್ದೇಶಿತ ಕರ್ತವ್ಯ ನಿರ್ಲಕ್ಷ ಮತ್ತು ಕಾಯ್ದೆಯಲ್ಲಿ ಅದರ ವ್ಯಾಪ್ತಿ
6. ತ್ವರಿತ ವಿಚಾರಣೆಗಾಗಿ ಕ್ರಮಗಳು
7. ದೌರ್ಜನ್ಯಕ್ಕೆ ಬಲಿಯಾದವರು ಮತ್ತು ಸಾಕ್ಷಿಗಳ ಹಕ್ಕು

## 3.1 ಅಪರಾಧಗಳ ತೀವ್ರತೆ ಮತ್ತು ಶಿಕ್ಷೆ

ಪ.ಜಾತಿ ಮತ್ತು ಪಂಗಡಗಳ ದೌರ್ಜನ್ಯ ತಡೆ ಕಾಯ್ದೆ ಸೆಕ್ಷನ್ 3(1)ರನ್ವಯ ದೌರ್ಜನ್ಯದ ಅಪರಾಧಗಳಿಗೆ ಕನಿಷ್ಠ ಆರು ತಿಂಗಳಿಂದ 5 ವರ್ಷಗಳ ಜೈಲುಸಜೆ ತಿಳಿಸುತ್ತದೆ. ಆದರೆ, ಅಪರಾಧಗಳ ತೀವ್ರತೆ ಅನುಸಾರ ಈ ಕಾಯ್ದೆಯಲ್ಲಿ ತಿಳಿಸಿರುವ ಶಿಕ್ಷೆ ಮತ್ತು ಇದೇ ತೀವ್ರತೆಯ ಅಪರಾಧಗಳಿಗೆ ಐ.ಪಿ.ಸಿಯಲ್ಲಿ ತಿಳಿಸಲಾಗಿರುವ ಶಿಕ್ಷೆಯನ್ನು ಹೋಲಿಸಿದರೆ ಹೆಚ್ಚಿನ ವ್ಯತ್ಯಾಸ ಕಂಡುಬರುತ್ತದೆ. ಆದ್ದರಿಂದ, ದೌರ್ಜನ್ಯ ತಡೆ ಕಾಯ್ದೆಯಲ್ಲಿ ಶಿಕ್ಷೆಯನ್ನು ಪರಿಶೀಲಿಸಬೇಕಿರುತ್ತದೆ. ಉದಾಹರಣೆಗೆ:

1. ನಿಯಮ 3(1)(xii)ರನ್ವಯ "ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಗಳ ಮಹಿಳೆಯೊಬ್ಬರ ಮೇಲೆ ಪ್ರಭಾವ ಬೀರುವ ಸ್ಥಾನದಲ್ಲಿದ್ದು ಆಕೆಯ ಇಚ್ಛೆಗೆ ವಿರುದ್ಧವಾಗಿ ಆಕೆಯನ್ನು ಲೈಂಗಿಕವಾಗಿ ಶೋಷಣೆ ಮಾಡಿದರೆ" ಈ ಕಲಂ ಅನ್ವಯ ಕನಿಷ್ಠ ಶಿಕ್ಷೆಯು ಆರು ತಿಂಗಳು ಜೈಲು ಶಿಕ್ಷೆ ಮತ್ತು ಗರಿಷ್ಠ ಐದು ವರ್ಷಗಳ ಸಜೆ ಎಂದು ತಿಳಿಸುತ್ತದೆ. ಐಪಿಸಿಯ ಸೆಕ್ಷನ್ 376ರನ್ವಯ ಇದೇ ಅಪರಾಧಕ್ಕೆ–ಅತ್ಯಾಚಾರದ ತಪ್ಪಿಗೆ 10 ವರ್ಷಕ್ಕಿಂತಲೂ ಕಡಿಮೆ ಇಲ್ಲದ ಕಟು ಜೈಲುಶಿಕ್ಷೆಯನ್ನು ನೀಡಬಹುದು. ಆದರೆ, ಇದು ಜೀವಾವಧಿ ಶಿಕ್ಷೆಯೂ ಆಗಬಹುದು ಮತ್ತು ಜುಲ್ಮಾನೆಯನ್ನು ಸಹ ವಿಧಿಸಬಹುದು.

2. ಸೆಕ್ಷನ್ 3(1)(vi)ರನ್ವಯ, "ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಗಳ ವ್ಯಕ್ತಿಯನ್ನು ಬಿಕ್ಷೆ ಬೇಡಲು ಬಲವಂತ ಅಥವಾ ಪ್ರೇರೇಪಣೆ ಅಥವಾ ಜೀತದ ಕೂಲಿಗೆ ಅಥವಾ ಸಾರ್ವಜನಿಕ ಉದ್ದೇಶದ ಕೆಲಸವನ್ನು ಕಡ್ಡಾಯವಾಗಿ ಮಾಡಿಸಿದಲ್ಲಿ", ಅಂತಹ ಅಪರಾಧಕ್ಕೆ ಕನಿಷ್ಠ ಆರು ತಿಂಗಳ ಜೈಲುಶಿಕ್ಷೆ ವಿಧಿಸಬಹುದಾಗಿದೆ ಆದರೆ ಐಪಿಸಿಯ ಸೆಕ್ಷನ್ 374ರನ್ವಯ ಕಡ್ಡಾಯ ಕೂಲಿಗೆ ಶಿಕ್ಷೆಯನ್ನು ಒಂದು ವರ್ಷ ಜೈಲುಶಿಕ್ಷೆ ಅಥವಾ ಜುಲ್ಮಾನೆ ಅಥವಾ ಎರಡನ್ನೂ ವಿಧಿಸಬಹುದಾಗಿದೆ.

3. ಸೆಕ್ಷನ್ 3(1)(vii)ರನ್ವಯ ಪರಿಶಿಷ್ಟ ಜಾತಿಯ ಅಥವಾ ಪರಿಶಿಷ್ಟ ಪಂಗಡದ ಸದಸ್ಯರನ್ನು ಬಲವಂತದಿಂದ ಅಥವಾ ಬೆದರಿಕೆಯ ಮೂಲಕ ಮತ ಹಾಕದಂತೆ ಮಾಡಿದರೆ ಅಂತಹ ಅಪರಾಧಕ್ಕೆ ಈ ಕಾಯ್ದೆಯಲ್ಲಿ ಆರು ತಿಂಗಳ ಜೈಲು ಶಿಕ್ಷೆಯನ್ನು ವಿಧಿಸಬಹುದಾಗಿದೆ, ಆದರೆ ಐಪಿಸಿ ಸೆಕ್ಷನ್ 171ರನ್ವಯ ಚುನಾವಣೆಯಲ್ಲಿ ಮೋಸಮಾಡುವ ಆರೋಪಿಗೆ ಕನಿಷ್ಠ ಒಂದು ವರ್ಷದ ಜೈಲು ಶಿಕ್ಷೆ ಆಗುತ್ತದೆ.

4. ಸೆಕ್ಷನ್ 3(1)(i)ರನ್ವಯ ತಿನ್ನಲು ಅಥವಾ ಕುಡಿಯಲು ಯೋಗ್ಯ ಅಲ್ಲದ ಪದಾರ್ಥಗಳಾದ ಮೂತ್ರ ಮತ್ತು ಮಲವನ್ನು ತಿನ್ನುವಂತೆ ಅಥವಾ ಕುಡಿಯುವಂತೆ ಬಲತ್ಕರಿಸುವ ಅಪರಾಧ ಐಪಿಸಿಯ ಸೆಕ್ಷನ್ 328ರಲ್ಲಿ ತಿಳಿಸುವ ವಿಷಪೂರಿತ ವಸ್ತುಗಳಿಂದ ಗಾಯಗೊಳಿಸುವ ಅಪರಾಧಕ್ಕಿಂತ ಕಡಿಮೆಯಲ್ಲ. ಇದಕ್ಕಾಗಿ ಐಪಿಸಿಯಲ್ಲಿ ಹತ್ತು ವರ್ಷಗಳ ಕನಿಷ್ಠ ಸಜೆ ವಿಧಿಸಿದರೆ, ದೌರ್ಜನ್ಯ ತಡೆ ಕಾಯ್ದೆಯಲ್ಲಿ ಆರು ತಿಂಗಳಿಂದ ಐದು ವರ್ಷಗಳ ಶಿಕ್ಷೆಯನ್ನು ತಿಳಿಸುತ್ತದೆ.

**ಶಿಕ್ಷೆ ಹೆಚ್ಚಳಕ್ಕೆ ಕಾರಣ:**

ಪರಿಶಿಷ್ಟ ಜಾತಿ ಮತ್ತು ಪಂಗಡಗಳ ದೌರ್ಜನ್ಯ ತಡೆ ಕಾಯ್ದೆ 1989 ಒಂದು ವಿಶೇಷ ಕಾಯ್ದೆಯಾಗಿ ಸಂಸತ್ತಿನಲ್ಲಿ ಅನುಮೋದನೆಯಾಗಿದೆ. ಈ ಕಾಯ್ದೆಯನ್ನು ಪರಿಚಯಿಸುವಾಗ ಮಂತ್ರಿಗಳು ಹೀಗೆ ಹೇಳಿದರು: ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳವರಿಗೆ ನಾಗರಿಕ ಹಕ್ಕುಗಳನ್ನು ನಿರಾಕರಿಸಲಾಗಿದೆ ಮತ್ತು ಅವರು ದೌರ್ಜನ್ಯಕ್ಕೆ ಒಳಗಾಗುತ್ತಿದ್ದಾರೆ, ಈ ಘಟನೆಗಳನ್ನು ತಡೆಯಲು ಸಾಮಾನ್ಯ ಕಾಯ್ದೆಗಳಿಂದ ಸಾಧ್ಯವಾಗಿಲ್ಲ. ಈ ನ್ಯೂನತೆ ಸರಿಪಡಿಸಲು ದೌರ್ಜನ್ಯ ತಡೆ ಕಾಯ್ದೆ ಪರಿಚಯಿಸಲಾಗುತ್ತಿದೆ. ಮಂತ್ರಿಗಳು ಮುಂದುವರೆದು "'ದೌರ್ಜನ್ಯ' ಎಂಬ ಪದಕ್ಕೆ ಅರ್ಥ ನೀಡುವುದಷ್ಟೇ ಅಲ್ಲದೆ **ಅಂತಹ ದೌರ್ಜನ್ಯಗಳನ್ನು ಎಸುಗುವವರ ವಿರುದ್ಧ ಕಠಿಣ ಸಜೆಯನ್ನು ಪರಿಚಯಿಸಬೇಕು"** ಎಂದು ಹೇಳಿದರು.

ಸಾಮಾಜಿಕ ಕಾಯ್ದೆಗಳು ಜನಜೀವನವನ್ನು ಕ್ರಮವಾಗಿ ಇಡುವ ಒಂದು ಸಾಧನ. ಹಾಗೆ, ಪಾತಕ ಕೃತ್ಯಗಳಿಗೆ ಬಲಿಯಾದ ಜನರ ಸಮುದಾಯವು ಎಷ್ಟು ಸುಲಭವಾಗಿ ಅಂತಹ ಪಾತಕ ಕೃತ್ಯಗಳಿಗೆ ಬಲಿ ಆಗಬಹುದು ಎನ್ನುವ ಹಿನ್ನೆಲೆಯಲ್ಲಿ ಪಾತಕ ಕೃತ್ಯವನ್ನು ವ್ಯಾಖ್ಯಾನ ಮಾಡಬೇಕಾಗುತ್ತದೆ ಹಾಗೂ ಶಿಕ್ಷೆಯನ್ನು ನಿರ್ಧರಿಸುವಾಗಲೂ ಈ ಸಮುದಾಯವನ್ನು ಸ್ವತಂತ್ರಗೊಳಿಸುವ ನಿಟ್ಟಿನಲ್ಲಿ ಶಾಸನದ ಉದ್ದೇಶ ಇರಬೇಕು. ಪರಿಶಿಷ್ಟ ಜಾತಿ ಮತ್ತು ಪಂಗಡಗಳವರ ಸಾಮಾಜಿಕ-ಆರ್ಥಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಪ್ರತ್ಯೇಕ ಕಾಯ್ದೆಯ ಉದ್ದೇಶ ಕಾನೂನಿನ ಸಮಾನತೆಯಾಗಿದೆ. ಪರಿಶಿಷ್ಟರು ಮರಳಿ ಪಕ್ಷಪಾತಕ್ಕೆ ಒಳಗಾದರೆ ಅದು ಅವರ ಮೂಲಭೂತ ಹಕ್ಕುಗಳ ಚ್ಯುತಿಗೆ ಕಾರಣವಾಗುತ್ತದೆ.

ಪ.ಜಾತಿ/ವರ್ಗಗಳ ಕಾಯ್ದೆ ಮತ್ತು ಐಪಿಸಿಯಲ್ಲಿ ತಿಳಿಸಿರುವ ಅಪರಾಧಗಳ ನಡುವೆ ವ್ಯತ್ಯಾಸಗಳನ್ನು ಕಂಡುಕೊಳ್ಳುವ ನಮ್ಮ ಪ್ರಯತ್ನದ ಮುಖ್ಯ ಉದ್ದೇಶ ಅಪರಾಧದ ತೀವ್ರತೆ ಮತ್ತು ಕಾಯ್ದೆಯಲ್ಲಿ ತಿಳಿಸಿರುವ ಉದ್ದೇಶವನ್ನು ಕಂಡುಕೊಳ್ಳುವುದೇ ಆಗಿದೆ. ಈ ಮೇಲಿನ ಉದ್ದೇಶ ಮತ್ತು ಅಪರಾಧದ ಸ್ವಭಾವ ಮತ್ತು ತೀವ್ರತೆಯನ್ನು ಗಮನದಲ್ಲಿ ಇಟ್ಟುಕೊಂಡು ಸೆಕ್ಷನ್ 3(1)ರಲ್ಲಿ ತಿಳಿಸಿರುವ ಶಿಕ್ಷೆಯ ಪ್ರಮಾಣವನ್ನು ಹೆಚ್ಚಿಸುವ ಅಗತ್ಯವಿದೆ. ಇದನ್ನು ಎರಡು ರೀತಿಯಲ್ಲಿ ಮಾಡಬಹುದು; a) ಸೆಕ್ಷನ್ 3ರಲ್ಲಿ ಬರುವ ಪ್ರತಿ ಸಬ್‌ಸೆಕ್ಷನ್‌ಗೆ ಶಿಕ್ಷೆಯನ್ನು ಪ್ರಸ್ತಾವನೆ ಮಾಡುವುದು ಅಥವಾ b) ಇಡೀ ಸೆಕ್ಷನ್‌ಗೆ ಶಿಕ್ಷೆಯ ಹೆಚ್ಚಳಕ್ಕೆ ತಿದ್ದುಪಡಿ ಮಾಡಲು ಪ್ರಸ್ತಾವನೆ ಸಲ್ಲಿಸುವುದು. ಆದರೆ, ಮೇಲೆ ತಿಳಿಸಿದ ಅಪರಾಧದ ಸ್ವಭಾವ ಮತ್ತು ತೀವ್ರತೆಯ ತತ್ವ ಹಾಗೂ ಕಾಯ್ದೆಯ ಉದ್ದೇಶದ ಒಳಗೆ ಈ ಎರಡೂ ಪ್ರಸ್ತಾವನೆ ಇರಬೇಕು.

ಹೆಚ್ಚಿನ ಶಿಕ್ಷೆಗಾಗಿ ಸೆಕ್ಷನ್ 3 ಪೂರ್ತಿ ತಿದ್ದುಪಡಿ ಆಗಬೇಕೆನ್ನುವ ನಮ್ಮ ಆಯ್ಕೆಗೆ ಈ ಕೆಳಕಂಡಂತೆ ಪ್ರಸ್ತಾವಿಸುತ್ತೇವೆ:

**ಮೂಲ ಶಿಕ್ಷೆ:**

*"ಆರು ತಿಂಗಳಿಗೂ ಕಡಿಮೆ ಇಲ್ಲದ ಆದರೆ ಐದು ವರ್ಷಗಳವರೆಗೂ ವಿಸ್ತರಿಸಬಹುದಾದ ಸೆರೆವಾಸ ಮತ್ತು ಜುಲ್ಮಾನೆಯ ಶಿಕ್ಷೆಯನ್ನು ವಿಧಿಸಲಾಗುವುದು".*

**ಪ್ರಸ್ತಾವಿತ ಶಿಕ್ಷೆ:**

*"ಎರಡು ವರ್ಷಗಳಿಗೂ ಕಡಿಮೆ ಇಲ್ಲದ ಆದರೆ ಏಳು ವರ್ಷಗಳವರೆಗೂ ವಿಸ್ತರಿಸಬಹುದಾದ ಸೆರೆವಾಸ ಮತ್ತು ಜುಲ್ಮಾನೆಯ ಶಿಕ್ಷೆಯನ್ನು ವಿಧಿಸಲಾಗುವುದು".*

### 3.2. ಪದಗಳಿಗೆ ನಿರ್ಧಿಷ್ಟ ಅರ್ಥ

ದೌರ್ಜನ್ಯ ತಡೆ ಕಾಯ್ದೆಯನ್ನು ಓದುವಲ್ಲಿ ಇರುವ ಅತ್ಯಂತ ದೊಡ್ಡ ನ್ಯೂನತೆ ದೌರ್ಜನ್ಯಕ್ಕೆ ಬಲಿಯಾದ ವ್ಯಕ್ತಿಯು ಪ.ಜಾತಿ/ಪ.ಪಂಗಡಕ್ಕೆ ಸೇರಿದವರು ಎನ್ನುವುದನ್ನು ಸ್ಥಾಪಿಸುವುದರಲ್ಲಿ ಇದೆ. ಈ ನ್ಯೂನತೆ ಪೋಲೀಸರು ದೂರು ದಾಖಲಿಸುವುದರಿಂದ ಪ್ರಾರಂಭವಾಗಿ ಕೋರ್ಟ್ ತೀರ್ಪು ನೀಡುವವರೆಗೂ ಮುಂದುವರೆಯುತ್ತದೆ. ದೌರ್ಜನ್ಯ ಪ್ರಕರಣದ ಗಂಭೀರತೆಯನ್ನು ತಿಳಿಗೊಳಿಸಲು ಪದಗಳ ಬಳಕೆಯನ್ನು **"ಉದ್ದೇಶಿತ, "ಉದ್ದೇಶ", "ಆಧಾರದಲ್ಲಿ""** ಮತ್ತು ಇತರೆ ಪದಗಳಾದ **"ಸಾರ್ವಜನಿಕ ದೃಷ್ಟಿಯಿಂದ"** ಮತ್ತು **"ಸಾರ್ವಜನಿಕ ಸ್ಥಳಗಳಲ್ಲಿ"** ಎಂಬ ಪದಗಳನ್ನು ಅನುಷ್ಠಾನಗೊಳಿಸುವ ಪ್ರಾಧಿಕಾರ ಮತ್ತು ಕೋರ್ಟುಗಳಲ್ಲಿ ಹಲವು ಹಂತಗಳಲ್ಲಿ ಬಳಕೆಯಾಗುತ್ತದೆ.

ದೌರ್ಜನ್ಯ ತಡೆ ಕಾಯ್ದೆ 1989ರಲ್ಲಿ ಸೆಕ್ಷನ್ 3(1)(ii), 3(1)(x), 3(1)(xi), 3(2)(i), 3(2)(ii), 3(2)(iii), 3(2)(iv) and 3(2)(v)ರಲ್ಲಿ "ಉದ್ದೇಶಿತ" ಮತ್ತು ಉದ್ದೇಶ" ಅಥವಾ "ಆಧಾರದಲ್ಲಿ" ಮತ್ತು ಸಾರ್ವಜನಿಕ ದೃಷ್ಟಿಯಿಂದ ಮತ್ತು ಸಾರ್ವಜನಿಕ ಸ್ಥಳ ಎಂಬ ಪದಗಳನ್ನು ಬಳಸಲಾಗಿದೆ. ಈ ಪದಗಳು ಆಪಾದಿತರಿಗೆ ಕಾನೂನಿನ ಕಣ್ಣಿಗೆ ಮಣ್ಣೆರಚಲು ದಾರಿ ತೋರುತ್ತವೆ. ಅನುಷ್ಠಾನಗೊಳಿಸುವ ಪ್ರಾಧಿಕಾರಿಗಳು ಸಹ ಈ ಪದಗಳ ಪ್ರಯೋಜನ ಪಡೆದು ಆಪಾದಿತರು ಹಲವು ವಿಧಾನಗಳಲ್ಲಿ ತಪ್ಪಿಸಿಕೊಳ್ಳುವಂತೆ ಮಾಡುತ್ತಾರೆ. ಹಲವು ಏಜೆನ್ಸಿಗಳು ವಿವಿಧ ಹಂತಗಳಲ್ಲಿ ಕಾಯ್ದೆಯ ಉತ್ಸಾಹ ತಗ್ಗಿಸಲು ಕೆಳಕಂಡ ವಿಧಾನ ಬಳಸುತ್ತಾರೆ:

1. ಪೋಲೀಸ್ ಅಧಿಕಾರಿಗಳು ಈ ಪದಗಳನ್ನು ತಮ್ಮ ಪ್ರಯೋಜನಕ್ಕೆ ಬಳಸಿಕೊಂಡು ದೌರ್ಜನ್ಯ ಕಾಯ್ದೆಯಲ್ಲಿ ದೂರನ್ನು ತಕ್ಷಣ ನೊಂದಾಯಿಸಿಕೊಳ್ಳುವುದಿಲ್ಲ. ದೌರ್ಜನ್ಯಕ್ಕೆ ಒಳಗಾದವರು ಪರಿಶಿಷ್ಟರೆನ್ನುವ ಹಿನ್ನೆಲೆಯಲ್ಲಿ ದೌರ್ಜನ್ಯ ಮಾಡಲಾಯಿತೇ ಎಂಬುದನ್ನು ಪರಿಶೀಲಿಸಿದ ನಂತರವಷ್ಟೇ ದೂರನ್ನು ದಾಖಲಿಸಿಕೊಳ್ಳುತ್ತೇವೆ ಎಂದು ದೂರುದಾರರಿಗೆ ಹೇಳುತ್ತಾರೆ.
2. ಹಲವಾರು ಪ್ರಕರಣಗಳಲ್ಲಿ ಪೋಲೀಸರು ದೌರ್ಜನ್ಯಕ್ಕೆ ಒಳಗಾದವರಿಗೆ ಅವರು ಪರಿಶಿಷ್ಟರು ಎಂದು ಸಾಬೀತುಗೊಳಿಸಲು ಜಾತಿ ಪ್ರಮಾಣ ಪತ್ರ ತರುವಂತೆ ಆಗ್ರಹಿಸಿರುವುದು ಸ್ಪಷ್ಟವಾಗಿದೆ.
3. ಎಸಗಲಾಗಿರುವ ಹಿಂಸೆ/ಪಾತಕ ಕೃತ್ಯವನ್ನು ಅವಮಾನ ಅಥವಾ ಬೆದರಿಸುವ ಅಥವಾ ಮನನೋಯಿಸುವ ಉದ್ದೇಶದಿಂದ ಮಾಡಲಾಗಿಲ್ಲ ಎನ್ನುವ ನೆಪದಲ್ಲಿ ದೂರನ್ನು ದಾಖಲಿಸುವುದಿಲ್ಲ.

4. ದೌರ್ಜನ್ಯ ಎಸಗಿದಾಗ ಆಪಾದಿತನು ದೌರ್ಜನ್ಯಕ್ಕೊಳಗಾದವನ ಜಾತಿ ನಿಂದನೆ ಮಾಡಲಿಲ್ಲ ಎಂದು ಪೋಲೀಸರು ಹೇಳುವ ಮೂಲಕ ದೌರ್ಜನ್ಯ ತಡೆ ಕಾಯ್ದೆಯಲ್ಲಿ ಪ್ರಕರಣಗಳನ್ನು ದಾಖಲಿಸುವುದಿಲ್ಲ.
5. ಪೋಲೀಸರು ದೌರ್ಜನ್ಯಕ್ಕೆ ಬಲಿಯಾದವರನ್ನು ಪ.ಜಾತಿ/ಪಂಗಡಗಳಿಗೆ ಸೇರಿದವರೆಂದು ಸಾಬೀತುಗೊಳಿಸಲು ಜಾತಿ ಪ್ರಮಾಣ ಪತ್ರ ತೋರಿಸಲು ಆಗ್ರಹಿಸುವ ಸಂದರ್ಭದಲ್ಲಿಯೇ ಆರೋಪ ಪಟ್ಟಿಯನ್ನು ಪ.ಜಾತಿ/ಪ.ವರ್ಗದ ಕಾಯ್ದೆಯಡಿ ಸಿದ್ಧ ಮಾಡುವುದಿಲ್ಲ.
6. ತನಿಖೆ ಪೂರ್ಣಗೊಳಿಸಿದ ನಂತರ ಪೋಲೀಸರು ಈ ಪಾತಕ ಕೃತ್ಯವು ಉದ್ದೇಶಪೂರಿತವಾಗಿ ಅವಮಾನ ಮಾಡಲು ಅಥವಾ ಬೆದರಿಸಲು ಮಾಡಿಲ್ಲವಾದ್ದರಿಂದ ಆರೋಪ ಪಟ್ಟಿಯನ್ನು ದೌರ್ಜನ್ಯ ತಡೆ ಕಾಯ್ದೆಯಡಿ ಸಲ್ಲಿಸಲು ಸಾಧ್ಯವಿಲ್ಲ ಎಂದು ಹೇಳುವ ಮೂಲಕ ಕಾಯ್ದೆಯಡಿ ಆರೋಪ ಪಟ್ಟಿ ತಯಾರಿಸುವುದಿಲ್ಲ.
7. ಮನನೋಯಿಸುವ ಉದ್ದೇಶದಿಂದ ಈ ಕೃತ್ಯವನ್ನು ಮಾಡಿರುವುದಿಲ್ಲ ಎಂದು ಹೇಳುವ ದೌರ್ಜನ್ಯ ತಡೆ ಕಾಯ್ದೆಯಲ್ಲಿ ಆರೋಪ ಪಟ್ಟಿ ಸಲ್ಲಿಸುವುದಿಲ್ಲ.
8. ಪರಿಶಿಷ್ಟ ಸದಸ್ಯರ ವಿರುದ್ಧ ಕೃತ್ಯವನ್ನು ಎಸಗಲಾಗಿಲ್ಲ ಎನ್ನುವ ನೆಪವೊಡ್ಡಿ ದೌರ್ಜನ್ಯ ತಡೆ ಕಾಯ್ದೆಯಲ್ಲಿ ಆರೋಪ ಪಟ್ಟಿ ಸಲ್ಲಿಸುವುದಿಲ್ಲ.
9. ಆಪಾದಿತನು ದೌರ್ಜನ್ಯ ಎಸಗುವಾಗ ದೌರ್ಜನ್ಯಕ್ಕೊಳಗಾದವರ ಜಾತಿ ಉಲ್ಲೇಖಿಸುವ ಮೂಲಕ ನಿಂದಿಸಲಿಲ್ಲ ಎಂದು ಹೇಳುವ ಮೂಲಕ ದೌರ್ಜನ್ಯ ತಡೆ ಕಾಯ್ದೆಯಲ್ಲಿ ಆರೋಪ ಪಟ್ಟಿಯನ್ನು ಸಲ್ಲಿಸುವುದಿಲ್ಲ.

ನ್ಯಾಯಾಂಗವೂ ಸಹ ಈ ಪದಗಳನ್ನು ಬಳಸುವುದರಲ್ಲಿ ಹಿಂದೆ ಬಿದ್ದಿಲ್ಲ. ವಿಶೇಷ ನ್ಯಾಯಾಲಯಗಳು ನೀಡಿರುವ ತೀರ್ಪುಗಳಲ್ಲಿ ಶೇ. 39%ರಷ್ಟು ಆಪಾದಿತನು ಅತ್ಯಾಚಾರದಂತಹ ಅಪರಾಧವನ್ನೂ ಒಳಗೊಂಡಂತೆ ದೌರ್ಜನ್ಯದಲ್ಲಿಯೂ ಜಾತಿಯ ಹೆಸರು ಹೇಳಿಲ್ಲವೆಂದು ಆರೋಪಿಯನ್ನು ಬಿಡುಗಡೆ ಮಾಡಿರುವುದಾಗಿ ವಿಶ್ಲೇಷಣೆ ತಿಳಿಸುತ್ತದೆ. ಶೇ.11%ರಷ್ಟು ಪ್ರಕರಣಗಳಲ್ಲಿ ಪರಿಶಿಷ್ಟರೆನ್ನುವ ಹಿನ್ನೆಲೆಯಲ್ಲಿ ಅಪರಾಧ ಮಾಡಿಲ್ಲ ಎಂದು ಆರೋಪಿಯನ್ನು ನಿರ್ದೋಶಿಗಳೆಂದು ತೀರ್ಪಿತ್ತಿವೆ. ಶೇ.50%ಕ್ಕಿಂತಲೂ ಹೆಚ್ಚು ಪ್ರಕ್ರಣಗಳಲ್ಲಿ ನ್ಯಾಯಾಲಯಗಳು "ಉದ್ದೇಶಿತ", ಉದ್ದೇಶ, ಆಧಾರದಲ್ಲಿ", ಎಂಬ ಪದಗಳನ್ನು ಬಳಸುವ ಮೂಲಕ ಆಪಾದಿತರಿಗೆ ಕಾನೂನಿನ ಹಿಡಿತದಿಂದ ತಪ್ಪಿಸಿಕೊಳ್ಳಲು ಅವಕಾಶ ನೀಡಿವೆ. ಇದೇ ಪ್ರವೃತ್ತಿಯನ್ನು ಹಲವು ಉಚ್ಚ ನ್ಯಾಯಾಲಯಗಳ ತೀರ್ಪುಗಳಲ್ಲಿಯೂ ಕಾಣಬಹುದು.

ಸಾಮಾನ್ಯವಾಗಿ ನ್ಯಾಯಾಲಯಗಳು ದೌರ್ಜನ್ಯವನ್ನು ಪರಿಶಿಷ್ಟರು ಎನ್ನುವ ಹಿನ್ನೆಲೆಯಲ್ಲಿ ಮಾಡಲಾಯಿತು ಎನ್ನುವ ಆಧಾರದಲ್ಲಿ ದೌರ್ಜನ್ಯದ ಅಂಶ ಸ್ಥಾಪಿಸಲು ಪ್ರಯತ್ನಿಸುತ್ತದೆ. ಆದರೆ ಪರಿಶಿಷ್ಟರ ಮೇಲೆ ಪರಿಶಿಷ್ಟರಲ್ಲದವರು ಐ.ಪಿ.ಸಿಯ ಅಪರಾಧ ಮಾಡಿದರೆ ದೌರ್ಜನ್ಯ ಎಂದು ಕಾಯ್ದೆ ಸ್ಪಷ್ಟವಾಗಿ ತಿಳಿಸಿದೆ. ನ್ಯಾಯಾಧೀಶರು ಕಾಯ್ದೆಯನ್ನು ಕಡೆಗಣಿಸುತ್ತಾರೆ.

ಈ ಪದ ಬಳಸಿ ಕಾಯ್ದೆಯ ಆಶಯಕ್ಕೆ ಭಂಗ ತಂದಿರುವುದಕ್ಕೆ ಕೆಳಕಂಡ ಕೋರ್ಟ್ ತೀರ್ಪುಗಳು ಸ್ಪಷ್ಟ ಉದಾಹರಣೆಗಳು.

1. ಸಮುದಾಯವನ್ನು ಉಲ್ಲೇಖಿಸಿ ಅವಮಾನ ಅಥವಾ ಬೆದರಿಕೆ ಹಾಕದೇ ಹೋದರೆ, ಆರೋಪಗಳನ್ನು ತಳ್ಳಿಹಾಕಲಾಗುತ್ತದೆ–

   *"ದೂರುದಾರ ಸಂಜಯ್ ಮೆಹ್ರ ಮಧ್ಯಪ್ರದೇಶ ಮಾಲಿನ್ಯ ನಿಯಂತ್ರಣ ಮಂಡಳಿಯ ಸಹಾಯಕ ಇಂಜಿನಿಯರ್ ಆಗಿ ಕೆಲಸ ಮಾಡುತ್ತಿದ್ದರು. ಆಪಾದಿತ ಕಾರ್ಯನಿರ್ವಾಹಕ ಇಂಜಿನಿಯರ್ ಸಂಜಯ್‌ಗೆ ಕಿರುಕುಳ ನೀಡುತ್ತಿದ್ದನು. ಸಂಜಯ್ ದೂರನ್ನು ಅರಣ್ಯವಾಸಿ ಕಲ್ಯಾಣ ಸಚಿವಾಲಯ, ಭೋಪಾಲ್ ಮತ್ತು ದೂರಿನ ಪ್ರತಿಯೊಂದನ್ನು ಸೂಕ್ತ ಕ್ರಮ ಕೈಗೊಳ್ಳಲು ರಾಯಪುರ ಜಿಲ್ಲಾಧಿಕಾರಿಗೆ ಕಳುಹಿಸಿದ. ಪೋಲೀಸರು ತನಿಖೆ ನಡೆಸಿ, ಆಪಾದಿತ, 24-02-94ರಂದು ದೂರುದಾರನನ್ನು "ಮೂರ್ಖ" ಮತ್ತು "ಅವಿವೇಕಿ" ಎಂದು ಕರೆದಿರುವುದನ್ನು ಪತ್ತೆ ಹಚ್ಚಿದರು. ಕಾಯ್ದೆಯ ಸೆಕ್ಷನ್ 3(1)(x)ರಲ್ಲಿ ಪ್ರಕರಣ ದಾಖಲು ಮಾಡಿಕೊಂಡರು. ಕಾಯ್ದೆಯ ಕಲಂ 3(1)(x) ಪ.ಜಾತಿ ಮತ್ತು ಪ.ವರ್ಗದ ಸದಸ್ಯನೊಬ್ಬನನ್ನು ಆ ಸಮುದಾಯಕ್ಕೆ ಸೇರಿದವನು ಎಂಬ ಕಾರಣಕ್ಕೆ ಅವಮಾನ ಮಾಡಿದರೆ ಅಥವಾ ಬೆದರಿಸಿದರೆ ಮಾತ್ರ ಅನ್ವಯವಾಗುತ್ತದೆ ಎಂಬ ಅಂಶವನ್ನು ನ್ಯಾಯಾಲಯವು ಪರಿಗಣಿಸಿತು. "ಮೂರ್ಖ" ಮತ್ತು "ಅವಿವೇಕಿ" ಎಂಬ ಪದ ಆ ಸಮುದಾಯಕ್ಕೆ ಸಂಬಂಧ ತೋರುವುದಿಲ್ಲ ಆದ್ದರಿಂದ ಸಮುದಾಯಕ್ಕೆ ಮಾಡಿದ ಅವಮಾನ ಅಥವಾ ಬೆದರಿಕೆ ಎಂದು ಪರಿಗಣಿಸಲಾಗುವುದಿಲ್ಲ".*

2. ಜಾತಿಯನ್ನು ಅವಮಾನಿಸುವ ಉದ್ದೇಶದಿಂದ ಈ ಮಾತು ಹೇಳಿಲ್ಲ ಆದ್ದರಿಂದ ಅವಮಾನ ಮಾಡುವ ಅಥವಾ ಬೆದರಿಸುವ ಉದ್ದೇಶ ಇರಲಿಲ್ಲ ಎಂದು ಈ ಪ್ರಕರಣವನ್ನು ಮುಕ್ತಾಯಗೊಳಿಸಲಾಯಿತು.

   *"ಅರ್ಜಿದಾರ-ಆಪಾದಿತನು ಮತ್ತು ಅವನ ಸಂಗಡಿಗರು ದೌರ್ಜನ್ಯಕ್ಕೊಳಗಾದ ಪರಿಶಿಷ್ಟನನ್ನು ಹೊಲಸು ಮಾತುಗಳಿಂದ ನಿಂದಿಸಿದರು. ಆಪಾದಿತನ ಚಿಕ್ಕಪ್ಪನ ಗ್ಯಾರೇಜ್ ಬಳಿ ಸಾರಿದಾಗ, ಆಪಾದಿನ ಜೊತೆ ಇಬ್ಬರು ಅಥವಾ ಮೂವರು ವ್ಯಕ್ತಿಗಳು ದೂರುದಾರನನ್ನು "ಚಮಾರಿಯಾ" ಎಂದರು ಹಾಗೂ ಆಪಾದಿತನು ಮತ್ತೊಮ್ಮೆ ಹೊಡೆಯಲು ಪ್ರಾರಂಭಿಸಿದನೆಂದು ಮತ್ತೊಬ್ಬ ಸಾಕ್ಷಿಯು ತಿಳಿಸಿದನು. ಆ ಹೊಲಸು ಪದಗಳು ಯಾವುವು ಎಂದು ತಿಳಿಸಲಾಗಿಲ್ಲ ಎಂಬ ಅಭಿಪ್ರಾಯಕ್ಕೆ ನ್ಯಾಯಾಲಯವು ಬಂದಿತು. ಆಪಾದಿತನು ಹೇಳಿದ ಪದಗಳು ಸಾಕ್ಷಿಯಲ್ಲಿ ಬರದೇ ಹೋದಲ್ಲಿ ಆ ಪದಗಳು ಅವಮಾನ ಮಾಡಲು ಬಳಸಲಾಯಿತು ಎಂಬ ತೀರ್ಮಾನಕ್ಕೆ ಬರಲು ಆಗುವುದಿಲ್ಲ ಎಂದು ನ್ಯಾಯಾಲಯವು ತಿಳಿಸಿತು. ನ್ಯಾಯಾಲಯವು ಮುಂದುವರೆದು "ಒಂದು ವೇಳೆ ಆಪಾದಿತನು "ಚಮಾರಿಯ" ಎಂಬ ಪದ ಬಳಸಿದ್ದಾನೆ ಎಂದು ಊಹಿಸಿಕೊಂಡರೂ ಸಹ ಕಲಂ 3(1)(x) ರನ್ವಯ ಅದು ಶಿಕ್ಷಾರ್ಹ ಅಪರಾಧವಾಗುವುದಿಲ್ಲ, ಒಬ್ಬ ವ್ಯಕ್ತಿಯನ್ನು ಅವನ ಜಾತಿಯ ಹೆಸರಿನಿಂದ ಕೂಗಿದರೆ ಅದು ಅವಮಾನ ಆಗುವುದಿಲ್ಲ ಹಾಗೂ ಕಲಂ 2ರನ್ವಯ ಇದು ಅಪರಾಧವಲ್ಲ ಎಂದು ಹೇಳಿತು.*

3. ಪರಿಶಿಷ್ಟ ಸದಸ್ಯರಿಗೆ ಹಾನಿ ಮಾಡುವ, ಅವಮಾನ ಅಥವಾ ಮನನೋಯಿಸುವ ಉದ್ದೇಶದಿಂದ ಈ ಅಪರಾಧ ಕೃತ್ಯವನ್ನು ಮಾಡಿಲ್ಲ.

   *ಪ್ರಕರಣದ ಸಂಕ್ಷಿಪ್ತ ಸತ್ಯಾಂಶ: 12 ವಯಸ್ಸಿನ ಕುಮಾರಿ ಸುನಿತಾ, ರಿವಾಸ ಪ್ರದೇಶದ ನಿವಾಸಿ. ದಿನಾಂಕ 15-02-93ರಂದು ಬೆಳಿಗ್ಗೆ ಸುಮಾರು 11 ಘಂಟೆಗೆ ಆಕೆ ತನ್ನ ಹೊಲದಲ್ಲಿರುವಾಗ ಆರೋಪಿ ನರೇಶನು, ಆಕೆಯ ಮೇಲೆ ಅತ್ಯಾಚಾರವೆಸಗಿದನು. ಆಕೆ ಸಹಾಯಕ್ಕಾಗಿ ಕೂಗಿಕೊಂಡಳು, ಅವಳ ಕೂಗನ್ನು ಆಕೆಯ ತಂದೆ ಕೇಳಿಸಿಕೊಂಡು ಆಕೆಯನ್ನು ರಕ್ಷಿಸಿದನು. ಒಂದು ದೂರನ್ನು ನೀಡಲಾಯಿತು ಮತ್ತು ವೈದ್ಯರ ಬಳಿ ತಪಾಸಣೆ ಮಾಡಿಸಿ, ಆಕೆಯ ಮೇಲೆ ಅತ್ಯಾಚಾರ ಎಸಗಲಾಗಿದೆ ಎಂದು ತಿಳಿದ ನಂತರ ಐಪಿಸಿ ಸೆಕ್ಷನ್ 376ರನ್ವಯ ಮತ್ತು ದೌರ್ಜನ್ಯ ತಡೆ ಕಾಯ್ದೆಯ ಸೆಕ್ಷನ್ 3(2)(v)ರನ್ವಯ ಪ್ರಕರಣ ದಾಖಲಿಸಲಾಯಿತು. ಹೆಚ್ಚುವರಿ ಸೆಷನ್ ನ್ಯಾಯಾಧೀಶರು ನರೇಶನನ್ನು ಅತ್ಯಾಚಾರದ*

*ಆರೋಪಿ ಎಂದು ತೀರ್ಮಾನಿಸಿ ಐಪಿಸಿ ಸೆಕ್ಷನ್ 376ರಡಿ ಮತ್ತು ದೌರ್ಜನ್ಯ ತಡೆ ಕಾಯ್ದೆ ಸೆಕ್ಷನ್3(2)(v) ರನ್ವಯ ಅವನಿಗೆ ಜೀವಾವಧಿ ಶಿಕ್ಷೆ ಹಾಗೂ ರೂ. 1000/– ದಂಡವನ್ನು ವಿಧಿಸಿದರು. ಈ ತೀರ್ಪಿನ ಮೇಲೆ ನರೇಶ್ ಅಪೀಲು ಮಾಡಿದನು. ತೀರ್ಪು: ನ್ಯಾಯಾಲಯವು ಹೆಚ್ಚುವರಿ ಸೆಷನ್ ನ್ಯಾಯಾಧೀಶರು ನೀಡಿದ್ದ ತೀರ್ಪನ್ನು ಮಾರ್ಪಡಿಸಿ ಪ.ಜಾತಿ/ಪ.ವರ್ಗಗಳ ಸದಸ್ಯರನ್ನು ಹಾನಿಗೊಳಪಡಿಸುವ, ಅವಮಾನ ಅಥವಾ ಭೀತಿ ಮೂಡಿಸುವ ಉದ್ದೇಶದಿಂದ ಈ ಕೃತ್ಯವನ್ನು ಎಸಗಿಲ್ಲವೆಂದು ಪ.ಜಾತಿ/ದೌರ್ಜನ್ಯ ತಡೆ ಕಾಯ್ದೆ ಸೆಕ್ಷನ್ 3(2)(v) ಈ ಪ್ರಕರಣಕ್ಕೆ ಅನ್ವಯವಾಗುವುದಿಲ್ಲ ಎಂದು ನ್ಯಾಯಾಲಯ ತಿಳಿಸಿತು. ಅದರಂತೆ ಆರೋಪಿಗೆ ವಿಧಿಸಲಾಗಿದ್ದ ಶಿಕ್ಷೆಯನ್ನು ಐಪಿಸಿಯಲ್ಲಿ ಜೀವಾವಧಿ ಶಿಕ್ಷೆಯಿಂದ ಏಳು ವರ್ಷಗಳ ಸಜೆ ಮತ್ತು 1000 ರೂಪಾಯಿಗಳ ದಂಡಕ್ಕೆ ತಗ್ಗಿಸಲಾಯಿತು.*

4. ದೌರ್ಜನ್ಯಕ್ಕೆ ಒಳಗಾದ ವ್ಯಕ್ತಿ ಪರಿಶಿಷ್ಟ ಜಾತಿಗೆ ಸೇರಿದವನ್ನು ಎನ್ನುವ ಕಾರಣಕ್ಕಾಗಿ ಆರೋಪಿಯು ಪಾತಕ ಕೃತ್ಯವನ್ನು ಎಸಗಿದ್ದಾನೆ ಎಂದು ಹೇಳಿಲ್ಲ.

*ದೌರ್ಜನ್ಯಕ್ಕೆ ಒಳಗಾದ ವ್ಯಕ್ತಿ ಮೆನಾಯಿ, ಆಕೆ ಆದಿವಾಸಿ ಹುಡುಗಿ, ವಯಸ್ಸು ಸುಮಾರು 14ರಿಂದ 16ರ ಆಸುಪಾಸು, ಹಾಗೆ ಆಕೆ ಅಪ್ರಾಪ್ತ ವಯಸ್ಕಳು. ಆರೋಪಿ ರಾಮಚಂದ್ರ, ಪ್ರಭಾವಿ ಜಾತಿಗೆ ಸೇರಿದವನಾಗಿದ್ದು, ಪ್ರಿಯದರ್ಶಿನಿ ಎಸ್ಟೇಟ್‌ನಲ್ಲಿ ಸೆಕ್ಯುರಿಟಿ ಸಿಬ್ಬಂಧಿಯಾಗಿ ಕೆಲಸ ಮಾಡುತ್ತಿದ್ದ. ದಿನಾಂಕ 02–03–91ರಂದು ತನ್ನ ಮನೆಯಲ್ಲಿ ಮೆನಾಯಿ ಮೇಲೆ ಅತ್ಯಾಚಾರ ಎಸಗಿದನು ಹಾಗೂ ಈ ವಿಷಯ ಯಾರಿಗಾದರೂ ತಿಳಿಸಿದರೆ ಆಕೆಯನ್ನು ಕೊಲ್ಲುವುದಾಗಿ ಹೆದರಿಸಿದ. ಮೆನಾಯಿ ತನ್ನ ತಾಯಿಯ ಸೋದರಿಯಲ್ಲಿ ಈ ವಿಷಯ ತಿಳಿಸಿದಳು. ನಂತರ ಈ ಸಂಗತಿಯನ್ನು ಮ್ಯಾನೇಜಿಂಗ್ ಡೈರೆಕ್ಟರ್ ಬಳಿ ತಿಳಿಸಲಾಯಿತು ಮತ್ತು ಅಂತಿಮವಾಗಿ ದಿನಾಂಕ 12–03–91ರಂದು ಪೋಲೀಸರು ಪ್ರಕರಣವನ್ನು ದಾಖಲಿಸಿಕೊಂಡರು. ಪ್ರಕರಣದ ವಿಚಾರಣೆಯು ಸೆಷನ್ ನ್ಯಾಯಾಲಯದಲ್ಲಿ ಆಯಿತು ಹಾಗೂ ಆರೋಪಿಗೆ ಐಪಿಸಿ ಸೆಕ್ಷನ್ 376ರನ್ವಯ ಹತ್ತು ವರ್ಷಗಳ ಕಠಿಣ ಶಿಕ್ಷೆ, ಸೆಕ್ಷನ್ 506ರನ್ವಯ ಆರು ತಿಂಗಳ ಸಜೆ ಮತ್ತು ದೌರ್ಜನ್ಯ ತಡೆ ಕಾಯ್ದೆ ಸೆಕ್ಷನ್ 3(2)(v)ರನ್ವಯ ಜೀವಾವಧಿ ಶಿಕ್ಷೆ ವಿಧಿಸಲಾಯಿತು. ಈ ಆದೇಶದ ಮೇಲೆ ಮೇಲ್ಮನವಿಯನ್ನು ಮಾಡಲಾಯಿತು.*

*ಮೆನಾಯಿ ಪರಿಶಿಷ್ಟ ಪಂಗಡದ ಒಬ್ಬ ಸದಸ್ಯೆ ಎಂಬ ಕಾರಣಕ್ಕಾಗಿ ಆಕೆಯ ಮೇಲೆ ಆರೋಪಿ ಅತ್ಯಾಚಾರವನ್ನು ಎಸಗಿದ್ದಾನೆ ಎನ್ನುವುದನ್ನು ಪ್ರಾಸಿಕ್ಯೂಷನ್ ಸಾಬೀತುಪಡಿಸಿರುವುದಿಲ್ಲ. ನೊಂದ ವ್ಯಕ್ತಿಯು ಕೇವಲ ಪರಿಶಿಷ್ಟ ಜಾತಿ ಅಥವಾ ಪಂಗಡದ ಸದಸ್ಯ ಆಗಿದ್ದರೆ ಮಾತ್ರ ಸಾಲದು. ಬದಲಾಗಿ ಪರಿಶಿಷ್ಟ ಪಂಗಡಕ್ಕೆ ಸೇರಿದ ಸದಸ್ಯೆ ಎನ್ನುವ ಕಾರಣಕ್ಕಾಗಿ ಅಪರಾಧ ಎಸಗಿರಬೇಕಿರುತ್ತದೆ. ಈ ಪ್ರಕರಣದಲ್ಲಿ ಜನಾಂಗೀಯ ಪೂರ್ವಗ್ರಹ ಭಾವನೆ ಕಂಡುಬರುತ್ತದೆ ಎಂದು ನ್ಯಾಯಾಲ ತಿಳಿಸುತ್ತ, ಈ ಅಂಶಗಳನ್ನು ದೌರ್ಜನ್ಯ ತಡೆ ಕಾಯ್ದೆಯ ಸೆಕ್ಷನ್ 3(2)(v)ರನ್ವಯ ವಿಧಿಸಿದ್ದ ಶಿಕ್ಷೆ ರದ್ದುಗೊಳಿಸಿ ಐಪಿಸಿ ಸೆಕ್ಷನ್ 376ರನ್ವಯ ನೀಡಿದ್ದ ಶಿಕ್ಷೆಯನ್ನು ಏಳು ವರ್ಷಗಳಿಗೆ ತಗ್ಗಿಸಲಾಯಿತು.*

ವಿಶ್ಲೇಷಣೆಯ ಪ್ರಕಾರ, ಕಾಯ್ದೆಯಲ್ಲಿ ತಿಳಿಸಿರುವಂತೆ ಅಪರಾಧ ದೌರ್ಜನ್ಯ ಎಂದು ಸ್ಪಷ್ಟಪಡಿಸುವ ಸಾಮಾನ್ಯ ಅಂಶ ಏನೆಂದರೆ ಪರಿಶಿಷ್ಟರ ಮೇಲೆ ಪರಿಶಿಷ್ಟರಲ್ಲದವರು ಅಪರಾಧ ಮಾಡಿದರೆ ಅದು ದೌರ್ಜನ್ಯ ಎನಿಸಿಕೊಳ್ಳುತ್ತದೆ. ಈ ಅಂಶದಲ್ಲಿ ಎರಡು ಪ್ರಮುಖ ವಿಚಾರಗಳಿವೆ.

1. *ದುಷ್ಕರ್ಮಿಗೆ ದೌರ್ಜನ್ಯಕ್ಕೆ ಒಳಗಾದ ವ್ಯಕ್ತಿಯ ಪರಿಶಿಷ್ಟ ಸ್ಥಾನಮಾನ ತಿಳಿದಿರಬೇಕೆಂಬ ಅಗತ್ಯವಿಲ್ಲ:* ಮೊಟ್ಟಮೊದಲಿಗೆ ಖಡಾಖಂಡಿತವಾಗಿ ಹೇಳಬೇಕೆಂದರೆ ದುಷ್ಕರ್ಮಿ ತಾನು ದೌರ್ಜನ್ಯ ಎಸಗುವ ವೇಳೆ ದೌರ್ಜನ್ಯಕ್ಕೆ ಒಳಗಾಗುತ್ತಿರುವ ವ್ಯಕ್ತಿ ಪರಿಶಿಷ್ಟರು ಎಂದು ತಿಳಿದಿರಬೇಕು ಎನ್ನುವ ಅಗತ್ಯ ಇಲ್ಲ. ಮತ್ತೊಂದು ಮಾತಿನಲ್ಲಿ ಹೇಳಬೇಕೆಂದರೆ: ದೌರ್ಜನ್ಯಕ್ಕೆ ಒಳಗಾಗುವ ವ್ಯಕ್ತಿ ಪರಿಶಿಷ್ಟರು ಎಂದು ದುಷ್ಕರ್ಮಿಗೆ ತಿಳಿದಿರಬೇಕು ಎನ್ನುವುದು ಮುಖ್ಯವಲ್ಲ; ಇಲ್ಲಿ ದೌರ್ಜನ್ಯಕ್ಕೆ ಒಳಗಾದ ವ್ಯಕ್ತಿ ಪರಿಶಿಷ್ಟ ಜಾತಿ ಅಥವಾ ಪಂಗಡದ ಸದಸ್ಯ ಅಥವಾ ಸದಸ್ಯರಲ್ಲ ಮತ್ತು ದೌರ್ಜನ್ಯ ಕಾಯ್ದೆಯಲ್ಲಿ ಸಂವಿಧಾನದ ರಕ್ಷಣೆ ಹಕ್ಕುಗಳಿಗೆ ನ್ಯಾಯ ದೊರೆಯಬೇಕೇ ಇಲ್ಲವೇ ಎಂಬುದು ಮಾತ್ರ.
2. *ಜಾತಿ ಸಂಬಂಧಿತ ಪ್ರೇರಣೆ ಅಗತ್ಯವಿಲ್ಲ:* ಎರಡನೆಯದಾಗಿ (ಮತ್ತು ಪ್ರಾಯಶಃ ದೈನಂದಿನ ಆಚರಣೆಯಲ್ಲಿ ಬಹಳ ಪ್ರಮುಖವಾದುದು) ದೌರ್ಜನ್ಯಕ್ಕೆ ಒಳಗಾದ ವ್ಯಕ್ತಿ ಪ.ಜಾತಿ/ಪ.ಪಂಗಡಕ್ಕೆ ಸೇರಿದ ವ್ಯಕ್ತಿ ಎನ್ನುವ ಕಾರಣಕ್ಕೆ ಆತನ/ಆಕೆಯ ವಿರುದ್ಧ ಅಪರಾಧ ಕೃತ್ಯ ಮಾಡಿರಬೇಕಾದ ಅಗತ್ಯವಿಲ್ಲ. ಜಾತಿ ಬೇಧಭಾವ ಇರುವ ಒಂದು ಸಮಾಜದಲ್ಲಿ, ಹಳ್ಳಿಯೊಂದರಲ್ಲಿ ಪ್ರತಿಯೊಬ್ಬರ ಜಾತಿ ತಿಳಿದಿರುತ್ತದೆ. 'ಅ' ವ್ಯಕ್ತಿಗೆ 'ಕ' ವ್ಯಕ್ತಿಯು ಪ.ಜಾತಿ/ಪ.ವರ್ಗಕ್ಕೆ ಸೇರಿದವರು ಎನ್ನುವುದು ತಿಳಿದಿದ್ದು ಆ ವ್ಯಕ್ತಿಯ ಮೇಲೆ ಹಲ್ಲೆ ಅಥವಾ ಅತ್ಯಾಚಾರ ಮಾಡಿದರೆ ಆ ವ್ಯಕ್ತಿಯು ಪ.ಜಾತಿಗೆ ಸೇರಿದ ವ್ಯಕ್ತಿ ಎನ್ನುವ ಕಾರಣಕ್ಕಾಗಿಯೇ ಆತನ ಮೇಲೆ ಅಪರಾಧವನ್ನು ಎಸಗಲಾಯಿತು ಎಂದು ತಿಳಿಯಬೇಕಾಗುತ್ತದೆ. ಪ್ರತಿ ಪ್ರಕರಣದಲ್ಲಿಯೂ ಆತ/ಆಕೆ ಪ.ಜಾತಿ/ವರ್ಗಕ್ಕೆ ಸೇರಿದ ವ್ಯಕ್ತಿ ಎನ್ನುವ ಕಾರಣಕ್ಕಾಗಿ ಆತನ/ಆಕೆಯ ವಿರುದ್ಧ ದೌರ್ಜನ್ಯ ಎಸಗಲಾಗಿದೆ ಎನ್ನುವ ವಿವರ ದೊರೆಯುತ್ತದೆ. ಆದ್ದರಿಂದ, 'ಆಧಾರಕ್ಕೆ' ಪ್ರತ್ಯೇಕ ಸಾಕ್ಷಿ ನೀಡಬೇಕು ಎಂದು ಕೇಳುವುದು ಸರಿಯಲ್ಲ.

   ಮತ್ತೊಂದು ಮಾತಿನಲ್ಲಿ ಹೇಳಬೇಕಾದರೆ: ಜಾತಿ–ಸಂಬಂಧಿತ ಪ್ರೇರಣೆಯ ಅಗತ್ಯವೇ ಇಲ್ಲ. ದೌರ್ಜನ್ಯಕ್ಕೆ ಬಲಿಯಾದ ವ್ಯಕ್ತಿಯು ಪ.ಜಾತಿ/ವರ್ಗಕ್ಕೆ ಸೇರಿದವರು ಎನ್ನುವ ಒಂದು ಅಂಶವೇ ಸಾಕು. ಆದ್ದರಿಂದ ದೌರ್ಜನ್ಯಕ್ಕೆ ಒಳಗಾಗುವ ವ್ಯಕ್ತಿಯ ಸ್ಥಾನವನ್ನು ಆರೋಪಿ ತಿಳಿದಿರಬೇಕು ಎನ್ನುವುದು ಮುಖ್ಯವಲ್ಲ; ಬದಲಾಗಿ ಬಲಿಯಾದ ವ್ಯಕ್ತಿಯು ಪ.ಜಾತಿ/ವರ್ಗದ ಸದಸ್ಯ ಹೌದೇ ಇಲ್ಲವೇ ಎಂಬುದು ಮಾತ್ರ.

ಆದ್ದರಿಂದ ನ್ಯಾಯಾಲಯಗಳು ಅಪರಾಧಿ ಮನೋಭಾವನೆಗೆ "ಉದ್ದೇಶ" "ಉದ್ದೇಶಿತ" ಎಂಬ ಪದಗಳ ಅರ್ಥವನ್ನು ಹುಡುಕುವ ಅಗತ್ಯವಿರುವುದಿಲ್ಲ. ದಲಿತನ ಮೇಲೆ ಪಾತಕ ಕೃತ್ಯವನ್ನು ಎಸಗಿರುವ ಕಾರಣ ಶಿಕ್ಷೆಯ ಮಟ್ಟವನ್ನು ಹೆಚ್ಚು ಮಾಡಬೇಕು ಎನ್ನುವ ಉದ್ದೇಶವನ್ನು ಇಲ್ಲಿ ನ್ಯಾಯಾಲಯಗಳು ಕಂಡುಕೊಳ್ಳಬೇಕಿದೆ.

ಮತ್ತೊಂದು ವಿಚಾರವನ್ನು ಇಲ್ಲಿ ಗಮನಿಸಬೇಕು. ಅದೇಂದರೆ ನ್ಯಾಯಾಲಯವು "ಸಾರ್ವಜನಿಕರ ದೃಷ್ಟಿಯಲ್ಲಿ" ಮತ್ತು "ಸಾರ್ವಜನಿಕ ಸ್ಥಳದಲ್ಲಿ" ಎನ್ನುವ ಎರಡು ಪದಗಳ ನಡುವಿನ ಅರ್ಥವನ್ನು ವ್ಯಾಖ್ಯಾನ ಮಾಡುವುದು. ಇದು ಪರಿಶಿಷ್ಟರನ್ನು ಅವಮಾನಕ್ಕೆ ಒಳಪಡಿಸಿ ಮನನೋಯಿಸುವ ಮೇಲ್ಜಾತಿಯ ಅಪರಾಧಿಗಳಿಗೆ ಕುಮ್ಮಕ್ಕು ನೀಡುತ್ತದೆ ಹಾಗೂ ಸಂವಿಧಾನ ಹಾಗೂ ಕಾಯ್ದೆಯ ಉದ್ದೇಶಕ್ಕೆ ವಿರುದ್ಧವಾಗಿ ವರ್ತಿಸುತ್ತದೆ.

ಆದ್ದರಿಂದ ಕಾಯ್ದೆಯಲ್ಲಿರುವ ಸಂವಿಧಾನದ ಆಶಯ ಮತ್ತು ಉದ್ದೇಶಗಳನ್ನು ಸಾಕಾರಗೊಳಿಸಬೇಕಿದ್ದಲ್ಲಿ ಮೇಲೆ ತಿಳಿಸಿದ ಸೆಕ್ಷನ್‌ಗಳಲ್ಲಿ ಇರುವ ಪದಗಳನ್ನು ಸ್ಪಷ್ಟಗೊಳಿಸುವ ಅವಶ್ಯಕತೆ ಇದೆ. ಆದ್ದರಿಂದ 3(1)(ii), 3(1)(x), 3(1)(xi), 3(2)(i), 3(2)(ii), 3(2)(iii), 3(2)(iv) ಮತ್ತು 3(2)(v)ಕಲಂಗಳಿಂದ "ಉದ್ದೇಶ" ಮತ್ತು "ಉದ್ದೇಶಿತ" ಅಥವಾ "ಈ ಆಧಾರದ ಮೇಲೆ" ಎನ್ನುವ ಪದಗಳನ್ನು ಹಾಗೂ 3(1)(x)ಸೆಕ್ಷನ್‌ಗಳಲ್ಲಿ

"ಸಾರ್ವಜನಿಕರ ದೃಷ್ಟಿಯಲ್ಲಿ" ಮತ್ತು "ಸಾರ್ವಜನಿಕ ಸ್ಥಳ" ಎಂಬ ಪದಗಳನ್ನು ಸಂಪೂರ್ಣ ತೆಗೆದುಹಾಕಬೇಕು ಎನ್ನುವ ಶಿಫಾರಸ್ಸು ಮಾಡುತ್ತೇವೆ.

**3.3 ಕಾಯ್ದೆಯಲ್ಲಿ ತಿಳಸದಿರುವ ಅಪರಾಧಗಳು ಮತ್ತು ಹೊಸ ಅಪರಾಧಗಳು**

ಪರಿಶಿಷ್ಟರ ವಿರುದ್ಧ ಸಾಂಪ್ರದಾಯಿಕ ದೌರ್ಜನ್ಯಗಳು ಮುಂದುವರಿದಿವೆ ಹಾಗೂ ಹೊಸ ರೀತಿಯ ಅಸ್ಪೃಶ್ಯತೆ ಆಚರಣೆಗಳು ರೂಢಿಗೆ ಬಂದಿವೆ ಮತ್ತು ದೌರ್ಜನ್ಯಗಳ ವಿಧಾನಗಳು ಬದಲಾಗುತ್ತಿವೆ.

ಅನೇಕ ಸಂಸ್ಥೆಗಳು ಹಾಗೂ ಕಾರ್ಯಕರ್ತರಿಗೆ ಒಂದು ಸ್ಪಷ್ಟ ಅನುಭವ ಆಗಿದೆ. ಕಾಯ್ದೆಯಲ್ಲಿ ತಿಳಿಸದೇ ಇರುವ ಅಸ್ಪೃಶ್ಯತೆ ಮತ್ತು ದೌರ್ಜನ್ಯದ ವಿಧಾನಗಳನ್ನು ಬಳಸುವುದರಿಂದ ದುಷ್ಕರ್ಮಿಗಳಿಗೆ ಹಾಗೂ ಪೋಲೀಸರಿಗೆ ಸುಲಭವಾಗಿ ತಪ್ಪಿಸಿಕೊಳ್ಳುವ ದಾರಿಗಳು ಸಿಗುತ್ತಿವೆ. ಈ ಅಪರಾಧಗಳನ್ನು ಕಾಯ್ದೆಯಲ್ಲಿ ತಿಳಿಸದೇ ಇರುವುದರಿಂದ ದೌರ್ಜನ್ಯ ತಡೆ ಕಾಯ್ದೆಯಡಿ ಪೋಲೀಸರು ಪ್ರಕರಣಗಳನ್ನು ದಾಖಲಿಸುತ್ತಿಲ್ಲ. ಈ ಕಾಯ್ದೆಯಲ್ಲಿ ಪೋಲೀಸರು ಪರಿಗಣನೆ ಮಾಡದಿರುವ ಕೆಲವು ಹೊಸ ಅಪರಾಧಗಳು ಮತ್ತು ಹಳೆಯ ಅಪರಾಧಗಳನ್ನು ಈ ಕೆಳಗೆ ತಿಳಿಸಲಾಗಿದೆ ಹಾಗೂ ಈ ಅಪರಾಧಗಳು ದಿನದಿಂದ ದಿನಕ್ಕೆ ಹೆಚ್ಚುತ್ತಿವೆ.

1. **ವೇತನ ಅಥವಾ ಒಪ್ಪಂದದ ವೇತನ ನೀಡಲು ನಿರಾಕರಣೆ–** ಈ ಅಪರಾಧವನ್ನು "ಕಾರ್ಮಿಕರು ಮಾಡಿರುವ ಕೆಲಸಕ್ಕೆ ವೇತನ ಅಥವಾ ಒಪ್ಪಂದದ ವೇತನ ನೀಡಲು ನಿರಾಕರಿಸುವ ಅಪರಾಧದ ಅಡಿಯಲ್ಲಿ ಸೇರಿಸಲು ಇರುವ ಮುಖ್ಯ ಉದ್ದೇಶ ಹೀಗಿದೆ: ಇಲ್ಲಿಯವರೆಗೆ ಈ ಅಪರಾಧವನ್ನು ಕಾಯ್ದೆಯ ಅಡಿಯಲ್ಲಿ ತಂದಿರುವುದಿಲ್ಲ ಜೊತೆಗೆ ಈ ಅಪರಾಧ ಸಂವಿಧಾನದ ಅನುಚ್ಛೇದ 23ರ ಸ್ಪಷ್ಟ ಉಲ್ಲಂಘನೆ ಆಗಿದೆ. ಈ ಅಪರಾಧದ ಕೆಲವು ಸ್ವರೂಪಗಳನ್ನು ಕೆಳಗೆ ತಿಳಿಸಲಾಗಿದೆ ಹಾಗೂ ಈ ಅಪರಾಧಗಳು ಇತ್ತೀಚಿನ ದಿನಗಳಲ್ಲಿ ಹೆಚ್ಚುತ್ತಿವೆ.

a) ಕಾರ್ಮಿಕರು ಕೆಲಸ ಮುಗಿಸಿದ ನಂತರವೂ ಪ್ರಬಲ ಜಾತಿಯ ಭೂಒಡೆಯರು ವೇತನವನ್ನು ನೀಡದೇ ಇರುವುದು.
b) ಭಾಗಶ: ವೇತನ ನೀಡುವುದು ಮತ್ತು ನಿಜವಾಗಿ ಕೊಡಬೇಕಿರುವ ವೇತನ ನೀಡಲು ನಿರಾಕರಿಸುವುದು.
c) ವೇತನದ ಬೇಡಿಕೆ ಮುಂದಿಟ್ಟ ಪರಿಣಾಮ ದೈಹಿಕ ಹಲ್ಲೆ ನಡೆಸುವುದು.
d) ಸಮಯಕ್ಕೆ ಸರಿಯಾಗಿ ವೇತನ ನೀಡದೇ ಇರುವುದು ಹಾಗೂ ಹೆಚ್ಚು ಸಮಯದವರೆಗೆ ವೇತನ ನೀಡದೆ ತಡ ಮಾಡುವುದು.
e) ಪರಿಶಿಷ್ಟರ ಕೈಗೆ ನೀಡದೇ ನೆಲದ ಮೇಲೆ ಹಣ ಇಡುವುದು.
f) ಪರಿಶಿಷ್ಟರ ಕೈಗೆ ಹಣ ಎಸೆಯುವುದು.

ಪ್ರಕರಣಗಳ ಕಿರುಪರಿಚಯ:

*"ಪೂರ್ವ ಚಂಪರನ್ ಜಿಲ್ಲೆಯ ಚಿರಾಯ ಅಂಚೆ, ಪಿಂಡರಿ ಎನ್ನುವ ಗ್ರಾಮದ ದಲಿತ ಕಾರ್ಮಿಕರು ಮಾಡಿದ ಕೆಲಸಕ್ಕೆ ವೇತನ ಕೇಳಿದರೆಂದು ಭೂಮಾಲಿಕ ದಿನಾಂಕ 15–04–07ರಂದು ಹಿಗ್ಗಾಮುಗ್ಗ ಥಳಿಸಿದನು. ಈ ಘಟನೆಯಲ್ಲಿ ಇಬ್ಬರು ತಮ್ಮ ದೃಷ್ಟಿ ಕಳೆದುಕೊಂಡರು".*

*"ಕೇಂದ್ರಾಡಳಿತ ಪ್ರದೇಶ ಪಾಂಡಿಚೆರಿಯ ಕಡಲೂರಿನಲ್ಲಿ ಪರಿಶಿಷ್ಟರು ಸಂಪೂರ್ಣ ವೇತನ ಕೇಳಿದರೆಂದು ದಿನಾಂಕ 31–01–07ರಂದು ಅವರಿಗೆ ಕಿರುಕುಳ ನೀಡಿ ಅವರನ್ನು ಸುಳ್ಳು ಪ್ರಕರಣವೊಂದರಲ್ಲಿ ಸಿಕ್ಕಿಹಾಕಿಕೊಳ್ಳುವಂತೆ ಮಾಡಲಾಯಿತು".*

*"ದಿನಾಂಕ 01–06–07ರಂದು ಬಿಹಾರ ರಾಜ್ಯದ ನಾವಡ ಜಿಲ್ಲೆಯಲ್ಲಿ ರಜೌಳಿ ಅಂಚೆ, ಚಾಫೆಲ್ ಬಳಿ 50 ದಲಿತ ಕಾರ್ಮಿಕರಿಗೆ ವೇತನ ನೀಡಲು ಅರಣ್ಯ ಇಲಾಖೆ ಅಧಿಕಾರಿಗಳು ನಿರಾಕರಿಸಿದರು.*

ಕಾರ್ಮಿಕರಿಗೆ ಸೂಕ್ತ ವೇತನ, ಕೆಲಸ ಮಾಡುವ ಸುರಕ್ಷಿತ ವಾತಾವರಣ ಮತ್ತು ಪ್ರತಿ ವ್ಯಕ್ತಿಗೂ ತನಗೆ ಇಷ್ಟವಾಗುವ ಕೆಲಸವನ್ನು ಮಾಡುವ ಅವಕಾಶ ಮತ್ತು ಬಲವಂತದ ಕೆಲಸ ಮಾಡುವುದನ್ನು ನಿಶೇಧಿಸುವ ತನ್ನ ಕರ್ತವ್ಯವನ್ನು ಪಾಲಿಸುವ ನಿಟ್ಟಿನಲ್ಲಿ ರಾಷ್ಟ್ರವು ಹಲವಾರು ಅಂತರಾಷ್ಟ್ರೀಯ ಸಾಧನಗಳನ್ನು ಕಾನೂನು ವ್ಯವಸ್ಥೆಯಲ್ಲಿ ಸೇರಿಸಿದೆ. ECRI ಮಾರ್ಗದರ್ಶನಗಳು ಸಹ ಉದ್ಯೋಗವನ್ನು ಪಡೆದುಕೊಳ್ಳುವಾಗ, ಕೆಲಸದ ವಾತಾವರಣ ಮತ್ತು ಕೆಲಸಕ್ಕೆ ವೇತನ ನೀಡುವಾಗ ತೋರುವ ತಾರತಮ್ಯವನ್ನು ನಿಷೇಧಿಸುವ ಕಾನೂನುಗಳನ್ನು ಜಾರಿಗೆ ತರಬೇಕು ಎಂದು ಶಿಫಾರಸ್ಸು ಮಾಡುತ್ತದೆ.

**2. ಪ್ರತ್ಯಾರೋಪ ಪ್ರಕರಣಗಳು:**

ದೌರ್ಜನ್ಯಕ್ಕೆ ಒಳಗಾದ ವ್ಯಕ್ತಿಗಳ ವಿರುದ್ಧ ಸುಳ್ಳು ಪ್ರಕರಣಗಳನ್ನು ದಾಖಲಿಸುವುದು ಹೆಚ್ಚಾಗುತ್ತಿರುವುದು ಮಾತ್ರ ಸ್ಪಷ್ಟ ದೌರ್ಜನ್ಯದ ವಿರುದ್ಧ ಪ್ರತ್ಯಾರೋಪ ಪ್ರಕರಣಗಳನ್ನು ದಾಖಲಿಸಲು ಪ್ರಾರಂಭಿಸಿರುವುದು, ಪರಿಶಿಷ್ಟರ ವಿರುದ್ಧ ಮರುದಾಳಿ ಮಾಡುವ ಉದ್ದೇಶವನ್ನು ಸೂಚಿಸುತ್ತದೆ, ಪ್ರಬಲ ಜಾತಿಯ ಜನರು ಈ ವಿಧಾನವನ್ನು ಸಂಘಟಿತರಾಗಿ ನಡೆಸುವ ಮೂಲಕ ಕ್ರಮೇಣ 1989ರ ಕಾಯ್ದೆಯನ್ನು ನಿಷ್ಕ್ರಿಯೆಗೊಳಿಸುವ ಮುನ್ಸೂಚನೆ ನೀಡುತ್ತದೆ. ಪ.ಜಾತಿ/ಪಂಗಡಗಳ ಜನರ ವಿರುದ್ಧ ಪ್ರತಿ ಪ್ರಕರಣಗಳನ್ನು ಬೇಕಾಬಿಟ್ಟಿ ದಾಖಲಿಸುತ್ತಿದ್ದು, ಈ ಪ್ರತಿ ಪ್ರಕರಣಗಳ ವರದಿಯನ್ನು ಆಧರಿಸಿ ಪೋಲೀಸರು ಪ.ಜಾತಿ/ಪಂಗಡದ ಜನರನ್ನು ಬಂಧಿಸುತ್ತಿದ್ದಾರೆ, ಇದೇ ಸಂದರ್ಭದಲ್ಲಿ ಪ.ಜಾತಿ ಮತ್ತು ಪ.ಪಂಗಡದ ಜನರ ದೂರನ್ನು ಆಧರಿಸಿ ಪ್ರಬಲ ಜಾತಿಯ ದುಷ್ಕರ್ಮಿಗಳನ್ನು ಪೋಲೀಸರು ಬಂಧಿಸುತ್ತಿಲ್ಲ ಮತ್ತು ಬಹುತೇಕ ಪ್ರಕರಣಗಳನ್ನು ದಾಖಲಿಸುವುದೇ ಇಲ್ಲ.

ಪ್ರತ್ಯಾರೋಪದ ದೂರು ನೀಡುವ ಮೂಲಕ ಪರಿಶಿಷ್ಟರ ಮೇಲೆ ಬರ್ಬರವಾದ ದೈಹಿಕ ಹಿಂಸೆಯಾಗುತ್ತದೆ. ಪ್ರತ್ಯಾರೋಪದ ದೂರು ದಾಖಲಿಸುವುದು ಹೆಚ್ಚುತ್ತಿರುವುದರಿಂದ ಮತ್ತು ಈ ಪ್ರಕರಣಗಳು ಖಾಸಗಿ ದೂರಿನ ಬದಲಾಗಿ ಪೋಲೀಸರು ದಾಖಲಿಸುತ್ತಿರುವುದರಿಂದ ಅದು ರಾಜ್ಯದ ಪ್ರಕರಣಗಳಾಗುತ್ತವೆ, ಇಲ್ಲಿ ಪ್ರತ್ಯಾರೋಪ ದೂರುಗಳಿಂದ ಉಂಟಾಗುವ ಹಿಂಸೆ ಮತ್ತು ದೌರ್ಜನ್ಯದಿಂದ ಪರಿಶಿಷ್ಟರನ್ನು ರಕ್ಷಿಸುವುದು ಸರ್ಕಾರದ ಕರ್ತವ್ಯ. ಈ ವಿಲಕ್ಷಣ ಸನ್ನಿವೇಶದಲ್ಲಿ ದೌರ್ಜನ್ಯಕ್ಕೆ ಒಳಗಾದ ವ್ಯಕ್ತಿಗಳೇ ಮತ್ತೊಮ್ಮೆ ಪ್ರತ್ಯಾರೋಪ ದೂರುಗಳಿಗೆ ಬಲಿಯಾಗುತ್ತಾರೆ '(ಪರಿಶಿಷ್ಟ ಫಿರ್ಯಾದುದಾರರು), ಅವರನ್ನು ಆರೋಪಿಗಳೆಂದು ಪ್ರತ್ಯಾರೋಪ ದೂರು ದಾಖಲಿಸಿ, ಅವರನ್ನು ಬಂಧಿಸಿ, ಜೈಲಿನಲ್ಲಿ ಕೊಳೆಯುವಂತೆ ಮಾಡಲಾಗುತ್ತದೆ, ತಮ್ಮ ಆರ್ಥಿಕ ದುರ್ಬಲತೆಯ ಕಾರಣ ಜಾಮೀನು ಪಡೆದು ಹೊರ ಬರಲು ವಕೀಲರನ್ನು ನೇಮಿಸಲು ಸಹ ಅವರಿಗೆ ಆಗುವುದಿಲ್ಲ.

ಹಲವು ರೀತಿಯಲ್ಲಿ ಪ್ರತ್ಯಾರೋಪ ದೂರುಗಳನ್ನು ದಾಖಲಿಸುವ ತಂತ್ರದ ಪರಿಣಾಮ ದೌರ್ಜನ್ಯ ತಡೆ ಕಾಯ್ದೆಯ ಘನ ಉದ್ದೇಶಕ್ಕೆ ಸೋಲಾಗಿದೆ.

a) ದೌರ್ಜನ್ಯಕ್ಕೆ ಬಲಿಯಾದವರಿಗೆ ರಾಜಿಯಾಗಲು ಒತ್ತಡ ಹೇರುವ ಸಲುವಾಗಿ ಪ್ರತ್ಯಾರೋಪ ದೂರು ದಾಖಲಿಸುವುದು ಈಗಿನ ವಾಡಿಕೆ.
b) ಪೋಲೀಸರೂ ದುಷ್ಕರ್ಮಿಗಳೊಟ್ಟಿಗೆ ಶಾಮೀಲಾಗಿ ದೌರ್ಜನ್ಯಕ್ಕೆ ಬಲಿಯಾದವರ ಮೇಲೆ ಪ್ರತ್ಯಾರೋಪ ಎಫ್ಐಆರ್ ದಾಖಲಿಸುತ್ತಾರೆ.
c) ಸಂಧಾನಕ್ಕೆ ಬರುವಂತೆ ಮಾಡಲು ಪೋಲೀಸ್ ಅಧಿಕಾರಿಗಳು ದೌರ್ಜನ್ಯಕ್ಕೆ ಬಲಿಯಾದವರ ಮೇಲೆ ಘೋರ ಅಪರಾಧಗಳ ಸೆಕ್ಷನ್ ಅನ್ವಯ ಪ್ರತ್ಯಾರೋಪದ ಎಫ್ಐಆರ್ ದಾಖಲಿಸುತ್ತಾರೆ.
d) ನ್ಯಾಯಾಲಯಗಳಲ್ಲಿ ಪ್ರಕರಣಗಳು ವಿಚಾರಣೆಗೆ ಬರುವ ಮೊದಲು ಘಟನೆಯ ಗಂಭೀರತೆ ತಿಳಿಗೊಳಿಸುವ ಉದ್ದೇಶದಿಂದ, ಘಟನೆ ಪ್ರಬಲ ಜಾತಿಯ ದುಷ್ಕರ್ಮಿಗಳಿಂದ ಆಗಿಲ್ಲ ಬದಲಿಗೆ ದೌರ್ಜನ್ಯಕ್ಕೆ ಒಳಗಾದ ವ್ಯಕ್ತಿಗಳೇ ದುಷ್ಕರ್ಮಿಗಳು ಎಂದು ಬಿಂಬಿಸಲಾಗುತ್ತದೆ.

ಪ್ರಕರಣಗಳ ಕಿರುಪರಿಚಯ:

*"ದಿನಾಂಕ 30–06–2007ರಂದು ಊನಾ, ಜಿಲ್ಲೆ ಮತ್ತು ತಾಲ್ಲೂಕು, ಸಂತೋಖ್‌ಫರ್ ಅಂಚೆ, ಛತಾರ್ಪುರ್ ಧಾಬಾದಲ್ಲಿ ಪರಿಶಿಷ್ಟನೊಬ್ಬ ದೇವಸ್ಥಾನದ ಹಣವನ್ನು ದುರ್ಬಳಕೆ ಮಾಡಿದನು ಎಂಬ ಸುಳ್ಳು ಪ್ರಕರಣದಲ್ಲಿ ಸಿಕ್ಕಿಹಾಕಿಸಿದರು".*

*"ದಿನಾಂಕ 31-01-07ರಂದು ಕೇಂದ್ರಾಡಳಿತ ಪ್ರದೇಶವಾದ ಪಾಂಡಿಚೇರಿಯ ಕಡಲೂರಿನಲ್ಲಿ ಪರಿಶಿಷ್ಟರು ತಮ್ಮ ಪೂರ್ಣ ವೇತನವನ್ನು ಕೇಳಿದ ಪರಿಣಾಮ ಅವರನ್ನು ಹಿಂಸೆಗೆ ಒಳಪಡಿಸಿ ಅವರನ್ನು ಪ್ರತ್ಯಾರೋಪ ಪ್ರಕರಣದಲ್ಲಿ ಸಿಕ್ಕಿಹಾಕಿಸಿದರು".*

*"ದಿನಾಂಕ 06-06-07ರಂದು ಒರಿಸ್ಸಾದ ಭದ್ರಕ್ ಜಿಲ್ಲೆಯಲ್ಲಿ ಪರಿಶಿಷ್ಟರಲ್ಲದವರು, ಪರಿಶಿಷ್ಟ ಮಹಿಳೆಯೊಬ್ಬಳ ಮೇಲೆ ಸಾಮೂಹಿಕ ಅತ್ಯಾಚಾರ ನಡೆಸಿದರು ಹಾಗೂ ಪೋಲೀಸರು ಆಕೆಯ ಗಂಡನನ್ನು ಸುಳ್ಳು ಪ್ರಕರಣದಲ್ಲಿ ಸಿಕ್ಕಿ ಹಾಕಿಸಿದರು".*

*"ದಿನಾಂಕ 08-06-07ರಂದು ಪಂಜಾಬಿನ ಮುಕ್ತಸಾರ್ ಬಳಿ ಪೋಲೀಸರು ಪರಿಶಿಷ್ಟನ ಮೇಲೆ ಪ್ರತ್ಯಾರೋಪ ಪ್ರಕರಣ ದಾಖಲಿಸಿದರು".*

ಕಾನೂನಿನ ದೃಷ್ಟಿಯಲ್ಲಿ ಸಮಾನತೆಯ ಹಕ್ಕು, ಕಾರಣವಿಲ್ಲದೆ ಬಂಧನಕ್ಕೆ ಒಳಗಾಗದಿರುವ ಹಕ್ಕು, ಆರೋಪ ಹೊರಿಸಿದಲ್ಲಿ ಎಲ್ಲರಿಗೂ ವಿಚಾರಣೆಗಾಗಿ ಉತ್ತಮ ಅವಕಾಶ ಪಡೆದುಕೊಳ್ಳುವ ಹಕ್ಕು ಮತ್ತು ಅದನ್ನು ಸ್ಪಷ್ಟವಾಗಿ ತಿಳಿಸುವಂತಹ ನಾಗರಿಕ ಮತ್ತು ರಾಜಕೀಯ ಹಕ್ಕುಗಳ ಅಂತರಾಷ್ಟ್ರೀಯ ಒಪ್ಪಂದಗಳನ್ನು ಭಾರತ ಮಾಡಿಕೊಂಡಿದೆ. ಈ ಹಕ್ಕುಗಳನ್ನು ಪ್ರತಿಬಿಂಬಿಸುವ ಕಾಯ್ದೆಯನ್ನು ಪರಿಪಾಲಿಸುವಂತೆ ಮಾಡುವುದು ರಾಷ್ಟ್ರದ ಜವಾಬ್ದಾರಿ. ECRI ಮಾರ್ಗದರ್ಶನಗಳು ಜನಾಂಗೀಯ ದೌರ್ಜನ್ಯಕ್ಕೊಳಗಾಗಿ ದೂರು ನೀಡಲು ಬಂದವರ ಮೇಲೆ ಪ್ರತ್ಯಾರೋಪ ಕ್ರಮ ತೆಗೆದುಕೊಳ್ಳುವುದರಿಂದ ದೌರ್ಜನ್ಯಕ್ಕೆ ಒಳಗಾದವರಿಗೆ ರಕ್ಷಣೆ ನೀಡುವ ಕಾಯ್ದೆ ಜಾರಿಗೆ ತರಬೇಕೆಂದು ಶಿಫಾರಸ್ಸು ಮಾಡುತ್ತದೆ. ಈ ರಕ್ಷಣೆ ಸಾಕ್ಷಿ ಹೇಳುವವರಿಗೆ ಅಥವಾ ಈ ಪ್ರಕ್ರಿಯೆಯಲ್ಲಿ ನೆರವು ಮಾಡುವವರಿಗೆ ಸಹ ನೀಡಬೇಕು ಎಂದು ಶಿಫಾರಸ್ಸು ಮಾಡುತ್ತದೆ.

3. **ಸಾಮಾಜಿಕ, ಆರ್ಥಿಕ ಬಹಿಷ್ಕಾರ ಅಥವಾ ನೈತಿಕ ಬೆದರಿಕೆ–** ಸಾಮಾಜಿಕ ಅಥವಾ ಆರ್ಥಿಕ ಬಹಿಷ್ಕಾರಗಳು ಈ ಮೊದಲು ಮತ್ತು ಈಗ ಕಳವಳ ಪಡುವ ಸಂಗತಿಗಳು. ಆದರೆ, ಈ ವಿಚಾರವಾಗಿ ಕಾಯ್ದೆಯಲ್ಲಿ ಸ್ಪಷ್ಟವಾಗಿ ತಿಳಿಸಿಲ್ಲ. ಕೆಲವು ಆಚರಣೆಗಳು ಹೀಗಿವೆ:

a) ಅಂಗಡಿ, ಸಾರ್ವಜನಿಕ ಹೋಟೆಲ್ ಅಥವಾ ಸಾರ್ವಜನಿಕ ಮನೋರಂಜನೆ ಸ್ಥಳಗಳಿಗೆ ಹೋಗದಂತೆ ಸಾಮಾಜಿಕ ನಿರ್ಬಂಧ ಹೇರುವುದು;

b) ಅಂಗಡಿಯ ಮಾಲಿಕರು ಪರಿಶಿಷ್ಟರಿಗೆ ಯಾವ ವಸ್ತುಗಳನ್ನು ಮಾರಕೂಡದು ಎಂದು ತಾಕೀತು ಮಾಡುವುದು,

c) ಗ್ರಾಮದ ಕೆರೆಕಟ್ಟೆಗಳಲ್ಲಿ ದನಕರುಗಳನ್ನು ತೊಳೆಯಲು ಅಥವಾ ನೀರು ಕುಡಿಯಲು ನಿಶೇಧ ಹೇರುವುದು,

d) ಪಂಚಾಯತ್ ವತಿಯಿಂದ ಹಾಕಿಸಲಾದ ನೀರಿನ ಪಂಪಿನಿಂದ ನೀರನ್ನು ತೆಗೆದುಕೊಳ್ಳದಂತೆ ತಡೆಯುವುದು

e) ಸಾರ್ವಜನಿಕ ಹೋಟೆಲುಗಳು, ಧರ್ಮಶಾಲಗಳಲ್ಲಿ ಇರುವ ತಟ್ಟೆ ಲೋಟಗಳನ್ನು ಉಪಯೋಗಿಸದಂತೆ ತಡೆಯುವುದು;

f) ಯಾವುದೇ ನದಿ, ತೊರೆ, ಕಾರಂಜಿ, ಬಾವಿ, ಕೆರೆ, ನಲ್ಲಿ ಅಥವಾ ಇತರೆ ನೀರು ದೊರೆಯುವ ಸ್ಥಳದಲ್ಲಿ ನೀರು ಬಳಸದಿರುವಂತೆ, ಅಥವಾ ಸ್ನಾನ ಮಾಡುವುದನ್ನು ತಡೆಯುವುದು,

g) ಶವ ಹೂಳುವ ಅಥವಾ ಸುಡುವ ಸ್ಥಳವನ್ನು ಬಳಸಲು ತಡೆಯುವುದು,

h) ಶೌಚ ವ್ಯವಸ್ಥೆಯ ಯಾವುದೇ ಅನುಕೂಲವನ್ನು ಬಳಸದೇ ಇರುವಂತೆ ತಡೆಯುವುದು.

i) ಸಾರ್ವಜನಿಕರು ಬಳಸುವ ಯಾವುದೇ ರಸ್ತೆ, ಅಥವಾ ಓಣಿ, ಅಥವಾ ಇನ್ನಿತರೆ ಸಾರ್ವಜನಿಕ ಸ್ಥಳವನ್ನು ಬಳಸುವ ಹಕ್ಕುಗಳನ್ನು ತಡೆಯುವುದು.

ಪ್ರತಿಯೊಬ್ಬರಿಗೂ ಸಾಂಸ್ಕೃತಿಕ ಮತ್ತು ಸಾಮಾಜಿಕ ಜೀವನವನ್ನು ಸವಿಯಲು ಬೇಕಿರುವ ಹಕ್ಕುಗಳು ದೊರೆಯುವಂತಾಗುವ ಶಾಸನಗಳನ್ನು ಜಾರಿಗೆ ತರಲಾಗುವುದು ಎಂಬ ಅಂತರಾಷ್ಟ್ರೀಯ ಒಪ್ಪಂದಗಳನ್ನು ರಾಷ್ಟ್ರವು ಮಾಡಿಕೊಂಡಿದೆ. ECRI ಮಾರ್ಗದರ್ಶನಗಳು ಸಾಮಾಜಿಕ ಬಹಿಷ್ಕಾರ ಮತ್ತು ಪಕ್ಷಪಾತವನ್ನು ನಿಶೇಧಿಸುವ ಶಾಸನವನ್ನು ಜಾರಿಗೆ ತರಬೇಕು ಎಂದು ಶಿಫಾರಸ್ಸು ಮಾಡುತ್ತದೆ.

**ಆರ್ಥಿಕ ಬಹಿಷ್ಕಾರ–**ಪ್ರಭಾವಿ ಜಾತಿಯವರು ಪರಿಶಿಷ್ಟರ ಮೇಲೆ ಆರ್ಥಿಕ ಬಹಿಷ್ಕಾರ ಹೇರುವ ಉದಾಹರಣೆಗಳು:

a) ಪರಿಶಿಷ್ಟರ ಜೊತೆ ವ್ಯವಹರಿಸಲು, ವೇತನಕ್ಕಾಗಿ ಕೆಲಸ ಮಾಡಲು ಅಥವಾ ವ್ಯಾಪಾರ ಮಾಡಲು ನಿರಾಕರಣೆ

b) ಪರಿಶಿಷ್ಟರ ಜೊತೆ ಸಾಮಾಜಿಕ, ವ್ಯಾವಹಾರಿಕ ಅಥವಾ ವ್ಯಾಪಾರದ ಸಂಬಂಧವನ್ನು ಹಿಂದೆಗೆದುಕೊಳ್ಳುವುದು

c) ಅವರಿಗೆ ಕೆಲಸ ನೀಡುವುದನ್ನು ನಿಲ್ಲಿಸುವುದು ಅಥವಾ ನಿರ್ಬಂಧ ಹೇರುವುದು

d) ಪರಿಶಿಷ್ಟರನ್ನು ಬೇರೆ ಕಡೆ ಕೆಲಸಕ್ಕೆ ಹೋಗದಂತೆ ತಡೆಯುವುದು

e) ಸ್ವಗ್ರಾಮ ಮತ್ತು ಹತ್ತಿರದ ಗ್ರಾಮಗಳಲ್ಲಿ ಯಾವುದೇ ಕಸುಬು ಅಥವಾ ಉದ್ಯೋಗವನ್ನು ಮಾಡದಂತೆ ಪರಿಶಿಷ್ಟರನ್ನು ತಡೆಯುವುದು

f) ಪರಿಶಿಷ್ಟರು ಯಾವುದೇ ವ್ಯಾಪಾರ ಅಥವಾ ಉದ್ಯೋಗ ಅಥವಾ ಕೆಲಸವನ್ನು ಮಾಡದಂತೆ ತಡೆಯುವುದು.

ಪ್ರಕರಣಗಳ ಕಿರುಪರಿಚಯ:

*"ದಿನಾಂಕ 27-04-09ರಂದು ಬೆಳಗಾವಿ ಜಿಲ್ಲೆಯ ಕಿತ್ತೂರು ಗ್ರಾಮದಲ್ಲಿ ಪ್ರಭಾವಿ ಜಾತಿಯ ಜನರು ಪರಿಶಿಷ್ಟರ ಮೇಲೆ ಸಾಮಾಜಿಕ ಬಹಿಷ್ಕಾರ ಹೇರಿದರು".*

*"ದಿನಾಂಕ 03-06-09ರಂದು ಕರ್ನಾಟಕದ ಸಿಂಧನೂರು ತಾಲ್ಲೂಕಿನ ಸಿಂಗಾಪುರ ಗ್ರಾಮದಲ್ಲಿ ಪ್ರಬಲ ಜಾತಿಯ ಜನರು ಪರಿಶಿಷ್ಟರ ಮೇಲೆ ಸಾಮಾಜಿಕ ಬಹಿಷ್ಕಾರ ಹೇರಿದರು".*

*"ದಿನಾಂಕ 19-11-07ರಂದು ರಾಜಸಮಂದ್ ಜಿಲ್ಲೆಯ ಕಟ್ಟವಳಿ ತಲ್ಯೆ ಗ್ರಾಮದಲ್ಲಿ ಪ್ರಬಲ ಜಾತಿಯ ಜನರು ಪರಿಶಿಷ್ಟರ ಮೇಲೆ ಸಾಮಾಜಿಕ ಬಹಿಷ್ಕಾರ ಹೇರಿದರು".*

ಪ್ರತಿಯೊಬ್ಬ ವ್ಯಕ್ತಿಯೂ ತನಗೆ ಬೇಕಾದ ಉದ್ಯೋಗ ಮತ್ತು ಕೆಲಸವನ್ನು ಆರಿಸಿಕೊಳ್ಳುವ ಅವಕಾಶ, ಕೆಲಸಕ್ಕೆ ಸುರಕ್ಷಿತ ವಾತಾವರಣ, ಉತ್ತಮ ವೇತನ ಮತ್ತು ಬಲವಂತದ ಕೆಲಸವನ್ನು ನಿಶೇಧಿಸುವ ಕಾನೂನುಗಳನ್ನು ಅನುಷ್ಠಾನ ಮಾಡುವ ನಿಟ್ಟಿನಲ್ಲಿ ಭಾರತ ಅಂತರಾಷ್ಟ್ರೀಯ ಒಪ್ಪಂದಗಳನ್ನು ಮಡಿಕೊಂಡಿದೆ. ECRI ಮಾರ್ಗದರ್ಶನಗಳು ಸಹ ಉದ್ಯೋಗ ಅವಕಾಶ, ಕೆಲಸದ ಸುರಕ್ಷಿತ ವಾತಾವರಣ ಮತ್ತು ಉತ್ತಮ ವೇತನ ನೀಡದಿರುವ ಆರ್ಥಿಕ ಬಹಿಷ್ಕಾರಗಳನ್ನೂ ಒಳಗೊಂಡಂತೆ ಪಕ್ಷಪಾತವನ್ನು ನಿಶೇಧಿಸುವ ಕಾಯ್ದೆ ಜಾರಿ ಮಾಡಲು ಶಿಫಾರಸ್ಸು ಮಾಡುತ್ತದೆ.

4. **ಸಣ್ಣ ಅಥವಾ ತೀವ್ರತರ ಗಾಯ–** ಮನನೋಯಿಸುವ ಮತ್ತು ಅಸ್ಪೃಶ್ಯತೆಯಲ್ಲಿ ಜಾತಿ ನಿಂದನೆ ಸರ್ವೆ ಸಾಧಾರಣ ವಿಷಯ ಎಂದು ತಿಳಿದುಕೊಳ್ಳಲಾಗಿದೆ. ಬಹುತೇಕ ಪ್ರಕರಣಗಳಲ್ಲಿ ಸಣ್ಣ ಅಥವಾ ತೀವ್ರತರ ಗಾಯಗಳಾಗುತ್ತವೆ ಎಂಬುದು ಅನೇಕರಿಗೆ ತಿಳಿದಿಲ್ಲ. ಪ್ರಭಾವಿ ಜಾತಿಯವರು ಪರಿಶಿಷ್ಟರ ಮನನೋಯಿಸಿ ಅವಮಾನಿಸುವ ಪ್ರಕ್ರಿಯೆಯಲ್ಲಿ ದೈಹಿಕವಾಗಿ ಘಾಸಿಗೊಳಿಸಿ ಸಣ್ಣ ಅಥವಾ ತೀವ್ರ ಗಾಯಗಳನ್ನು ಮಾಡುತ್ತಾರೆ. ಆದರೆ, ಸಣ್ಣ ಮತ್ತು ತೀವ್ರ ಗಾಯಗಳ ಕುರಿತು ದೌರ್ಜನ್ಯ ತಡೆ ಕಾಯ್ದೆಯಲ್ಲಿ ಯಾವುದೇ ಸೆಕ್ಷನ್‌ಗಳಲ್ಲಿ ತಿಳಿಸಲಾಗಿಲ್ಲ. ಸಣ್ಣ ಮತ್ತು ತೀವ್ರ ಗಾಯಗಳನ್ನು ಒಳಗೊಂಡ ಕೆಲವು ದೌರ್ಜನ್ಯಗಳು ಈ ರೀತಿ ಇವೆ:

a) ಆರೋಪಿಗಳು ಪರಿಶಿಷ್ಟರನ್ನು ನಿಂದಿಸಿ ಅವಮಾನಿಸುವ ನಿಟ್ಟಿನಲ್ಲಿ ಅವರಿಗೆ ಹೊಲಸು ಪದಾರ್ಥಗಳನ್ನು ತಿಂದು ಕುಡಿಯುವಂತೆ ಮಾಡುವುದೊಂದೇ ಅಲ್ಲದೆ ತಮ್ಮ ಕೈ ಮತ್ತು ಕಾಲುಗಳನ್ನು ಬಳಸಿ ಹೊಡೆದು ಒದ್ದು ಅವರಿಗೆ ತೀವ್ರ ಗಾಯಗಳನ್ನು ಉಂಟು ಮಾಡುತ್ತಾರೆ.

b) ಪರಿಶಿಷ್ಟರ ಮುಖಕ್ಕೆ ಮಸಿ ಬಳಿದು ಅವರನ್ನು ಊರಲ್ಲಿ ಮೆರವಣಿಗೆಯಲ್ಲಿ ಕೊಂಡೊಯ್ಯುವಾಗ ಶಿಕ್ಷೆಯ ಗುರುತಾಗಿ ಅವರ ಕುಂಡೆ ಮತ್ತು ತೊಡೆಗಳ ಮೇಲೆ ಬಲವಾಗಿ ಒದೆಯುತ್ತಾರೆ.

c) ಪರಿಶಿಷ್ಟರ ಮೇಲೆ ಸಾಮೂಹಿಕವಾಗಿ ಆಕ್ರಮಣ ಮಾಡುವಾಗ, ಪ್ರಬಲ ಜಾತಿಯವರು ತಮ್ಮ ಕೈಯಲ್ಲಿ ಕೋಲು, ಕೊಡಲಿಗಳನ್ನು ಮತ್ತು ಇತರೆ ಹತ್ಯಾರಗಳನ್ನು ಹಿಡಿದು ಇಡೀ ಗ್ರಾಮವನ್ನು ಧ್ವಂಸ ಮಾಡುತ್ತಾರೆ ಜೊತೆಗೆ ಅವರಿಗೆ ಹೊಡೆಯುತ್ತಾರೆ.

d) ಪರಿಶಿಷ್ಟರಾಗಿರುವ ಬಡ ದಿನಗೂಲಿಯವರು ವೇತನದ ಬೇಡಿಕೆ ಇಟ್ಟಾಗ, ಆರೋಪಿಯು ಅವರನ್ನು ಜಾತಿಯ ಹೆಸರು ಹಿಡಿದು ನಿಂದಿಸುವುದಷ್ಟೇ ಅಲ್ಲದೆ ದೈಹಿಕವಾಗಿ ಹಲ್ಲೆ ಮಾಡುವುದು ಸಾಮಾನ್ಯ ವಾಡಿಕೆ ಆಗಿದೆ.

e) ಅನೇಕ ಕೊಲೆ ಮತ್ತು ತೀವ್ರ ಗಾಯದ ಪ್ರಕರಣಗಳಲ್ಲಿ ಪ್ರಬಲ ಜಾತಿಯ ಜನರು ತಮ್ಮ ಬಳಿ ಚಾಕು, ಚೂರಿ, ಕೊಡಲಿ, ಬಾಣ, ರಿವಾಲ್ವರ್, ಬಂದೂಕ, ಲಾಠಿಯನ್ನು ಕೊಂಡು ಹೋಗುತ್ತಾರೆ ಹಾಗೂ ಇವುಗಳಿಂದ ಮಾಡಿದ ಹಲ್ಲೆಯಿಂದಾಗಿ ದೇಹದ ಮೇಲೆ ಶಾಶ್ವತವಾದ ಅಂಗವಿಕಲತೆ ಉಂಟಾಗುವ ಅನೇಕ ನಿದರ್ಶನಗಳು ಕಂಡು ಬಂದಿವೆ.

ಪ್ರಕರಣಗಳ ಕಿರುಪರಿಚಯ:

*"ದಿನಾಂಕ 10–10–07ರಂದು ಮಧ್ಯಪ್ರದೇಶ ರಾಜ್ಯದ ಹೊಸಂಗಬಾದ್‌ನಲ್ಲಿ ಪ್ರಬಲ ಜಾತಿಯವರ ಹೊಲದಲ್ಲಿ ಬೆಳೆ ಕೊಯಿಲು ಮಾಡಲು ನಿರಾಕರಿಸಿದ ದಲಿತ ಮಹಿಳೆಯನ್ನು ಹೊಡೆದು ಬಡಿದು ತೀವ್ರ ಗಾಯಗಳನ್ನು ಮಾಡಿ ಮೂತ್ರ ಕುಡಿಸಿದರು".*

*"ದಿನಾಂಕ 12–06–07ರಂದು ಬಿಹಾರ ರಾಜ್ಯದ ಗಯಾ ಜಿಲ್ಲೆಯ ಮೋಹನಪುರ ಅಂಚೆ ಸಿಂಧುಘರ್ ಗ್ರಾಮದಲ್ಲಿ ಅರ್ಧ ಡಜನ್ ಪರಿಶಿಷ್ಟ ಕುಟುಂಬದವರನ್ನು ಸ್ಥಳೀಯ ಪೋಲೀಸರು ಭೀಕರವಾಗಿ ಹೊಡೆದು ಅವರ ಮೇಲೆ ಸುಳ್ಳು ಆರೋಪ ಹೊರಿಸಿದರು".*

*ದಿನಾಂಕ 04–03–07ರಂದು ಒರಿಸ್ಸಾದ ಖುರ್ದಾ ಜಿಲ್ಲೆಯಲ್ಲಿ ಪರಿಶಿಷ್ಟರು ಹಲಗೆ(ತಮಟೆ)ಯನ್ನು ಹೊಡೆಯಲು ನಿರಾಕರಿಸಿದ ಕಾರಣ ಪ್ರಬಲ ಜಾತಿಯ ಜನರು ಪರಿಶಿಷ್ಟರ ಮೇಲೆ ಆಕ್ರಮಣ ನಡೆಸಿ ಬಡಿದರು".*

*ದಿನಾಂಕ 07–01–07ರಂದು ಕರ್ನಾಟಕದ ಬೆಂಗಳೂರು ಜಿಲ್ಲೆಯಲ್ಲಿ ದಲಿತರಿಗೆ ಸೇರಬೇಕಿದ್ದ ಭೂಮಿಯನ್ನು ಆಕ್ರಮಿಸಿಕೊಂಡಿದ್ದರಿಂದ ಪರಿಶಿಷ್ಟರಲ್ಲದವರು ಪರಿಶಿಷ್ಟರ ಮೇಲೆ ಆಕ್ರಮಣ ನಡೆಸಿ ಅವರನ್ನು ಘಾಸಿಗೊಳಿಸಿದರು".*

*"ದಿನಾಂಕ 02–02–07ರಂದು ಕರ್ನಾಟಕ ರಾಜ್ಯದ ಮೈಸೂರು ಜಿಲ್ಲೆಯ ದೇವಸ್ಥಾನವೊಂದಕ್ಕೆ ಹೋಗಲು ಯತ್ನಿಸಿದ ಪರಿಶಿಷ್ಟರ ಮೇಲೆ ಪ್ರಬಲ ಜಾತಿಯ ಜನರು ಆಕ್ರಮಣ ನಡೆಸಿ ತೀವ್ರ ಗಾಯಗೊಳಿಸಿದರು".*

*"ದಿನಾಂಕ 26–03–07ರಂದು ಕರ್ನಾಟಕ ರಾಜ್ಯದ ಗುಲಬರ್ಗ ಜಿಲ್ಲೆಯಲ್ಲಿ ದೇವಸ್ಥಾನವೊಂದರ ಹಬ್ಬದಲ್ಲಿ ಪ್ರಬಲ ಜಾತಿಯ ಜನರು ಪರಿಶಿಷ್ಟರ ಮೇಲೆ ಆಕ್ರಮಣ ನಡೆಸಿ ದೈಹಿಕ ಗಾಯಗಳನ್ನು ಮಾಡಿದರು".*

5. **ಮನೆಮುಟ್ಟುಗಳಿಗೆ ಹಾನಿ ಮತ್ತು ಸ್ಥಿರಾಸ್ತಿ, ಚರಾಸ್ತಿಯ ಕೊಳ್ಳಿ–** ಪ್ರಬಲ ಜಾತಿಯ ಸಮುದಾಯದವರು ತಂಡ ಕಟ್ಟಿಕೊಂಡು ಹೆಚ್ಚಿನ ಸಂಖ್ಯೆಯಲ್ಲಿ ಒಂದಾಗಿ ಬಂದು ಪರಿಶಿಷ್ಟರ ಆಸ್ತಿಯನ್ನು ಹಾನಿ ಮಾಡಿ ಧ್ವಂಸ ಮಾಡಿ ಕೊಳ್ಳೆ ಹೊಡೆಯುವುದು ಸಾಮಾನ್ಯ ವಾಡಿಕೆಯಾಗಿದೆ, ಆದರೆ ಈ ದುಷ್ಕರ್ಮಿಗಳು ಐ.ಪಿ.ಸಿಯಲ್ಲಿ ಸುಲಭವಾಗಿ ತಪ್ಪಿಸಿಕೊಳ್ಳುತ್ತಾರೆ, ಮತ್ತು ದೌರ್ಜನ್ಯ ಕಾಯ್ದೆಯಲ್ಲಿ ಸಣ್ಣಪುಟ್ಟ ಅಪರಾಧಗಳಿಗೆ ಬುಕ್ ಮಾಡುತ್ತಾರೆ ಅಥವಾ ಪ್ರಕರಣಗಳನ್ನು ದಾಖಲು ಮಾಡುವುದೇ ಇಲ್ಲ, ಈ ಕಾಯ್ದೆಯ ಸೆಕ್ಷನ್‌ಗಳು ಇಂತಹ ದುಷ್ಕೃತ್ಯಗಳಿಗೆ ನಿರ್ಧಿಷ್ಟ ಶಿಕ್ಷೆಯನ್ನು ತಿಳಿಸುವುದಿಲ್ಲ. ಉದಾಹರಣೆಗೆ:

a) ಆರೋಪಿಯೊಬ್ಬ ಪರಿಶಿಷ್ಟರ ಮೇಲೆ ದೌರ್ಜನ್ಯ ಎಸಗಿದರೆ, ಹಾಗೂ ದೌರ್ಜನ್ಯಕ್ಕೆ ಬಲಿಯಾದ ವ್ಯಕ್ತಿಯು ತನ್ನ ಹಕ್ಕುಗಳನ್ನು ಪ್ರತಿಪಾದಿಸಿದರೆ, ಪ್ರಬಲ ಜಾತಿಯ ಇಡೀ ಸಮುದಾಯ ಗುಂಪಿನಲ್ಲಿ ಬಂದು ಪರಿಶಿಷ್ಟರ ಕೇರಿಯಲ್ಲಿ ಅವರ ಆಸ್ತಿ ಮತ್ತು ಮನೆಗಳನ್ನು ಹಾನಿಗೊಳಿಸಿ, ಪ್ರತಿದಾಳಿ ನಡೆಸುತ್ತಾರೆ. ಉದಾಹರಣೆಗೆ ಹರಿಯಾಣದ ಗೌಹಾನದ ಸಾಮೂಹಿಕ ದೌರ್ಜನ್ಯ ಘಟನೆ, ಜಿಂದ್‌ನಲ್ಲಿ ಕಿಲ್ಲಾ ಜಫರ್‌ಗಢ್, ಹರಿಯಾಣ; ಹರಿಯಾಣದಲ್ಲಿ ಸಲ್ವಾನ್.

b) ಚುನಾವಣೆ ಸಂದರ್ಭದಲ್ಲಿಯೂ ಪರಿಶಿಷ್ಟರು ಅವರಿಗೆ ಬೇಕಾದವರಿಗೆ ಮತ ಹಾಕುವುದನ್ನು ತಡೆಯುತ್ತಾರೆ. ಹಾಗೊಂದು ವೇಳೆ ಪರಿಶಿಷ್ಟರು ಮತವನ್ನು ಹಾಕಿದ್ದಾರೆ ಎಂದು ತಿಳಿದರೆ ಪ್ರಬಲ ಜಾತಿಯ ಜನರು ಗುಂಪಾಗಿ ಬಂದು ಪರಿಶಿಷ್ಟರ ಆಸ್ತಿ ಮತ್ತು ಮನೆಮುಟ್ಟುಗಳನ್ನು ಧ್ವಂಸ ಮಾಡುತ್ತಾರೆ.

ಪ್ರಕರಣದ ಕಿರುಪರಿಚಯ:

*"ದಿನಾಂಕ 02–03–07ರಂದು ಹರಿಯಾಣದ ಕರ್ನಾಲ್ ಜಿಲ್ಲೆಯ ಸಲ್ವಾನ್ ಗ್ರಾಮದಲ್ಲಿ ಪ್ರಬಲ ಜಾತಿಯ ಜನರು ಪರಿಶಿಷ್ಟರ ಮನೆಗಳನ್ನು ಧ್ವಂಸ ಮಾಡಿದರು, ಕೆಡವಿದರು ಮತ್ತು ಸುಟ್ಟರು".*

*"ದಿನಾಂಕ 15–10–08ರಂದು ಮಧ್ಯಪ್ರದೇಶದ ದೇವಾಸ್ ಜಿಲ್ಲೆಯ ಸಲೋನ ಗ್ರಾಮದಲ್ಲಿ ಪ್ರಬಲ ಜಾತಿಯ ಜನರು ಪರಿಶಿಷ್ಟರ ಮನೆಗಳನ್ನು ಧ್ವಂಸ ಮಾಡಿ, ಕೆಡವಿ ಸುಟ್ಟರು".*

*"ದಿನಾಂಕ 23–01–07ರಂದು ಮಹಾರಾಷ್ಟ್ರದ ಬೀಡ್ ಜಿಲ್ಲೆಯಲ್ಲಿ ಗ್ರಾಮ ಪಂಚಾಯತಿಯ ಚುನಾವಣೆಯಲ್ಲಿ ಪರಿಶಿಷ್ಟರು ವಿರೋಧ ಪಕ್ಷದವರಿಗೆ ಮತ ಹಾಕಬಹುದು ಎಂಬ ಗುಮಾನಿಯ ಮೇರೆಗೆ ಪ್ರಬಲ ಜಾತಿಯವರು ಪರಿಶಿಷ್ಟರ ಮೇಲೆ ಆಕ್ರಮಣ ನಡೆಸಿ ಅವರ ಮನೆಗಳನ್ನು ಧ್ವಂಸ ಮಾಡಿ ಸುಟ್ಟರು".*

**6. ಅಪಹರಣ**

ಪರಿಶಿಷ್ಟರ ಮೇಲೆ ಎಸಗಲಾಗುವ ಮೇಲ್ಮಟ್ಟದ ಪಾತಕ ಕೃತ್ಯಗಳಲ್ಲಿ ಪರಿಶಿಷ್ಟರನ್ನು ಅಪಹರಿಸುವುದೂ ಒಂದು. ಅಪಹರಣದ ನಂತರ ಅವರ ಮೇಲೆ ಇತರೆ ರೀತಿಯ ದೌರ್ಜನ್ಯಗಳು ಸಹ ಆಗುತ್ತವೆ. ದೌರ್ಜನ್ಯ ತಡೆ ಕಾಯ್ದೆಯಲ್ಲಿ ಅಪಹರಣದಂತಹ ಪಾತಕ ಕೃತ್ಯವನ್ನು ತಿಳಿಸದೇ ಇರುವುದರಿಂದ ಆರೋಪಿಯ ಮೇಲೆ ಈ ಕಾಯ್ದೆಯಡಿಯಲ್ಲಿ ಪ್ರಕರಣ ದಾಖಲಿಸುವುದು ಮತ್ತು ಸಾಬೀತು ಮಾಡುವುದು ನಿಜವಾಗಿಯೂ ಅಸಾಧ್ಯ. 1992–2000 ಅವಧಿಗೆ 2259 ಪರಿಶಿಷ್ಟರ ಅಪಹರಣದ ಪ್ರಕರಣಗಳು ಆಗಿವೆಯೆಂದು ರಾಷ್ಟ್ರೀಯ ಅಪರಾಧ ದಾಖಲೆಗಳ ಬ್ಯೂರೋ ವರದಿ ಮಾಡಿದೆ. 2006ರಲ್ಲಿ 208 ಅಪಹರಣ ಪ್ರಕರಣಗಳು ಇದ್ದು 2007ರಲ್ಲಿ 332 ಪ್ರಕರಣಗಳು ಆಗಿವೆ ಎಂದು ಅಂಕಿಸಂಖ್ಯೆಗಳು ತಿಳಿಸುತ್ತವೆ.

ಸಾಮಾನ್ಯವಾಗಿ ಪರಿಶಿಷ್ಟರನ್ನು ಅಪಹರಣ ಮಾಡುವ ಪ್ರಕರಣಗಳು ಈ ಕೆಳಕಂಡಂತೆ ಇರುತ್ತವೆ:

a) ಪರಿಶಿಷ್ಟರು ತಮ್ಮ ಹಕ್ಕುಗಳನ್ನು ಪ್ರತಿಪಾದಿಸಿ ಧ್ವನಿ ಎತ್ತಿದಾಗ ಅವರನ್ನು ಅಪಹರಿಸಿ ಕೊಲೆ ಮಾಡಲಾಗುತ್ತದೆ.

b) ಬಲವಂತದ ಕೂಲಿ ಮಾಡಿಸಲು ಪರಿಶಿಷ್ಟರನ್ನು ರಹಸ್ಯವಾಗಿ ಬಂಧನದಲ್ಲಿ ಇಡಲಾಗುತ್ತದೆ.

c) ಮದುವೆ ಆಗುವಂತೆ ಬಲವಂತ ಪಡಿಸಲು ಪರಿಶಿಷ್ಟ ಮಹಿಳೆಯರನ್ನು ಅಪಹರಿಸಲಾಗುತ್ತದೆ.

d) ಪರಿಶಿಷ್ಟರನ್ನು ಅಪಹರಣ ಮಾಡಿ ಅವರ ಮೇಲೆ ತೀವ್ರತರವಾದ ಗಾಯ ಮಾಡಲಾಗುತ್ತದೆ.

e) ದೌರ್ಜನ್ಯದ ಪ್ರಕರಣಗಳಲ್ಲಿ ರಾಜಿಯಾಗಲು ಅಪ್ರಾಪ್ತ ಮಕ್ಕಳನ್ನು ಅಪಹರಿಸಲಾಗುತ್ತದೆ.

ಪ್ರಕರಣಗಳ ಕಿರುಪರಿಚಯ:

*"ದಿನಾಂಕ 23-03-07ರಂದು ಅಮೃತಸರ ಜಿಲ್ಲೆ ಮತ್ತು ತಾಲ್ಲೂಕಿನ ಚೊಗವಾನ ಅಂಚೆ ಚಾತಿವಿಂಡ್‌ನ ನಿವಾಸಿ ಸವಿಂದರ್ ಕೌರ್ ಎಂಬ ಪರಿಶಿಷ್ಟ ಮಹಿಳೆಯನ್ನು ಸಾಹಿಬ್ ಸಿಂಗ್ ಎಂಬಾತ (ಓಬಿಸಿ) ಅಪಹರಿಸಿ ಅಮೃತಸರಕ್ಕೆ ಕೊಂಡೊಯ್ದನು, ಅಲ್ಲಿ ಆಕೆಯ ಮೇಲೆ 19 ದಿನ ಅತ್ಯಾಚಾರ ಮಾಡಿದನೆಂದು ಆರೋಪಿಸಲಾಗಿದೆ. ಆಕೆ ಅಲ್ಲಿಂದ ತಪ್ಪಿಸಿಕೊಂಡಳು. ಆದರೆ, ಆಕೆ ಮನೆಗೆ ಬಂದಾಗ ದುಷ್ಕರ್ಮಿಯು ಆಕೆಯ ಮೇಲೆ ಆಕ್ರಮಣ ಮಾಡಿದನು".*

*"ಬಿಹಾರದ ಪಶ್ಚಿಮ ಚಂಪರನ್‌ನಲ್ಲಿ ಭೂಮಿಯ ವಿವಾದದಲ್ಲಿ ದಲಿತ ಕಾರ್ಯಕರ್ತೆಯನ್ನು ಅಪಹರಿಸಿ ಕೊಲೆ ಮಾಡಲಾಯಿತು".*

*"ಹರಿಯಾಣದ ಪಾಣಿಪತ್ ಜಿಲ್ಲೆಯ ಸಮಾಖ್ಲ ಪಟ್ಟಣದಲ್ಲಿ ಪ್ರಬಲ ಜಾತಿಯ ಜನರು ಪರಿಶಿಷ್ಟನೊಬ್ಬನನ್ನು ಕೊಲೆ ಮಾಡಿ ಆತನ ಮಗಳನ್ನು ಅಪಹರಿಸಿದರು".*

*"ಒರಿಸ್ಸಾದ ಸುಂದರಗಢದಲ್ಲಿ ಮೇಲ್ಜಾತಿಯ ಯುವಕನೊಬ್ಬ ಅಪ್ರಾಪ್ತ ಪರಿಶಿಷ್ಟ ಬಾಲಕಿಯನ್ನು ಅಪಹರಿಸಿ ಆಕೆಯ ಮೇಲೆ ಅತ್ಯಾಚಾರ ಎಸಗಿದನು".*

*"ರಾಜಸ್ಥಾನದ ಟೋಂಕ್‌ನ ಪ್ರಬಲ ಜಾತಿಯ ಜನರು ಪರಿಶಿಷ್ಟ ಮಹಿಳಾ ಪ್ರತಿನಿಧಿಯನ್ನು ಅಪಹರಿಸಿ ಹಲ್ಲೆ ಮಾಡಿದರು".*

ಅಪಹರಣ ಮತ್ತು ಬಲವಂತದ ಮದುವೆಯಿಂದ ಮಹಿಳೆಯನ್ನು ರಕ್ಷಿಸಲು ಜವಾಬ್ದಾರಿ ಹೊತ್ತಿರುವ ಭಾರತ ಮಹಿಳೆಯ ವಿರುದ್ಧ ಎಲ್ಲಾ ರೀತಿಯ ಪಕ್ಷಪಾತಗಳನ್ನು ನಿರ್ಮೂಲನೆ ಮಾಡಲು ರಾಷ್ಟ್ರವು ಸಮ್ಮೇಳನಗಳಲ್ಲಿ ಒಪ್ಪಂದಗಳನ್ನು ಮಾಡಿಕೊಂಡಿದೆ.

**7. ಡಾ. ಬಿ.ಆರ್ ಅಂಬೇಡ್ಕರ್ ಪ್ರತಿಮೆಗೆ ಅಗೌರವ ಅಥವಾ ವಿರೂಪ–** ಡಾ. ಬಿ. ಆರ್. ಅಂಬೇಡ್ಕರ್ ಒಬ್ಬ ಧೀಮಂತ ನಾಯಕ, ಸಂವಿಧಾನದ ರಚಿಸಿದ ಭಾರತ ಗಣರಾಜ್ಯದ ಪಿತಾಮಹ ಮತ್ತು ದುರ್ಬಲರ ಉದ್ಧಾರಕರೂ ಆಗಿದ್ದಾರೆ. ಪ್ರಬಲ ಜಾತಿಯವರು ಬಾಬಾಸಾಹೇಬರ ಪ್ರತಿಮೆಯನ್ನು ವಿರೂಪಗೊಳಿಸಿ, ಹಾಳುಮಾಡಿ, ಒಡೆದು ಹಾಕುವ ಮೂಲಕ ದಲಿತ ಸಮುದಾಯದ ವಿರುದ್ಧ ತಮ್ಮ ದ್ವೇಶ ಮತ್ತು ಆಕ್ರೋಶ ತೋರಿಸುವ ತಂತ್ರವನ್ನು ಆರಿಸಿಕೊಂಡಿದ್ದಾರೆ. ದಲಿತ ಸಮುದಾಯಕ್ಕೆ ಸಮಾನತೆಯನ್ನು ನೀಡದೇ ಇರುವ ಮತ್ತು ಅವರ ಮೇಲೆ ದಬ್ಬಾಳಿಕೆ ನಡೆಸಿ ಅವರನ್ನು ತುಳಿಯುವ ಒಂದು ಸಾಧನ ಇದಾಗಿದೆ. ಅಂಬೇಡ್ಕರ್ ಪ್ರತಿಮೆಗೆ ಚಪ್ಪಲಿಯ ಹಾರ ಹಾಕುವ, ಮಸಿ ಬಳೆಯುವ ಮತ್ತು ಮಲ ಎಸೆಯುವ ಹಲವಾರು ಘಟನೆಗಳು ವರದಿಯಾಗಿವೆ. ಬಾಬಾ ಸಾಹೀಬರ ಪ್ರತಿಮೆಯನ್ನು ಹೊಡೆದು ಹಾಳುಗೆಡಹಿದ ಪ್ರಕರಣಗಳು ಇತ್ತೀಚಿನ ವರ್ಷಗಳಲ್ಲಿ ಹೆಚ್ಚುತ್ತಿವೆ. ಹೀಗೆ ಡಾ. ಬಾಬಾ ಸಾಹೇಬ್ ಅಂಬೇಡ್ಕರ್ ಪ್ರತಿಮೆಯನ್ನು ಅಪಮಾನಿಸಿದ ಇತ್ತೀಚಿನ ನಿದರ್ಶನಗಳು ಈ ಕೆಳಕಂಡಂತೆ ಇವೆ:

*"ದಿನಾಂಕ 14-07-09: ಒಂಗೋಲಿನ ಮದ್ದಿರಲಪಾಡು ಗ್ರಾಮದಲ್ಲಿ ಪರಿಶಿಷ್ಟರ ಕೇರಿಯ ಬಳಿ ನೆಪ್ಪಾಳಿ ಸುಬ್ಬರಾಯುಡು ಟ್ರಸ್ಟ್‌ಗೆ ಸೇರಿದ್ದ 3.5 ಗುಂಟೆ ಖಾಸಗಿ ಭೂಮಿಯಲ್ಲಿ ಪ್ರತಿಷ್ಠಾಪಿಸಿದ್ದ ಬಿ.ಆರ್. ಅಂಬೇಡ್ಕರ್‌ರವರ ಪ್ರತಿಮೆಯನ್ನು ರಹಸ್ಯವಾಗಿ ಅಲ್ಲಿಂದ ತೆಗೆದು ಹಾಕಲಾಯಿತು".*

*"ದಿನಾಂಕ 09-07-09: ಮಹಾರಾಷ್ಟ್ರದ ಕಲ್ಯಾಣದ ವಾಲ್ಧುನಿಯಲ್ಲಿ ಬುದ್ಧ ವಿಹಾರದ ನಿರ್ವಾಹಕನ ಮೇಲೆ ಪಪ್ಪು ಯಾದವ್ ಮತ್ತು ಆತನ ಹೆಂಡತಿ ಶಕುಂತಲ ಹಲ್ಲೆ ನಡೆಸಿ ಬಾಬಾಸಾಹೇಬ್ ಅಂಬೇಡ್ಕರ್ ಭಾವಚಿತ್ರವನ್ನು ಹರಿದು ಹಾಕಿದರೆಂದು ಆರೋಪಿಸಲಾಗಿದೆ".*

*ದಿನಾಂಕ 24-01-09ರಂದು ಬಾರಯೀ ಗ್ರಾಮ, ಕೆರಕತ್ ಅಂಚೆ, ಜಾನ್ಪುರ ಜಿಲ್ಲೆ, ಉತ್ತರಪ್ರದೇಶ ರಾಜ್ಯದಲ್ಲಿ ಪ್ರಬಲ ಜಾತಿಯ ಜನರು ದಲಿತ ಕೇರಿಯಲ್ಲಿ ಮೆರವಣಿಗೆಯಲ್ಲಿ ಬರುವಾಗ ಅಲ್ಲಿದ್ದ ಅಂಬೇಡ್ಕರ್ ಮೂರ್ತಿಯನ್ನು ಒಡೆದು ಹಾಕಿದರು".*

*"ದಿನಾಂಕ 25-01-09ರಂದು ರಾಜಸ್ಥಾನ ರಾಜ್ಯ, ಸವಾಯಿ ಮಧೋಪುರ್, ವಾಜಿಪುರ ಪೋಲೀಸ್ ಠಾಣೆಯ ವ್ಯಾಪ್ತಿಯಲ್ಲಿ ಬರುವ ರಾಯಿಪುರ ಗ್ರಾಮದ ಹೊರವಲಯದಲ್ಲಿ 4.5–ಅಡಿ ಎತ್ತರದ ಅಂಬೇಡ್ಕರ್ ಪ್ರತಿಮೆಯನ್ನು ಗ್ರಾಮಸ್ಥರು ಅಪವಿತ್ರಗೊಳಿಸಿದರು".*

*ದಿನಾಂಕ 22-01-09ರಂದು ಉತ್ತರಪ್ರದೇಶದ ಲಖನೌದಿಂದ 150 ಕಿಲೋಮೀಟರ್ ದೂರದ ಕೋಪ ಗ್ರಾಮದಲ್ಲಿ ಪ್ರಬಲ ಜಾತಿಯ ಜನರು ಅಂಬೇಡ್ಕರ್ ಮೂರ್ತಿಯನ್ನು ಅಪವಿತ್ರಗೊಳಿಸಿದರು".*

*"ದಿನಾಂಕ 12-02-09ರಂದು ಉತ್ತರಪ್ರದೇಶದ ಜಾನ್ಪುರ ಜಿಲ್ಲೆಯಲ್ಲಿ ಗುರುತಿಸಲಾಗದ ಕೆಲವರು ಪರಿಶಿಷ್ಟರ ನಾಯಕ ಭೀಮರಾವ್ ಅಂಬೇಡ್ಕರ್ ಪ್ರತಿಮೆಯನ್ನು ಅಪವಿತ್ರಗೊಳಿಸಿದರು. ಪ್ರತಿಮೆ ಹಾನಿಗೊಳಗಾಗಿತ್ತು. ಜಾನ್ಪುರ ಲಖನೌದಿಂದ 200 ಕಿಲೋಮೀಟರ್ ದೂರದಲ್ಲಿದೆ".*

*"ದಿನಾಂಕ 22-06-09ರಂದು ಛತ್ತೀಸಗಢದ ರಜನಂದಗಾವ್ ಜಿಲ್ಲೆಯ ಗೋಪಾಲಪುರ ಗ್ರಾಮದಲ್ಲಿ ಗುರುತಿಸಲಾಗದ ಕೆಲವರು ಭೀಮರಾವ್ ಅಂಬೇಡ್ಕರ್‌ರವರ ಪ್ರತಿಮೆಯನ್ನು ರಾತ್ರೋರಾತ್ರಿ ಅಪವಿತ್ರಗೊಳಿಸಿದರು".*

*ದಿನಾಂಕ 08-10-2008ರಂದು ಕರ್ನಾಟಕ ರಾಜ್ಯದ ಬೆಂಗಳೂರಿನ ಹೆಚ್‌ಎಎಲ್ ಪೋಲೀಸರು ಬೀಸಲಹಳ್ಳಿಯ ಬಳಿ ಅಂಬೇಡ್ಕರ್ ಪ್ರತಿಮೆಯನ್ನು ಅಪವಿತ್ರಗೊಳಿಸಲಾಗಿದೆ ಎಂದು ದೂರು ದಾಖಲಿಸಿದರು. ಪ್ರತಿಮೆಯನ್ನು ರಸ್ತೆಬದಿಯಲ್ಲಿ ಸ್ಥಾಪಿಸಲಾಗಿತ್ತು ಹಾಗೂ ಒಡೆದು ಹಾಕಲಾದ ಪ್ರತಿಮೆಯ ಚೂರುಗಳು ಕಾಲುರಸ್ತೆಯಲ್ಲಿ ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದವು".*

**8. ಶೈಕ್ಷಣಿಕ ಸಂಸ್ಥೆಯಲ್ಲಿ ಅವಕಾಶ ಬಳಸಿಕೊಳ್ಳುವಾಗ ಪಕ್ಷಪಾತ ಅಥವಾ ಕಿರುಕುಳ ಅಥವಾ ಅವಮಾನ ಅಥವಾ ನಿರಾಕರಣೆ–**

ದುರ್ಬಲರಿಗೆ ಶಿಕ್ಷಣ ದೊರಕಿಸಿಕೊಡಲು ಭಾರತ ಸರ್ಕಾರ ಅನೇಕ ಕಾನೂನುಗಳನ್ನು ಜಾರಿಗೊಳಿಸಿದೆ. ಆದರೆ, ಹಿರಿಯ ಮತ್ತು ಪ್ರೌಢ ಶಾಲೆಗಳಲ್ಲಿ ಉಂಟಾಗುವ ಜಾತಿ ಬೇಧಭಾವ ಮತ್ತು ಹಿಂಸೆ, ಅಷ್ಟೇ ಅಲ್ಲದೆ AIIMS, ದೆಹಲಿಯ/IITಯಂತಹ ಶೈಕ್ಷಣಿಕ ಸಂಸ್ಥೆಗಳಲ್ಲಿಯೂ ಇತರೆ ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ಪರಿಶಿಷ್ಟ ವಿದ್ಯಾರ್ಥಿಗಳ ಮೇಲೆ ಜಾತಿ ಬೇಧಭಾವ, ಕಿರುಕುಳ ಮತ್ತು ಹಿಂಸೆಗಳಾಗಿವೆ. ಜಾತಿಬೇಧಭಾವ ಅನೇಕ ರೂಪದಲ್ಲಿ ಆಗಲು ಸಾಧ್ಯ, ಇವೆಲ್ಲವೂ ಅಪರಾಧವಾಗಿದ್ದು, ಒಪ್ಪಿಕೊಳ್ಳಲು ಸಾಧ್ಯವಿಲ್ಲ. ಜಾತಿ ನಿಂದನೆ ಮತ್ತು ಕಿರುಕುಳ ಮತ್ತು ಅವಮಾನಗಳನ್ನು ಕೆಳಗೆ ತಿಳಿಸಲಾಗಿದೆ:

1. ಪ್ರಬಲ ಜಾತಿಯ ವಿದ್ಯಾರ್ಥಿಗಳು, ಪರಿಶಿಷ್ಟ ಜಾತಿ ಮತ್ತು ವರ್ಗಕ್ಕೆ ಸೇರಿದ ಸಹಪಾಠಿಗಳನ್ನು ಜಾತಿ ಹೆಸರಿನಿಂದ ಕರೆಯುತ್ತಾರೆ.

2. ಪ್ರಬಲ ಜಾತಿಯ ವಿದ್ಯಾರ್ಥಿಗಳು ಪರಿಶಿಷ್ಟ ವಿದ್ಯಾರ್ಥಿಗಳಿಗೆ ಬಾಯಿಮಾತಿನ ನಿಂದನೆ, ಕೆಟ್ಟಪದಗಳ ಅಡ್ಡ–ಹೆಸರು ಕೂಗಿ, ಜಾತಿ ಆಧಾರದಲ್ಲಿ ಮಾತನಾಡುವ ಮೂಲಕ ಪರಿಹಾಸ್ಯ ಮಾಡುತ್ತಾರೆ.
3. ಪರಿಶಿಷ್ಟ ವಿದ್ಯಾರ್ಥಿಗಳಿಗೆ ಜಾತಿ ಬೇಧಭಾವ ತೋರುವ ಶಿಕ್ಷಕರು ಅತಿರೇಕದ ಕಠಿಣ ಶಿಕ್ಷೆ (ಹೊಡೆಯುವ) ನೀಡುತ್ತಾರೆ.
4. ಪರಿಶಿಷ್ಟ ವಿದ್ಯಾರ್ಥಿಗಳ ಮೇಲೆ ಪ್ರಬಲ ಜಾತಿಯ ವಿದ್ಯಾರ್ಥಿಗಳು ಮತ್ತು ಶಿಕ್ಷಕರು ಹಲ್ಲೆ ನಡೆಸುತ್ತಾರೆ.
5. ಪರಿಶಿಷ್ಟ ಮಕ್ಕಳನ್ನು ಹಿಂದಿನ ಬೆಂಚಿನಲ್ಲಿ ಕುಳಿತುಕೊಳ್ಳಲು ಬಲವಂತ ಪಡಿಸುವುದು.
6. ಶಿಕ್ಷಕರು ಪರಿಶಿಷ್ಟ ವಿದ್ಯಾರ್ಥಿಗಳ ಕಡೆಗೆ ಗಮನ ನೀಡದೆ ಇತರೆ ವಿದ್ಯಾರ್ಥಿಗಳಿಗೆ ಹೆಚ್ಚು ಗಮನ ನೀಡುವುದು
7. ಮಧ್ಯಾಹ್ನ ಬಿಸಿಯೂಟ ಕಾರ್ಯಕ್ರಮದಲ್ಲಿ ಮಕ್ಕಳು ಕುಳಿತುಕೊಳ್ಳುವಾಗ ಮತ್ತು ಆಹಾರವನ್ನು ಹಂಚುವಾಗ ಬೇಧಭಾವ
8. ಪರಿಶಿಷ್ಟ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ನೀಡದಿರುವುದು.
9. ಹಾಸ್ಟೆಲುಗಳಲ್ಲಿ ಹೊರಗಿನಿಂದ ಕೋಣೆಯ ಬಾಗಿಲಿಗೆ ಬೀಗ ಹಾಕುವುದು.
10. ಇದರಿಂದ ಶಾಲೆ/ಕಾಲೇಜು ಅಥವಾ ಹಾಸ್ಟೆಲ್ ಬಿಟ್ಟು ಹೋಗುವಂತೆ ಪರೋಕ್ಷವಾಗಿ ಒತ್ತಡ.
11. ಜಾತಿ ನಿಂದನೆ ಅಥವಾ ಗೋಡೆ ಮೇಲೆ ಅಥವಾ ಇತರೆ ರೀತಿಯ ಬರವಣಿಗೆ ಅಪಮಾನ.
12. ಆಟವಾಡುವ ಜಾಗ, ಶೌಚಾಲಯ, ಕ್ಯಾಂಟೀನ್ ಬಳಕೆಗೆ ಜಾತಿಯಾಧಾರದಲ್ಲಿ ನಿರಾಕರಣೆ.
13. ಪರಿಶಿಷ್ಟ ವಿದ್ಯಾರ್ಥಿಗಳನ್ನು ಕೆರಳಿಸಲು ಜಾತಿಯತೆಯ ಭಿತ್ತಿಪತ್ರ, ಕೈಪತ್ರ ಅಥವಾ ವಾರಪತ್ರಿಕೆಗಳನ್ನು ಶೈಕ್ಷಣಿಕ ಸಂಸ್ಥೆಯಲ್ಲಿ ತರುವುದು.
14. ದಲಿತ ಪಂಡಿತರ ಪಾಂಡಿತ್ಯ ಲೇಖನಗಳನ್ನು ಹರಿದು ಬಿಸಾಡುವುದು ಅಥವಾ ಸುಟ್ಟು ಹಾಕುವುದು ಇತ್ಯಾದಿ.,
15. ಪರಿಶಿಷ್ಟ ವಿದ್ಯಾರ್ಥಿಗಳೆಂದು ಬೆದರಿಸುವುದು ಅಥವಾ ದೈಹಿಕವಾಗಿ ಕೆರಳುವಂತೆ ಮಾಡುವುದು ಮತ್ತು
16. ಪರಿಶಿಷ್ಟರು ವಾಸಿಸುವ ವಸತಿ ಪ್ರದೇಶದಲ್ಲಿ ಇರುವ ಶಾಲೆಗಳ ಹೆಸರನ್ನು 'ಹರಿಜನ ಶಾಲೆಗಳು' ಎಂದು ಹೆಸರಿಸುವುದು

ಬಿಹಾರದಲ್ಲಿ ಸಾರ್ವಜನಿಕವಾಗಿ ಸಮಸ್ಯೆಗಳನ್ನು ಆಲಿಸಲಾಯಿತು. ಪ್ರಾಥಮಿಕ ಶಿಕ್ಷಣ ಸೇರಿದಂತೆ ಎಲ್ಲಾ ಮಟ್ಟದ ಶೈಕ್ಷಣಿಕ ಸಂಸ್ಥೆಗಳಲ್ಲಿ ತೋರಲಾಗುವ ಬೇಧಭಾವ ಹೀಗಿವೆ:

ಪ್ರಕರಣಗಳ ಕಿರುಪರಿಚಯ

*"ಜುಲೈ 6, 2006ರಂದು 8 ವರ್ಷದ ಬಾಲಕ ಬಜರಂಗಿ ದಾಸ್ ತನ್ನ ಅನುಭವವನ್ನು ಹೀಗೆ ತಿಳಿಸುತ್ತಾನೆ–ಶಾಲೆಯಲ್ಲಿ ಕುಡಿಯುವ ನೀರಿನ ಲೋಟವನ್ನು ಪರಿಶಿಷ್ಟ ಜಾತಿಯ ಮಗು ಮುಟ್ಟಿದನೆಂದು ಭೀಕರವಾಗಿ ಹೊಡೆದರು, ನಿಂದಿಸಿದರು ಹಾಗೂ ಶಿಕ್ಷಕರ ಶೂಗಳನ್ನು ಸ್ವಚ್ಛ ಮಾಡಿಸಲಾಯಿತು". ಪ್ರಾಥಮಿಕ ಶಾಲೆ ಶಿವ ದೇವಸ್ಥಾನ, ಬಲಿಯಾದೆಹ್, ಜಾಜ, ಜಮುಇ, ಬಿಹಾರ್.*

*"ದಿನಾಂಕ 25, ಫೆಬ್ರವರಿ 2007ರಂದು 8 ವರ್ಷದ ಬಾಲಕ ವಿಕಾಸ್ ಕುಮಾರನನ್ನು ಶೌಚಾಲಯ ಬಳಸಿದನೆಂದು ಶಿಕ್ಷಕರು ಅವನ ಗುದಕ್ಕೆ ಕೋಲಿನಿಂದ ಹೊಡೆದರು, ಆ ಭಾಗದಲ್ಲಿ ಜೋರಾಗಿ ರಕ್ತ ಹರಿಯಲು ಪ್ರಾರಂಭಿಸಿತು, ನಂತರ ಅವನನ್ನು ಶೌಚಾಲಯದೊಳಗೆ ಮೂರು ಗಂಟೆಯವರೆಗೆ ಕೂಡಿದರು". ಪ್ರಾಥಮಿಕ ಶಾಲೆ, ಕೊರಹರ್, ಆನಂದಪುರ ಕ್ಯಾಂಪ್, ಬಿಹ್ತ, ಪಾಟ್ನ.*

*"ದಿನಾಂಕ 5, ಮೇ, 2007ರಂದು 14 ವಯಸ್ಸಿನ ರಂಜೀತ್ ಪಾಸ್ವಾನ್‌ನನ್ನು ಹಿಂದಿನ ಸಾಲಿನಲ್ಲಿ ಬಲವಂತವಾಗಿ ಕುಳಿತುಕೊಳ್ಳುವಂತೆ ಮಾಡಲಾಯಿತು, ಮತ್ತು ಶಾಲೆಯ ಶಿಕ್ಷಕಿ ಮಧುಬಾಲ ದೇವಿ ಅವನನ್ನು 'ಹರಿಜನ' ಮತ್ತು ಇತರೆ ಕೆಟ್ಟ ಪದಗಳಿಂದ ಅವನನ್ನು ನಿಂದಿಸಿದರು". ಹರಿಜನ ಮಾಧ್ಯಮಿಕ ಶಾಲೆ, ಸನ್ಸಾರಪುರ್, ಖಗಾರಿಯ, ಬಿಹಾರ್*

*"ದಿನಾಂಕ 4 ಮಾರ್ಚ್ 2007ರಂದು 12 ವಯಸ್ಸಿನ ಧನಂಜಯ ಕುಮಾರ್ ಶಾಲೆಗೆ ಹೋಗುವಾಗ ಪ್ರಬಲ ಜಾತಿಯ ಮಕ್ಕಳಾದ (ಶಾಲೆಯ ದಲಿತೇತರ ವಿದ್ಯಾರ್ಥಿಗಳು) ಮಂತು, ದಿನೇಶ್, ಬಬ್ಲು ತಮಾಷೆ ಮಾಡಿದರು ಹಾಗೂ ಧನಂಜಯನನ್ನು ಚಮಾರ್ ಎಂದು ಕೂಗಿ ಕಲ್ಲು ಎಸೆದು ಉಗುಳಿದರು". ಉತ್ಕರ್ಷ್ ಮಾಧ್ಯಮಿಕ ಶಾಲೆ, ಹಳದಿ ಚಪ್ರ ನಾಯ್ಕ ತೋಳ, ಮನೇರ್, ಪಾಟ್ನ*

*"2006ನೇ ಸಾಲಿಗೆ AIIMSಗೆ ಸೇರಿದ ಸಾಮಾನ್ಯ ವರ್ಗದ ವಿದ್ಯಾರ್ಥಿಗಳು ಪರಿಶಿಷ್ಟ ವಿದ್ಯಾರ್ಥಿಗಳನ್ನು ಹಲವು ರೀತಿಯ ನೊಂದುಕೊಳ್ಳುವಂತೆ, ನೈತಿಕಬಲ ಕುಗ್ಗಿಸುವಂತೆ ಮಾಡಿ ಅಪಮಾನ ಮಾಡಿದರು. ಈ ಸಂಸ್ಥೆಯಲ್ಲಿ ಪರಿಶಿಷ್ಟ ವಿದ್ಯಾರ್ಥಿಗಳನ್ನು ಕೋಣೆಯಲ್ಲಿ ಕೂಡಿ ಹಾಕಿ ಬಾಸ್ಕೆಟ್ ಬಾಲ್ ಆಡಲು ಬಿಡದೆ ಸಾಕಷ್ಟು ಕಿರುಕುಳ ನೀಡಲಾಯಿತು. ಪರಿಶಿಷ್ಟ ವಿದ್ಯಾರ್ಥಿಗಳನ್ನು ರ್‍ಯಾಗ್ ಮಾಡುವಾಗ ನೆಲದ ಮೇಲೆ ಕೂರಿಸಿ, ದೈಹಿಕ ಹಿಂಸೆ ನೀಡಿದರು. ಪರಿಶಿಷ್ಟ ವಿದ್ಯಾರ್ಥಿಗಳನ್ನು ದಿನಕ್ಕೆ 300 ಬಾರಿ ಕಪಾಲಕ್ಕೆ ಹೊಡೆಯಲಾಯಿತು, ಇದರಿಂದಾಗಿ ಪರಿಶಿಷ್ಟ ವಿದ್ಯಾರ್ಥಿಗಳು ತಮ್ಮ ರೂಮುಗಳನ್ನು ಬದಲಾಯಿಸಬೇಕಾಯಿತು, ಪರೀಕ್ಷೆಯಲ್ಲಿ ಶಿಕ್ಷಕರು ಬೇಧಭಾವ ತೋರುವುದು ಇತ್ಯಾದಿ".*

ರಾಷ್ಟ್ರವು ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಹಕ್ಕುಗಳ ಅಂತರಾಷ್ಟ್ರೀಯ ಒಪ್ಪಂದವನ್ನು ಮಾಡಿಕೊಂಡಿದೆ, ಈ ಮೂಲಕ ಪ್ರತಿ ವ್ಯಕ್ತಿಗೂ ಕಾಯ್ದೆಗಳ ಮೂಲಕ ಶಿಕ್ಷಣದ ಹಕ್ಕು ದೊರೆಯುವಂತೆ ಮಾಡುವುದು ರಾಷ್ಟ್ರದ ಜವಾಬ್ದಾರಿ. ECRI ಮಾರ್ಗದರ್ಶನಗಳೂ ಬೇಧಭಾವದ ಶಿಕ್ಷಣ ಪಡೆಯುವುದನ್ನು ನಿಶೇಧಿಸಲು ಶಾಸನ ಜಾರಿ ಮಾಡುವಂತೆ ಶಿಫಾರಸ್ಸು ಮಾಡುತ್ತದೆ. ಈ ಮಾರ್ಗದರ್ಶನದಲ್ಲಿ ಬೇಧಭಾವವನ್ನು ಸರಿಯಾಗಿ ಅರ್ಥೈಸಲಾಗಿದೆ. ಸಮಾನತೆ ಪ್ರೋತ್ಸಾಹಿಸಲು ಶೈಕ್ಷಣಿಕ ಸಂಸ್ಥೆಯಲ್ಲಿ ಪರಿಶಿಷ್ಟರನ್ನು ಸಿಬ್ಬಂಧಿಯಾಗಿ ಆರಿಸಿಕೊಳ್ಳುವ ಹೊಣೆಗಾರಿಕೆ ಮತ್ತು ಯಾವುದೇ ರೀತಿಯ ಜನಾಂಗೀಯ ಬೇಧಭಾವ ತೋರುವುದು ಶಿಕ್ಷಾರ್ಹ ಎಂದು ಪರಿಗಣಿಸಿ, ಹಾಗೆ ಪಕ್ಷಪಾತ ತೋರುವವರನ್ನು ಸಂಸ್ಥೆಯಿಂದ ಹೊರ ಹಾಕುವಂತೆ ಆಗಬೇಕು.

ಆದ್ದರಿಂದ, ಮೇಲ್ಕಂಡ ಅಪರಾಧಗಳನ್ನು ಕಾಯ್ದೆಯ ವ್ಯಾಪ್ತಿಯಲ್ಲಿ ತಂದು ಈ ಕೆಳಕಂಡ ಬದಲಾವಣೆಗಳನ್ನು ಕಾಯ್ದೆಯಲ್ಲಿ ತರಬೇಕು ಎಂದು ಸಲಹೆ ನೀಡುತ್ತೇವೆ:

- **ಹೊಸ ಸೆಕ್ಷನ್ ಪ್ರಸ್ತಾವನೆ:** ಸಾಮಾಜಿಕ ಮತ್ತು ಆರ್ಥಿಕ ಬಹಿಷ್ಕಾರ ಮತ್ತು ನೈತಿಕ ಬೆದರಿಕೆ, ಸ್ವಇಚ್ಛೆಯಿಂದ ಸರಳ ಮತ್ತು ತೀವ್ರ ಗಾಯ ಮಾಡುವುದು, ಮನೆಮುಟ್ಟುಗಳನ್ನು ಧ್ವಂಸಗೊಳಿಸಿ ಸ್ಥಿರಾಸ್ತಿ ಮತ್ತು ಚರಾಸ್ತಿಗಳನ್ನು ನಾಶಪಡಿಸುವುದು, ಅಪಹರಣ ಮತ್ತು ದೌರ್ಜನ್ಯವನ್ನು ಉತ್ತೇಜಿಸುವ ಅಪರಾಧಗಳಿಗೆ ಹೊಸ ಸೆಕ್ಷನ್ ಕಾಯ್ದೆಯಲ್ಲಿ ಪರಿಚಯಿಸಬೇಕು.
- **ಈಗಿರುವ ಸೆಕ್ಷನ್‌ಗಳಲ್ಲಿ ಹೊಸ ಅಪರಾಧ ಸೇರಿಸಬೇಕು:** ಈಗಿನ ಸೆಕ್ಷನ್‌ಗಳಿಗೆ ತಿದ್ದುಪಡಿ ಮಾಡಿ ಅವುಗಳಲ್ಲಿ ವೇತನ ಅಥವಾ ಒಪ್ಪಂದದ ವೇತನ ನಿರಾಕರಿಸಿದರೆ, ಮತ ಚಲಾಯಿಸುವಾಗ ದೈಹಿಕ ಹಲ್ಲೆ, ಡಾ. ಬಿ.ಆರ್. ಅಂಬೇಡ್ಕರ್‌ರವರ ಪ್ರತಿಮೆಗೆ ಅಗೌರವ ತೋರುವ ಅಪರಾಧಗಳನ್ನು ಸೇರಿಸಬೇಕು.

### 3.4. ಕಾಯ್ದೆಯ ವ್ಯಾಖ್ಯಾನಗಳಿಗೆ (ಅರ್ಥಗಳಿಗೆ) ಮಿತಿ

ಸಂವಿಧಾನದ ನಿಬಂಧನೆ 3 (ಪರಿಶಿಷ್ಟ ಜಾತಿಗಳು) ಆದೇಶ–1950 ಮತ್ತು ಮುಂದಿನ ಆದೇಶಗಳಲ್ಲಿ ಪರಿಶಿಷ್ಟ ಜಾತಿಯನ್ನು "ಪಂಜಾಬಿನ ನಾಲ್ಕು ಜಾತಿ, ಹಿಂದೂ ಧರ್ಮ ಹೊರತು ಪಡಿಸಿ ಬೇರೆ ಧರ್ಮ ಯಾರು ಅನುಸರಿಸುವುದಿಲ್ಲವೋ ಅವರೆಲ್ಲರೂ ಪರಿಶಿಷ್ಟ ಜಾತಿಗೆ ಸೇರಿದವರು" ಎಂದು ತಿಳಿಸಲಾಗಿತ್ತು. ಸಿಖ್ ಮತ್ತು ಬೌದ್ಧ ಧರ್ಮವನ್ನು ಪಾಲಿಸುವ

ಎಲ್ಲಾ ಪರಿಶಿಷ್ಟ ಜಾತಿಯವರನ್ನು 1956 ಮತ್ತು 1990ರಲ್ಲಿ ತಿದ್ದುಪಡಿಯ ಮೂಲಕ ಪರಿಶಿಷ್ಟ ಪಟ್ಟಿಯಲ್ಲಿ ಸೇರಿಸಲಾಯಿತು. ಯಾವ ಪರಿಶಿಷ್ಟ ಜಾತಿಯ ಜನರು ಅಥವಾ ಅವರ ಪೂರ್ವಜರು ಕ್ರಿಶ್ಚಿಯನ್ ಮತ್ತು ಮುಸ್ಲಿಂ ಧರ್ಮಕ್ಕೆ ಪರಿವರ್ತನೆಗೊಂಡಿದ್ದಾರೋ ಅವರೆಲ್ಲರೂ ಪರಿಶಿಷ್ಟ ಜಾತಿಯವರಿಗೆ ದೌರ್ಜನ್ಯ ತಡೆ ಕಾಯ್ದೆಯಲ್ಲಿ ಮತ್ತು ಹಿಂದಿನ ಅಸ್ಪೃಶ್ಯತೆ ಕಾಯ್ದೆಗಳಲ್ಲಿ ದೊರಕುವ ರಕ್ಷಣೆ ಮತ್ತು ಸೌಲಭ್ಯಗಳಿಗೆ ಅರ್ಹರಲ್ಲ.

ಕ್ರಿಶ್ಚಿಯನ್ ಅಥವಾ ಇಸ್ಲಾಂ ಧರ್ಮಗಳಿಗೆ ಸೇರಿದ ಪರಿಶಿಷ್ಟ ಜಾತಿಯವರು ಅಥವಾ ಅವರ ಪೂರ್ವಜರ ಮೇಲೆ ದೌರ್ಜನ್ಯ ಆಗುವುದು ಅವರು ಇಸ್ಲಾಂ ಅಥವಾ ಕ್ರಿಶ್ಚಿಯನ್ನರು ಎಂಬ ಕಾರಣಕ್ಕೆ ಆಗುವುದಿಲ್ಲ, ಬದಲಿಗೆ ಅವರು ನಿರ್ದಿಷ್ಟ ಜಾತಿಗೆ ಸೇರಿದವರು ಎಂಬ ಕಾರಣಕ್ಕಾಗಿ ದೌರ್ಜನ್ಯ ಆಗುತ್ತದೆ. ಇದಕ್ಕೆ ತಿದ್ದುಪಡಿ ಅಗತ್ಯವಾಗಿದೆ. ಕ್ರಿಶ್ಚಿಯನ್ ಮತ್ತು ಮುಸ್ಲಿಂ ಧರ್ಮಕ್ಕೆ ಸೇರಿದ ಪರಿಶಿಷ್ಟ ಜಾತಿಯ ಸದಸ್ಯರು ಈ ಬೇಡಿಕೆಯಿಂದ ಗೊಂದಲಕ್ಕೆ ಒಳಗಾಗುವ ಅಗತ್ಯವಿಲ್ಲ. ಈ ಕುರಿತು ಸಾಕಷ್ಟು ಚರ್ಚೆಗಳು ಆಗುತ್ತಿದ್ದು, ಈ ಚರ್ಚೆ ಸರ್ವೋಚ್ಚ ನ್ಯಾಯಾಲಯದ ಮುಂದೆ ಇದೆ. ಈ ನಿಟ್ಟಿನಲ್ಲಿ ಸರ್ವೋಚ್ಚ ನ್ಯಾಯಾಲಯವೂ ಯಾವುದೇ ನಿರ್ಧಾರವನ್ನು ತೆಗೆದುಕೊಂಡರೂ, ಆ ನಿರ್ಧಾರದ ಹೊರತಾಗಿಯೂ, ಕ್ರಿಶ್ಚಿಯನ್ ಮತ್ತು ಮುಸ್ಲಿಂ ಧರ್ಮಕ್ಕೆ ಸೇರಿರುವ ಪರಿಶಿಷ್ಟ ಜಾತಿಯ ಜನರು, ಜಾತಿಯ ಕಾರಣಕ್ಕೆ ದೌರ್ಜನ್ಯ, ಹಿಂಸೆ ಮತ್ತು ಪಕ್ಷಪಾತಕ್ಕೆ ಒಳಗಾಗುವುದರಿಂದ, ಅವರಿಗಾಗಿ ಈ ಕಾಯ್ದೆಯಲ್ಲಿ ನಿಯಮಿತ ಉದ್ದೇಶವನ್ನು ಇಟ್ಟು ಅವರನ್ನು ಈ ಕಾಯ್ದೆಯ ಪರಿಮಿತಿಯಲ್ಲಿ ತರಬೇಕು.

ಇಷ್ಟೇ ಅಲ್ಲದೆ, ಒಬ್ಬ ವ್ಯಕ್ತಿ ಅಥವಾ ವ್ಯಕ್ತಿಗಳು ಒಂದು ನಿರ್ದಿಷ್ಟ ರಾಜ್ಯದಲ್ಲಿ ಪರಿಶಿಷ್ಟ ಪಟ್ಟಿಯಲ್ಲಿ ಸೇರಿದವರಾಗಿದ್ದು, ಹೊಟ್ಟೆಪಾಡಿನ ಸಲುವಾಗಿ ಮತ್ತೊಂದು ರಾಜ್ಯಕ್ಕೆ ವಲಸೆ ಹೋದಾಗ, ಆ ರಾಜ್ಯದಲ್ಲಿ ಈ ನಿರ್ದಿಷ್ಟ ಜಾತಿಯು ಪರಿಶಿಷ್ಟ ಪಟ್ಟಿಯಲ್ಲಿ ಇಲ್ಲದೇ ಹೋದರೆ, ಅಂತಹ ಜಾತಿಯ ವ್ಯಕ್ತಿ ಅಥವಾ ವ್ಯಕ್ತಿಗಳನ್ನು ಈ ಕಾಯ್ದೆಯ ಅಡಿಯಲ್ಲಿ ಗುರುತಿಸಬೇಕು.

ಆದ್ದರಿಂದ ಕಲಂ 2(1) (c)ಯಲ್ಲಿ ಈ ಕೆಳಕಂಡ ಪದಗಳನ್ನು ಸೇರಿಸಲು ಪ್ರಸ್ತಾವಿಸುತ್ತೇವೆ – "ಪರಿಶಿಷ್ಟ ಜಾತಿಯವರು ಎಂದರೆ, ಈ ಕಾಯ್ದೆಯ ಉದ್ದೇಶಕ್ಕಾಗಿ ಒಳಪಟ್ಟ ಸದಸ್ಯರಷ್ಟೇ ಅಲ್ಲದೆ ಪರಿಶಿಷ್ಟ ಪಟ್ಟಿಯಲ್ಲಿ ಇರುವ ಯಾವುದೇ ಜಾತಿ ಅಥವಾ ಪರಿಶಿಷ್ಟ ಜಾತಿಗೆ ಸೇರಿದ್ದ ಪೂರ್ವಜರು ಧರ್ಮವನ್ನು ಬದಲಾಯಿಸಿದ್ದರೆ, ಮತ್ತು ಅಂತಹ ಸದಸ್ಯರ ಸಂತತಿಯವರು ಕೂಲಿಗಾಗಿ ಬೇರೆ ರಾಜ್ಯಗಳಿಗೆ ವಲಸೆ ಹೋಗಿದ್ದರೆ ಮತ್ತು ಆ ರಾಜ್ಯದಲ್ಲಿ ಈ ಜಾತಿಯು ಪರಿಶಿಷ್ಟ ಪಟ್ಟಿಯಲ್ಲಿ ಸೇರಿಲ್ಲದೇ ಹೋದರೆ ಅಂತಹ ಸದಸ್ಯರು".

### 3.5 ಉದ್ದೇಶಿತ ಕರ್ತವ್ಯ ನಿರ್ಲಕ್ಷತೆ ಅರ್ಥ ಮತ್ತು ಮಿತಿ.

ಬರಿಯ ಸೆಕ್ಷನ್ 4 ಓದಿದರೆ, ಅಧಿಕಾರಿಗಳು ಈ ಕಾಯ್ದೆಯಲ್ಲಿ ನಿರ್ವಹಿಸಬೇಕಿರುವ ಕರ್ತವ್ಯವನ್ನು ನಿರ್ಲಕ್ಷಿಸಿದರೆ ಅಂತಹ ಅಪರಾಧಗಳು ಶಿಕ್ಷಾರ್ಹ ಎಂದು ತಿಳಿಸುತ್ತದೆ. ಕಾಯ್ದೆ ತನ್ನ ವಿವೇಚನೆಯನ್ನು ಬಳಸಿ ಸಾರ್ವಜನಿಕ ಸೇವಕರು ಉದ್ದೇಶವಾಗಿ ನಿರ್ಲಕ್ಷ ತೋರಿದರೆ ಅದು ಶಿಕ್ಷಾರ್ಹ ಎಂಬ ನಿರ್ಣಯವನ್ನು ಇಲ್ಲಿ ತೆಗೆದುಕೊಳ್ಳಬೇಕು.

ಆದರೆ ಈ ಸೆಕ್ಷನ್‌ನಲ್ಲಿರುವ ಮುಖ್ಯ ನ್ಯೂನತೆ "ಉದ್ದೇಶಪೂರಕ ನಿರ್ಲಕ್ಷತೆ"ವನ್ನು ಇಲ್ಲಿ ಸ್ಪಷ್ಟವಾಗಿ ಅರ್ಥೈಸಲಾಗಿಲ್ಲ. ತನಿಖೆಯನ್ನು ಸಮಯಕ್ಕೆ ಸರಿಯಾಗಿ ಮಾಡದಿದ್ದರೆ, ತನಿಖೆ ವರದಿ ಮತ್ತು ಆರೋಪ ಪಟ್ಟಿಯನ್ನು ನಿರ್ದಿಷ್ಟ ಸಮಯಕ್ಕೆ ಸಲ್ಲಿಸದಿದ್ದರೆ, ಪರಿಹಾರ ದೊರಕಿಸಿಕೊಡದಿದ್ದರೆ, ರಕ್ಷಣೆ ನೀಡದಿದ್ದರೆ ಮತ್ತು ನಿರ್ಬಂಧನಾ ಕ್ರಮ ಕೈಗೊಳ್ಳದಿದ್ದರೆ ಅವುಗಳಿಗೆ ಕಲಂ 4ರಲ್ಲಿ ಶಿಕ್ಷೆ ಆಗುತ್ತದೆ ಅಥವಾ ಇಲ್ಲ? ಇದು ನಮ್ಮ ಮುಂದಿರುವ ಪ್ರಶ್ನೆ.

ದೌರ್ಜನ್ಯದಲ್ಲಿ ಬದುಕುಳಿದವರು, ಕಾರ್ಯಕರ್ತರು ಮತ್ತು ಸಂಸ್ಥೆಗಳ ಅನುಭವದಲ್ಲಿ ಪೋಲೀಸರು ಮತ್ತು ಆಡಳಿತ ವ್ಯವಸ್ಥೆ ಪ್ರಕರಣವನ್ನು ದಾಖಲು ಮಾಡುವ ಹಂತದಿಂದ ಪ್ರತಿ ಹಂತದಲ್ಲಿಯೂ ತಮ್ಮ ಕರ್ತವ್ಯ ನಿರ್ಲಕ್ಷತೆಯಿಂದ ಕಾಯ್ದೆಯ ಆಶಯವನ್ನು ಭಂಗಗೊಳಿಸಲು ಪ್ರಯತ್ನಿಸುತ್ತವೆ. ಕೆಲವು ಸಮಸ್ಯೆ ಹೀಗಿವೆ.

#### ಎಫ್.ಐ.ಆರ್ ಮತ್ತು ತನಿಖೆಯ ಹಂತ

1. ಎಫ್.ಐ.ಆರ್ ಸಿದ್ಧಪಡಿಸಲು ತಡ.
2. ಎಫ್.ಐ.ಆರ್ ದಾಖಲಿಸಲು ಪೋಲೀಸರ ನಿರಾಕರಣೆ.
3. ದೂರು ದಾಖಲಿಸುವಾಗ, ದೂರಿನ ವಿವರ ನೀಡದೆ ದೂರುದಾರರ ಮುಂದೆ ಅದನ್ನು ಸರಿಯಾಗಿ ಓದಿ ತಿಳಿಸದೆ ಆರೋಪಿಗಳ ಪರವಾಗಿ ದೂರು ಬರೆದುಕೊಳ್ಳುವುದು.
4. ಸರಿಯಾದ ಸೆಕ್ಷನ್ ಅಡಿಯಲ್ಲಿ ಪ್ರಕರಣ ದಾಖಲಿಸದೇ ಇರುವುದು.
5. ಎಫ್.ಐ.ಆರ್ ವರದಿಯಲ್ಲಿ ಅಗತ್ಯವಿರುವ (ಸತ್ಯಾಂಶ, ಅಂಕಿಗಳು, ಪದಗಳು/ಆರೋಪಿಗಳ/ಬಳಸಿದ ಮಾರಕ ಅಸಗಳ/ಆರೋಪಿಗಳ ಪಟ್ಟಿ, ಅವರ ವಿವರವನ್ನು) ವಿವರ ಸೇರಿಸದಿರುವುದು
6. ಪ್ರಕರಣಕ್ಕೆ FIR ಬದಲಿಗೆ SHD ಯಲ್ಲಿ ದಾಖಲಿಸಿ ದಾರಿ ತಪ್ಪಿಸುವುದು.
7. ದೌರ್ಜನ್ಯ ತಡೆ ಕಾಯ್ದೆಯ ನಿಯಮ 1995ರನ್ವಯ ದೌರ್ಜನ್ಯಕ್ಕೆ ಬಲಿಯಾದವರಿಗೆ FIR ಪ್ರತಿ ನೀಡದೇ ಇರುವುದು.
8. ಸಮಯಕ್ಕೆ ಸರಿಯಾಗಿ ಪ್ರಕರಣ ತನಿಖೆ ಮಾಡದಿರುವುದು.
9. ದೌರ್ಜನ್ಯಕ್ಕೆ ಬಲಿಯಾದವರನ್ನು, ಸಾಕ್ಷಿಗಳನ್ನು ತನಿಖೆಯಲ್ಲಿ ಒಳಪಡಿಸದೇ ಇರುವುದು.
10. ಬಹುತೇಕ ತನಿಖೆಗಳನ್ನು ಸಾಮಾನ್ಯವಾಗಿ ಪ್ರಬಲ ಜಾತಿಯವರ ಕೇರಿಯಲ್ಲಿ ಅಥವಾ ಪೋಲೀಸ್ ಠಾಣೆಯಲ್ಲಿ ಮಾಡುವುದು.
11. ದೌರ್ಜನ್ಯಕ್ಕೆ ಬಲಿಯಾದವರು ಹಾಗೂ ಸಾಕ್ಷಿಗಳು ಹೇಳಿದ ಎಲ್ಲಾ ವಿವರಗಳನ್ನು ಪೋಲೀಸರು ದಾಖಲು ಮಾಡದೇ ಇರುವುದು.
12. ದೌರ್ಜನ್ಯಕ್ಕೆ ಬಲಿಯಾದವರಿಗೆ ತನಿಖೆಯ ಮೊದಲು ಮತ್ತು ನಂತರ ರಕ್ಷಣೆ ನೀಡದೇ ಇರುವುದು.
13. ದೌರ್ಜನ್ಯಕ್ಕೆ ಬಲಿಯಾದವರಿಗೆ ಹಾಗೂ ಸಾಕ್ಷಿಗಳಿಗೆ ತನಿಖಾಧಿಕಾರಿ ಬರುವ ದಿನಾಂಕ ಮತ್ತು ಸಮಯವನ್ನು ತಿಳಿಸದಿರುವುದು.
14. ದೌರ್ಜನ್ಯಕ್ಕೆ ಬಲಿಯಾದವರಿಗೆ ವರದಿ ಮತ್ತು ದಾಖಲೆಗಳನ್ನು (ಮರಣೋತ್ತರ ಪರೀಕ್ಷೆ ಪ್ರಮಾಣ ಪತ್ರ, ಗಾಯದ ಪ್ರಮಾಣ ಪತ್ರ) ವನ್ನು ನೀಡುವಲ್ಲಿ ವಿಳಂಬ.

#### ಆರೋಪ ಪಟ್ಟಿ ತಯಾರಿಸುವ ಹಂತ

1. ಆರೋಪ ಪಟ್ಟಿ ಸಲ್ಲಿಸುವಲ್ಲಿ ತಡ
2. ಹಿರಿಯ ಅಧಿಕಾರಿಗಳಿಂದ ಅನುಮೋದನೆ ಪಡೆಯುವಲ್ಲಿ ವಿಳಂಬ
3. ತೆಗೆದುಕೊಂಡ ಹೇಳಿಕೆಯನ್ನು ಆರೋಪ ಪಟ್ಟಿಯಲ್ಲಿ ಬರೆಯುವಾಗ ಮತ್ತೊಂದು ರೀತಿಯಲ್ಲಿ ಬರೆಯುವುದು.
4. ದೌರ್ಜನ್ಯ ತಡೆ ಕಾಯ್ದೆಯ ಸೆಕ್ಷನ್‌ಗಳನ್ನು ಆರೋಪ ಪಟ್ಟಿಯಿಂದ ಅಳಿಸಿ ಹಾಕುವುದು
5. ಆರೋಪ ಪಟ್ಟಿಯನ್ನು ಅಂತಿಮಗೊಳಿಸಲು ಕಾನೂನು ಅಭಿಪ್ರಾಯಕ್ಕಾಗಿ ಕಾಯುವುದು.
6. ಆರೋಪ ಪಟ್ಟಿ ಸಲ್ಲಿಕೆಗೆ ನ್ಯಾಯಾಂಗದ ಮೇಲ್ವಿಚಾರಣೆ ಕೊರತೆ
7. ಆರೋಪ ಪಟ್ಟಿ ತಯಾರಿಸುವಾಗ, ಆರೋಪವನ್ನು ಪುಷ್ಟೀಕರಿಸುವ ಸಾಕ್ಷಿಗಳಿಗೆ ವ್ಯತಿರಿಕ್ತವಾಗಿ ತಯಾರಿಸುವುದು (ಆರೋಪ ಪಟ್ಟಿ ಮತ್ತು ಎಫ್.ಐ.ಆರ್‌ಗಳಲ್ಲಿ ವ್ಯತ್ಯಾಸ)
8. ಆರೋಪ ಪಟ್ಟಿ ಹೊರಗಿನವರ ಸಹಾಯದಿಂದ ತಯಾರಿಸುವುದು.

**ಪ್ರಯಾಣ, ದಿನಭತ್ಯೆ, ಪರಿಹಾರದ ಹಂತ**

1. ತನಿಖೆ, ವಿಚಾರಣೆ ಸಂದರ್ಭದಲ್ಲಿ ದೌರ್ಜನ್ಯಕ್ಕೆ ಬಲಿಯಾದವರಿಗೆ ಪ್ರಯಾಣ, ದಿನ ಭತ್ಯೆ ನೀಡದಿರುವುದು.
2. ದೌರ್ಜನ್ಯಕ್ಕೊಳಗಾದವರಿಗೆ ವೈದ್ಯಕೀಯ ವೆಚ್ಚಗಳನ್ನು ನೀಡದಿರುವುದು.
3. 1995ರ ನಿಯಮದನ್ವಯ ದೌರ್ಜನ್ಯಕ್ಕೆ ಒಳಗಾದವರಿಗೆ ತಕ್ಷಣದ ಪರಿಹಾರವನ್ನು ನೀಡದಿರುವುದು ಈಗಿನ ಪರಿಪಾಠ.

ಮೇಲಿನ ಅನುಭವಗಳನ್ನು ಪರಿಗಣಿಸಿ ಕಾಯ್ದೆ ಮತ್ತು ನಿಯಮಗಳ ಉತ್ತಮ ಅನುಷ್ಠಾನಕ್ಕಾಗಿ ಗೃಹ ಮತ್ತು ಸಾಮಾಜಿಕ ನ್ಯಾಯ ಸಬಲೀಕರಣ ಸಚಿವಾಲಯವು 2002ರಿಂದ 2006 ಅವಧಿಯಲ್ಲಿ ಹಲವಾರು ಸಲಹೆಗಳನ್ನು ನೀಡಿತು.

*"ಪ್ರಥಮ ಮಾಹಿತಿ ವರದಿಯನ್ನು ದಾಖಲಿಸಿಕೊಳ್ಳದ ಪೋಲೀಸ್ ಅಧಿಕಾರಿಯ ಮೇಲೆ ಸೂಕ್ತ ಇಲಾಖಾ ಕ್ರಮವನ್ನು ಕೈಗೊಳ್ಳುವುದು. ನಂತರ, ಪೋಲೀಸ್ ಅಧಿಕಾರಿ ಪರಿಶಿಷ್ಟರಲ್ಲದಿದ್ದರೆ ಕಾಯ್ದೆಯ ಸೆಕ್ಷನ್ 4ರನ್ವಯ ಸೂಕ್ತ ಕ್ರಮ ತೆಗೆದುಕೊಳ್ಳತಕ್ಕದ್ದು [ಸಂಖ್ಯೆ 11011/8/2006-PCR (ಡೆಸ್ಕ್) – 14/03/06 MSJE; ಸಂಖ್ಯೆ. 24024/9/2004-ಪ.ಜಾತಿ/ವರ್ಗದ ಕೋಶ-03/02/05, ಗೃಹ ಸಚಿವಾಲಯ]*

ಗೃಹ ಸಚಿವಾಲಯ ಮತ್ತು ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಸಚಿವಾಲಯದ ಸಲಹೆಗಳನ್ನು ಧಿಕ್ಕರಿಸಿ ಕಾಯ್ದೆಯ ಆಶಯವನ್ನು ಭಂಗಪಡಿಸಲು ಹಲವಾರು ವಿಧಾನಗಳನ್ನು ಅಳವಡಿಸಿಕೊಳ್ಳುವ ಅಧಿಕಾರಿಗಳ ವಿರುದ್ಧ ಕ್ರಮಗಳನ್ನು ಜರುಗಿಸತಕ್ಕದ್ದು.

ರಾಷ್ಟ್ರವು ನಾಗರಿಕ ಮತ್ತು ರಾಜಕೀಯ ಹಕ್ಕುಗಳ ಅಂತರಾಷ್ಟ್ರೀಯ ಒಪ್ಪಂದ ಮಾಡಿಕೊಂಡಿರುವುದರಿಂದ, ಕಾನೂನಿನ ದೃಷ್ಟಿಯಲ್ಲಿ ಎಲ್ಲರೂ ಸಮಾನರು ಎನ್ನುವಂತಹ ಶಾಸನಗಳನ್ನು ಜಾರಿಗೆ ತರುವುದು ರಾಷ್ಟ್ರದ ಕರ್ತವ್ಯವಾಗಿದೆ. ECRI ಮಾರ್ಗದರ್ಶನಗಳು ಕೂಡ ಪೋಲೀಸರ ಮತ್ತು ಕಾನೂನು ಜಾರಿಗೊಳಿಸುವ ಇತರೆ ಅಧಿಕಾರಿಗಳ ಪಕ್ಷಪಾತಿ ಚಟುವಟಿಕೆಗಳನ್ನು ನಿಶೇಧಿಸುವಂತಹ ಶಾಸನವನ್ನು ಅಳವಡಿಸಿಕೊಳ್ಳಬೇಕು ಎಂದು ಶಿಫಾರಸ್ಸು ಮಾಡುತ್ತದೆ. ಹೀಗೆ ಶಿಫಾರಸ್ಸು ಮಾಡುವ ಶಾಸನ ಪೋಲೀಸ್ ಅಧಿಕಾರಿಗಳು ಜನಾಂಗೀಯ ಅಪರಾಧ ಪ್ರಕರಣಗಳಲ್ಲಿ ಸಮರ್ಪಕವಾಗಿ ತನಿಖೆ ನಡೆಸಿ, ಜನಾಂಗೀಯ ದ್ವೇಶವನ್ನು ಹಿನ್ನೆಲಯಲ್ಲಿಟ್ಟು ದೌರ್ಜನ್ಯ ಎಸಗುವ ದುಷ್ಕರ್ಮಿಗಳಿಗೆ ಸರಿಯಾಗಿ ಶಿಕ್ಷೆಯಾಗುವಂತೆ ನೋಡಿಕೊಳ್ಳಬೇಕು.

ಆದ್ದರಿಂದ ಕಾಯ್ದೆಯ ಸೆಕ್ಷನ್ 4ಕ್ಕೆ ಕೆಳಕಂಡ ತಿದ್ದುಪಡಿಗಳನ್ನು ನಾವು ಪ್ರಸ್ತಾಪಿಸುತ್ತೇವೆ:

*"ಯಾವುದೇ ಸಾರ್ವಜನಿಕ ಸಿಬ್ಬಂಧಿ, ಆದರೆ, ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಗಳಿಗೆ ಸೇರದೇ ಇರುವ ಸಿಬ್ಬಂಧಿ, ಈ ಕಾಯ್ದೆಯನ್ವಯ ಅಗತ್ಯವಾಗಿ ಪಾಲಿಸಬೇಕಾದ, ತನ್ನ ಕರ್ತವ್ಯದಲ್ಲಿ ಉದ್ದೇಶಪೂರಕವಾಗಿ ನಿರ್ಲಕ್ಷ ತೋರಿದರೆ, ಕೆಳಕಂಡವುಗಳನ್ನೂ ಒಳಗೊಂಡಂತೆ ಮತ್ತು ಇನ್ನಿತರ ರೀತಿಯ ನಿರ್ಲಕ್ಷ ತೋರಿದರೆ:*

1. *ಎಫ್.ಐ.ಆರ್ ದಾಖಲಿಸದೇ ಇದ್ದರೆ ಅಥವಾ ಸೂಕ್ತ ಸೆಕ್ಷನ್ ಅಡಿಯಲ್ಲಿ ದಾಖಲಿಸದೇ ಇದ್ದರೆ,*
2. *ನಿಗದಿತ ಸಮಯದೊಳಗೆ ತನಿಖೆ ಮಾಡಿ ಆರೋಪಪಟ್ಟಿ ಸಲ್ಲಿಸದೇ ಇದ್ದರೆ,*
3. *ಪ್ರತ್ಯಾರೋಪದ ಎಫ್.ಐ.ಆರ್ ದಾಖಲಿಸಿದರೆ.*
4. *ಪರಿಹಾರ, ನಷ್ಟಪರಿಹಾರ ಮತ್ತು ಪುನರ್ವಸತಿ ಕಲ್ಪಿಸದಿದ್ದರೆ ಮತ್ತು*
5. *ಈ ಕಾಯ್ದೆಯ ಮತ್ತು ನಿಯಮದಲ್ಲಿ ತಿಳಿಸಿರುವ ರಕ್ಷಣೆ ಮತ್ತು ನಿರ್ಬಂಧಿಸುವ ನಿಬಂಧನೆಗಳನ್ನು ಅನುಷ್ಠಾನ ಮಾಡದೇ ಇದ್ದರೆ, ಆ ಅಧಿಕಾರಿಗೆ ಎರಡು ವರ್ಷಗಳಿಗೂ ಕಡಿಮೆ ಇಲ್ಲದ ಜೈಲು ಶಿಕ್ಷೆ ವಿಧಿಸತಕ್ಕದ್ದು*

*ಮತ್ತು ಹೊಸ ಸಬ್‌ಸೆಕ್ಷನ್ 4(1) "ಈ ಕಾಯ್ದೆಯಲ್ಲಿ ತಿಳಿಸಿದಂತೆ ಅಪರಾಧಕ್ಕೆ ದುಷ್ಪ್ರೇರಣೆ ಸಹ ಅಷ್ಟೇ ಶಿಕ್ಷಾರ್ಹ".*

### 3.6. ತ್ವರಿತ ವಿಚಾರಣೆಗೆ ಕ್ರಮ

ಕಾಯ್ದೆಯು ಕಲಂ 14ರನ್ವಯ ವಿಶೇಷ ನ್ಯಾಯಾಲಯಗಳನ್ನು ಸ್ಥಾಪಿಸಲು ಮತ್ತು ಜೀವನದ ಹಕ್ಕು (ಸಂವಿಧಾನದ ಅನುಚ್ಛೇದ 21) ಪಡೆಯಲು ತ್ವರಿತ ವಿಚಾರಣೆಗೆ ಅವಕಾಶ ಮಾಡಿಕೊಡುತ್ತದೆ. ಜೊತೆಗೆ, ಅಪರಾಧಗಳಿಗೆ ವಿಚಾರಣೆ ನಡೆಸಲು ವಿಶೇಷ ಪಬ್ಲಿಕ್ ಪ್ರಾಸಿಕ್ಯೂಟರುಗಳ ನೇಮಕವನ್ನು ಸೆಕ್ಷನ್ 15ರ ಅಡಿಯಲ್ಲಿ ಅವಕಾಶ ಮಾಡುತ್ತದೆ.

ಕ್ರಿಮಿನಲ್ ಕೋಡ್‌ನಲ್ಲಿ ಬರುವ ಸಾಮಾನ್ಯ ಕ್ರಿಮಿನಲ್ ನ್ಯಾಯಾಲಯದ ಬದಲಿಗೆ ವಿಶೇಷ ನ್ಯಾಯಾಲಯಗಳನ್ನು ಸ್ಥಾಪಿಸಿರುವುದು ಸ್ಪಷ್ಟವಾಗುತ್ತದೆ. ಸೆಕ್ಷನ್ 14 ಉಪಬಂಧ 2(d)ರ ಜೊತೆ ಓದಿಕೊಂಡರೆ ವಿಶೇಷ ನ್ಯಾಯಾಲಯದಲ್ಲಿ ಸೆಷನ್ ನ್ಯಾಯಾಧೀಶರುಗಳು ಇರುತ್ತಾರೆ ಎನ್ನುವುದೂ ಸ್ಪಷ್ಟವಾಗಿ ತಿಳಿಯುತ್ತದೆ. ಉಪಬಂಧ 2(d) ಸೆಕ್ಷನ್ 14ರಲ್ಲಿ ನಿಯೋಜಿಸಿದ ವಿಶೇಷ ನ್ಯಾಯಾಲಯಗಳನ್ನು ಸೆಷನ್ ನ್ಯಾಯಾಲಯಗಳೆಂದು ತಿಳಿದುಕೊಳ್ಳಬೇಕು ಎಂದು ತಿಳಿಸುತ್ತದೆ. ಎಲ್ಲಾ ವಿಶೇಷ ನ್ಯಾಯಾಲಯಗಳು ಸೆಷನ್ ನ್ಯಾಯಾಲಯ ಆಗಿರಬೇಕಿಲ್ಲ, ಆದರೆ ಎಲ್ಲಾ ಸೆಷನ್ ನ್ಯಾಯಾಲಯಗಳು ಸಹ ರಾಜ್ಯ ಸರ್ಕಾರದ ಆದೇಶದ ಮೇರೆಗೆ ವಿಶೇಷ ನ್ಯಾಯಾಲಯಗಳು ಆಗುತ್ತವೆ. ವಿಶೇಷ ನ್ಯಾಯಾಲಯಗಳನ್ನು ತ್ವರಿತ ವಿಚಾರಣೆಯ ಸಲುವಾಗಿಯೇ ಸ್ಥಾಪಿಸಲಾಗಿದೆ ಎಂದು ಸೆಕ್ಷನ್ 14ರಲ್ಲಿ ಸ್ಪಷ್ಟವಾಗಿ ತಿಳಿಸಲಾಗಿದೆ. ನಂತರ ಸೆಷನ್ ನ್ಯಾಯಾಲಯಗಳಿಗೆ ದೊರೆಯದ ಹೆಚ್ಚಿನ ಅಧಿಕಾರಗಳನ್ನು ವಿಶೇಷ ನ್ಯಾಯಾಲಯಗಳಿಗೆ ನೀಡಲಾಗಿದೆ.

ಆದರೆ ಸೆಕ್ಷನ್ 14 ಮತ್ತು 15ರ ಅನುಷ್ಠಾನ ಹೀಗಿದೆ:

a) **ವಿಶೇಷ ನ್ಯಾಯಾಲಯಗಳಿಲ್ಲ**– ದೇಶಾದ್ಯಂತ ಇರುವ 612 ಜಿಲ್ಲೆಗಳಲ್ಲಿ 133 ಜಿಲ್ಲೆ/ವಿಭಾಗಗಳಲ್ಲಿ ವಿಶೇಷ ನ್ಯಾಯಾಲಯ ಸ್ಥಾಪಿಸಿಲ್ಲ.

b) **ನ್ಯಾಯಲಯಗಳಿಗೆ ಹೆಚ್ಚಿನ ಹೊರೆ**– ವಿಶೇಷ ನ್ಯಾಯಾಲಯ ಎಂದು ಈಗ ಘೋಷಿಸಿರುವ ನ್ಯಾಯಾಲಯಗಳಲ್ಲಿ ಪ.ಜಾತಿ/ಪಂಗಡಗಳಿಗೆ ಸಂಬಂಧಪಡದ ಬೇರೆ ಪ್ರಕರಣಗಳು ಹೆಚ್ಚಾಗಿದ್ದು, ಒಂದು ದೊಡ್ಡ ಹೊರೆಯಾಗಿದೆ; ಆದ್ದರಿಂದ ಈ ಕಾಯ್ದೆಯಲ್ಲಿ ಬರುವ ಪ್ರಕರಣಗಳಿಗೆ ಹೆಚ್ಚಿನ ಆದ್ಯತೆ ನೀಡಲಾಗುತ್ತಿಲ್ಲ.

c) **ಅಧಿಕಾರದ ಮೊಟಕು:** – ಕ್ರಿಮಿನಲ್ ಕೋಡ್ ಕಾಯ್ದೆಯಲ್ಲಿ ಸೆಕ್ಷನ್ 193ರನ್ವಯ, ನ್ಯಾಯಾಲಯಗಳಿಗೆ ಒಂದು ಅಪರಾಧವನ್ನು ಗ್ರಹಿಸಲು ಸಾಧ್ಯವಿದ್ದರೂ ನೇರವಾಗಿ ವಿಚಾರಣೆ ಮಾಡಲು ಅಧಿಕಾರ ಇಲ್ಲ. ಮಾಜಿಸ್ಟ್ರೇಟ್ ನ್ಯಾಯಾಧೀಶರೊಬ್ಬರು ಪ್ರಕರಣವನ್ನು ನ್ಯಾಯಾಲಯಕ್ಕೆ ವಹಿಸಿಕೊಡಬೇಕು, ಆಗ ಮಾತ್ರ ನ್ಯಾಯಾಲಯ ವಿಚಾರಣೆ ಮಾಡಲು ಸಾಧ್ಯ ಈ ಹಿನ್ನೆಲೆಯಲ್ಲಿ ದೌರ್ಜನ್ಯದ ಪ್ರಕರಣ ವಿಚಾರಣೆಗಾಗಿ ವಿಶೇಷ ನ್ಯಾಯಾಲಯಕ್ಕೆ ಬರುವಷ್ಟರಲ್ಲಿ ಗಣನೀಯ ಪ್ರಮಾಣ ವಿಳಂಬ ಆಗಿರುತ್ತದೆ. ಇದರಿಂದ ತ್ವರಿತ ವಿಚಾರಣೆಯ ಉದ್ದೇಶ ಇಲ್ಲಿ ನಿರರ್ಥಕವಾಗುತ್ತದೆ ಎಂದು ಅರ್ಥ ಮಾಡಿಕೊಳ್ಳಬೇಕು.

d) **ದೈನಂದಿನ ವಿಚಾರಣೆ**– ವಿಶೇಷ ನ್ಯಾಯಾಲಯಗಳಲ್ಲಿ ಪ್ರಕರಣಗಳ ವಿಚಾರಣೆ ಆ ದಿನವೇ ನಡೆಯುವುದಿಲ್ಲ.

e) **ಜಂಟಿ ಪ್ರಕರಣಗಳ ವಿಚಾರಣೆ**–ದೌರ್ಜನ್ಯ ಪ್ರಕರಣಗಳಿಗೆ ಪ್ರತ್ಯಾರೋಪ ಪ್ರಕರಣಗಳಿದ್ದರೆ, ಅದರ ವಿಚಾರಣೆ ಬೇರೆ ಬೇರೆ ನ್ಯಾಯಾಲಯಗಳಲ್ಲಿ ನಡೆಸಲಾಗುತ್ತದೆ. ವಕೀಲರು ಈ ವಿಷಯವನ್ನು ನ್ಯಾಯಾಲಯಗಳಿಗೆ ತಿಳಿಸಿ ವಿಚಾರಣೆಯನ್ನು ಮುಂದೂಡುತ್ತಾರೆ. ನ್ಯಾಯಾಲಯಗಳು ಸಹ ಕೆಲವು ಬಾರಿ ಮತ್ತೊಂದು ನ್ಯಾಯಾಲಯದ ಆದೇಶಕ್ಕಾಗಿ ಕಾಯುತ್ತದೆ. ಇದರಿಂದ ವಿಚಾರಣೆಯಲ್ಲಿ ವಿಳಂಬ ಉಂಟಾಗುತ್ತದೆ. ದೌರ್ಜನ್ಯ ಪ್ರಕರಣಗಳ ಹಾಗೂ ಪ್ರತ್ಯಾರೋಪ ಪ್ರಕರಣಗಳ ಸತ್ಯಾಂಶಗಳನ್ನು

ತಿಳಿದುಕೊಳ್ಳಲು ಒಂದೇ ನ್ಯಾಯಾಲಯದಲ್ಲಿ ಎರಡೂ ಪ್ರಕರಣಗಳ ವಿಚಾರಣೆ ನಡೆಸುವುದು ಬಹಳ ಮುಖ್ಯ.

**ವಿಶೇಷ ಪಬ್ಲಿಕ್ ಪ್ರಾಸಿಕ್ಯೂಟರ್:** ಕಾಯ್ದೆಯ ಸೆಕ್ಷನ್ 15ರನ್ವಯ ಅವಕಾಶ ಮಾಡಿರುವ ವಿಶೇಷ ಪಬ್ಲಿಕ್ ಪ್ರಾಸಿಕ್ಯೂಟರ್, ಕೇವಲ ಸಾರ್ವಜನಿಕ ಅಧಿಕಾರಿಯಲ್ಲ, ಬದಲಾಗಿ ಕ್ರಿಮಿನಲ್ ನ್ಯಾಯವನ್ನು ಎತ್ತಿ ಹಿಡಿಯುವ ದಕ್ಷ ಮತ್ತು ಪ್ರಾಮಾಣಿಕ ಅಧಿಕಾರಿ, ಇವರಿಗೆ ಮಹತ್ವದ ಸ್ಥಾನವಿದೆ. ಈ ವಿಶೇಷ ಪಬ್ಲಿಕ್ ಪ್ರಾಸಿಕ್ಯೂಟರಿಗೆ ಹೆಚ್ಚಿನ ದಕ್ಷತೆ, ಕ್ರಿಮಿನಲ್ ಕಾನೂನು ಮತ್ತು ಕ್ರಿಮಿನಲ್ ಕೋಡ್ ಮೇಲೆ ಹಿಡಿತವಿರಬೇಕು; ಅವರಿಗೆ ಪರಿಶಿಷ್ಟರ ಕುರಿತು ಸೂಕ್ಷ್ಮತೆ ಇರಬೇಕು.

ಆದರೆ, ದೌರ್ಜನ್ಯ ಪ್ರಕರಣಗಳನ್ನು ವಿಶೇಷ ಪಬ್ಲಿಕ್ ಪ್ರಾಸಿಕ್ಯೂಟರ್‌ಗಳು ಪ್ರಕರಣಗಳನ್ನು ತ್ವರಿತವಾಗಿ ಮುಂದುವರಿಸುವುದಿಲ್ಲ. "ಕಾನೂನು ವ್ಯವಸ್ಥೆಯ ಶೇ. 82% ವಿವಿಧ ಅಧಿಕಾರಿಗಳು ಹಾಗೂ ಕಾನೂನು ರೂಪಿಸಿ ಅಭಿಪ್ರಾಯ ಸೃಷ್ಟಿಸುವ ಶೇ.88% ಅಧಿಕಾರಿಗಳ ಅಭಿಪ್ರಾಯ ಹೀಗಿವೆ: "ದೌರ್ಜನ್ಯಕ್ಕೆ ಒಳಗಾದವರಿಗೆ ಅವರ ಇಷ್ಟಾನುಸಾರ, ಸರ್ಕಾರಿ ವೆಚ್ಚದಲ್ಲಿ ಹಿರಿಯ ವಕೀಲರ ಸೇವೆ ಅಥವಾ ಸೇವೆ ನೀಡಲು ಪ್ರಯತ್ನ ಈ ತನಕ ಮಾಡಿಲ್ಲ. ಶೇ. 89%ರಷ್ಟು ದೌರ್ಜನ್ಯ ಎಸಗಿದ ಅಪರಾಧಿಗಳ ಆಸ್ತಿಯನ್ನು ನ್ಯಾಯಾಲಯಕ್ಕೆ ದಸ್ತಗಿರಿ ಮಾಡಲಿಲ್ಲ ಅಥವಾ ಪ್ರಯತ್ನವನ್ನೂ ಮಾಡಿಲ್ಲ". ಈ ಸತ್ಯಾಂಶ ದೌರ್ಜನ್ಯ ಪ್ರಕರಣ ನಿರ್ವಹಿಸುವ ಅಧಿಕಾರಿಗಳ ನಕಾರಾತ್ಮಕ ಧೋರಣೆ ತಿಳಿಸುತ್ತದೆ.

ದೌರ್ಜನ್ಯಕ್ಕೆ ಬಲಿಯಾದವರು ಮತ್ತು ಸಂಸ್ಥೆಗಳ ಅನುಭವದಂತೆ ಕಾಯ್ದೆಯ ಸೆಕ್ಷನ್ 15ರ ಆಶಯವನ್ನು ನಿಜ ಮಾಡುವಲ್ಲಿ ಕೆಳಕಂಡ ನ್ಯೂನತೆಗಳಿವೆ:

a) **ಪ್ರಮುಖ ಸಾಕ್ಷಿಗಳು**– ವಿಚಾರಣೆಯಲ್ಲಿ ಪ್ರಾಸಿಕ್ಯೂಟರುಗಳು ಕೆಲವು ಸಾಕ್ಷಿಗಳನ್ನು ಕರೆಯುವುದಿಲ್ಲ.

b) **ದೌರ್ಜನ್ಯಕ್ಕೆ ಒಳಗಾದವರು ಮತ್ತು ಸಾಕ್ಷಿಗಳಿಗೆ ಮಾಹಿತಿ**–ಪಬ್ಲಿಕ್ ಪ್ರಾಸಿಕ್ಯೂಟರುಗಳು ದೌರ್ಜನ್ಯಕ್ಕೆ ಬಲಿಯಾದವರಿಗೆ ಹಾಗೂ ಸಾಕ್ಷಿಗಳಿಗೆ ಪ್ರಕರಣದ ಸ್ಥಿತಿಗತಿಯ ಕುರಿತು ಮಾಹಿತಿಯನ್ನೇ ನೀಡುವುದಿಲ್ಲ.

c) **ಪಬ್ಲಿಕ್ ಪ್ರಾಸಿಕ್ಯೂಟರುಗಳ ಸಮಯ**–ದೌರ್ಜನ್ಯಕ್ಕೆ ಬಲಿಯಾದ ವ್ಯಕ್ತಿಗಳಿಗೆ ಪಬ್ಲಿಕ್ ಪ್ರಾಸಿಕ್ಯೂಟರುಗಳು ಸಮಯ ನೀಡುವುದಿಲ್ಲ.

d) **ಮಾಹಿತಿ ಕೊರತೆ**– ಪ್ರಕರಣದ ವಿಚಾರಣೆ/ದಿನಾಂಕದ ಬಗ್ಗೆ ದೌರ್ಜನ್ಯಕ್ಕೊಳಗಾದವರಿಗೆ/ಸಾಕ್ಷಿಗಳಿಗೆ ಮಾಹಿತಿ ಇರುವುದಿಲ್ಲ.

e) **ದೌರ್ಜನ್ಯ ತಡೆ ಕಾಯ್ದೆಯ ಪ್ರಕರಣ ನಿಭಾಯಿಸಲು ಕರ್ತವ್ಯ ಭಾವನೆ ಮತ್ತು ದಕ್ಷತೆ ಕೊರತೆ**– ಈ ಕಾಯ್ದೆಯನ್ವಯ ಪ್ರಕರಣ ನಿಭಾಯಿಸಲು ವಿಶೇಷ ಪಬ್ಲಿಕ್ ಪ್ರಾಸಿಕ್ಯೂಟರುಗಳಿಗೆ ದಕ್ಷತೆ ಇಲ್ಲ.

f) **ಪರಿಶಿಷ್ಟ ವಕೀಲರ ಕೊರತೆ**– ಪರಿಶಿಷ್ಟರ ಹಕ್ಕುಗಳ ಕುರಿತು ಕರ್ತವ್ಯ ಸೂಕ್ಷ್ಮತೆ ಇರುವ ಪರಿಶಿಷ್ಟ ವಕೀಲರುಗಳು ವಿಶೇಷ ನ್ಯಾಯಾಲಯಗಳಲ್ಲಿ ಇಲ್ಲ.

g) **ಪ್ರಕರಣಗಳ ಹೊರೆ**– ಪಬ್ಲಿಕ್ ಪ್ರಾಸಿಕ್ಯೂಟರುಗಳಿಗೆ ಇತರೆ ಪ್ರಕರಣಗಳ ಹೊರೆ ಹೆಚ್ಚಾಗಿದ್ದು, ದೌರ್ಜನ್ಯ ತಡೆ ಕಾಯ್ದೆಯಲ್ಲಿ ಬರುವ ಪ್ರಕರಣಗಳಿಗೆ ಆದ್ಯತೆ ನೀಡಲು ಆಗುತ್ತಿಲ್ಲ.

h) **ಪಬ್ಲಿಕ್ ಪ್ರಾಸಿಕ್ಯೂಟರುಗಳಿಗೆ ಸಹಾಯಕರು**– ವಿಚಾರಣೆಯಲ್ಲಿ ಅನಗತ್ಯ ವಿಳಂಬ ತಡೆಯಲು ವಿಚಾರಣೆ ಪ್ರಾರಂಭವಾಗುವ ಮೊದಲು ವಿಶೇಷ ಪಬ್ಲಿಕ್ ಪ್ರಾಸಿಕ್ಯೂಟರುಗಳಿಗೆ ಸಹಾಯ ಒದಗಿಸಲು ಸಹಾಯಕರ ನೇಮಕಾತಿಗೆ ಕಾಯ್ದೆಯಲ್ಲಿ ಅವಕಾಶ ಇಲ್ಲ.

i) **ಮೇಲ್ಮನವಿ**– ದೌರ್ಜನ್ಯ ತಡೆ ಕಾಯ್ದೆಯಲ್ಲಿ ಮೇಲ್ಮನವಿ ಸಲ್ಲಿಸಲು ಪಬ್ಲಿಕ್ ಪ್ರಾಸಿಕ್ಯೂಟರುಗಳಿಗೆ ಮನಸ್ಸಿಲ್ಲ. "ರಾಜ್ಯವು ನಿಯಮಿಸಿದ ಪಬ್ಲಿಕ್ ಪ್ರಾಸಿಕ್ಯೂಟರ್ ಮೇಲ್ಮನವಿ ಸಲ್ಲಿಸಲು ಅವಕಾಶವಿದೆ.

ಆದ್ದರಿಂದ ಮೇಲಿನ ಅನುಭವದಲ್ಲಿ ವಿವಿಧ ಸಹಪಾಲುದಾರರನ್ನು ಗಮನದಲ್ಲಿಟ್ಟು ದೌರ್ಜನ್ಯ ಪ್ರಕರಣಗಳಲ್ಲಿ ಪರಿಣಾಮಕಾರಿ ಪ್ರಾಸಿಕ್ಯೂಷನ್ ಮಾಡಲು ಕಲಂ 14 ಮತ್ತು 15ರ ಬಲವರ್ಧನೆ ಅಗತ್ಯವಿದೆ. ಇದರಿಂದ ತ್ವರಿತ ವಿಚಾರಣೆ ಸಾಧಿಸಿ, ನಿರ್ದೋಷಿ ತೀರ್ಪುಗಳ ಪ್ರಮಾಣ ತಗ್ಗಿಸಲು ಸಾಧ್ಯ.

ನಾಗರಿಕ ಮತ್ತು ರಾಜಕೀಯ ಹಕ್ಕುಗಳ ಅಂತರಾಷ್ಟ್ರೀಯ ಒಪ್ಪಂದಗಳನ್ನು ಭಾರತ ಮಾಡಿಕೊಂಡಿದ್ದು ಕಾನೂನಿನ ದೃಷ್ಟಿಯಲ್ಲಿ ಸಮಾನರೆನ್ನುವ ಶಾಸನಗಳನ್ನು ಜಾರಿಗೆ ತರುವುದು ದೇಶದ ಜವಾಬ್ದಾರಿಯಾಗಿದೆ. ECRI ಗೈಡ್‌ಲೈನ್ ಸಹ ದೌರ್ಜನ್ಯಕ್ಕೆ ಬಲಿಯಾದವರಿಗೆ ನ್ಯಾಯಾಂಗ, ಆಡಳಿತ ವ್ಯವಸ್ಥೆ ಹಾಗೂ ತುರ್ತು ಪ್ರಕರಣಗಳಲ್ಲಿ ಮಧ್ಯಂತರ ಆದೇಶ ಪಡೆಯಲು ಸಾಧ್ಯವಾಗುವ ಶಾಸನಗಳನ್ನು ಜಾರಿಗೆ ತರುವಂತೆ ಶಿಫಾರಸ್ಸು ಮಾಡುತ್ತದೆ.

ಮೇಲೆ ತಿಳಿಸಿದ ಸೆಕ್ಷನ್‌ಗಳನ್ನು ಬಲವರ್ಧನೆ ಮಾಡುವ ನಿಟ್ಟಿನಲ್ಲಿ ಈ ಕೆಳಕಂಡ ಬದಲಾವಣೆ ತರಬೇಕಿದೆ:

1. ಪ್ರತಿ ಜಿಲ್ಲೆಯಲ್ಲಿಯೂ ಸೆಷನ್ ನ್ಯಾಯಾಲಯ ಸ್ಥಾನಮಾನ ಇರುವ ಪ್ರತ್ಯೇಕ ವಿಶೇಷ ನ್ಯಾಯಾಲಯ "ಸ್ಥಾಪಿಸಬೇಕಾದ" ಅಗತ್ಯವಿದೆ.
2. ವಿಶೇಷ ನ್ಯಾಯಾಲಯಗಳಿಗೆ ಅಪರಾಧವನ್ನು ಗ್ರಹಿಸಿ, ನೇರವಾಗಿ ಪ್ರಕರಣದ ವಿಚಾರಣೆ ಕೈಗೆತ್ತಿಕೊಳ್ಳಲು ಅಧಿಕಾರ ನೀಡಬೇಕು ಮತ್ತು ಸಂಕ್ಷಿಪ್ತ ವಿಚಾರಣೆಗಳನ್ನು ಆಯಾ ದಿನವೇ ಮುಗಿಸಬೇಕು ಮತ್ತು 90 ದಿನಗಳ ಒಳಗಾಗಿ ಪೂರ್ಣಗೊಳಿಸಬೇಕು.
3. ದೌರ್ಜನ್ಯಕ್ಕೆ ಬಲಿಯಾದವರು ನೀಡಿದ ಅಸಲು ದೂರಿಗೆ ಪ್ರತ್ಯಾರೋಪ ದೂರಗಳ ವಿಚಾರಣೆ ಒಂದೇ ನ್ಯಾಯಾಲಯದಲ್ಲಿ ಒಟ್ಟೊಟ್ಟಿಗೆ ನಡೆಸಬೇಕು.
4. ದೌರ್ಜನ್ಯಕ್ಕೆ ಬಲಿಯಾದವರ, ದೂರುದಾರರ ಮತ್ತು ಸಾಕ್ಷಿಗಳ ವಿರುದ್ಧ ಆಗುವ ಎಲ್ಲಾ ರೀತಿಯ ಕೆಟ್ಟ ಉಪಚಾರ ಅಥವಾ ಬೆದರಿಕೆ ವಿರುದ್ಧ ರಕ್ಷಣೆಯ ಮೇಲ್ವಿಚಾರಣೆ ನ್ಯಾಯಾಲಯ ಮಾಡಬೇಕು ಮತ್ತು ಕಾಲಕಾಲಕ್ಕೆ ಪರಿಶೀಲಿಸಬೇಕು.
5. ವಿಶೇಷ ನ್ಯಾಯಾಲಯದ ನ್ಯಾಯಾಧೀಶರು ಮತ್ತು ಪ್ರಾಸಿಕ್ಯೂಟರುಗಳನ್ನು ನಿಯಮಿಸುವಲ್ಲಿ ವಿಶೇಷ ಕ್ರಮಗಳನ್ನು ಅನುಸರಿಸಬೇಕು.

### 3.7 ದೌರ್ಜನ್ಯಕ್ಕೊಳಗಾದವರ ಮತ್ತು ಸಾಕ್ಷಿಗಳ ಹಕ್ಕು

ದೌರ್ಜನ್ಯಕ್ಕೆ ಬಲಿಯಾದವರ ಮತ್ತು ಸಾಕ್ಷಿಗಳ ಹಕ್ಕುಗಳನ್ನು ಕ್ರಿಮಿನಲ್ ಕಾನೂನುಗಳಲ್ಲಿ ಹೆಚ್ಚು ತಿಳಿಸಿಲ್ಲ, ದೌರ್ಜನ್ಯ ತಡೆ ಕಾಯ್ದೆಯೂ ಇದರಿಂದ ಹೊರತಾಗಿಲ್ಲ. ವಾಸ್ತವವಾಗಿ ದೌರ್ಜನ್ಯಕ್ಕೊಳಗಾದವರು ಮತ್ತು ಸಾಕ್ಷಿಗಳು ಇಡೀ ಪ್ರಕ್ರಿಯೆಯಲ್ಲಿ ಮೌನ ವಹಿಸುತ್ತಾರೆ. ಇವರು ಪ್ರಾಸಿಕ್ಯೂಷನ್ ಸಾಕ್ಷಿಗಳಾಗುವುದು ಬಿಟ್ಟರೆ ಇನ್ಯಾವ ಪಾತ್ರವನ್ನೂ ವಹಿಸುವುದಿಲ್ಲ. ದೌರ್ಜನ್ಯಕ್ಕೊಳಗಾದವರು ಮತ್ತು ಸಾಕ್ಷಿಗಳಿಗೆ ತಮ್ಮ ಹಕ್ಕುಗಳನ್ನು ಪ್ರತಿಪಾದಿಸಲು ಅನೇಕ ಕಾಯ್ದೆಗಳಿವೆ. ಉದಾಹರಣೆಗೆ ಎಫ್.ಐ.ಆರ್ ದಾಖಲಿಸುವ ಹಕ್ಕು, ದಾಖಲೆಗಳನ್ನು ಪಡೆದುಕೊಳ್ಳುವ ಹಕ್ಕು, ಪರಿಹಾರ ಪಡೆಯುವ ಹಕ್ಕು, ಪ್ರಕರಣದ ಸ್ಥಿತಿಗತಿ ಮಾಹಿತಿ ಪಡೆಯುವ ಹಕ್ಕು, ರಕ್ಷಣೆಯ ಹಕ್ಕು ಇತ್ಯಾದಿ. ದೇಶದ ಕಾನೂನು ವ್ಯವಸ್ಥೆಯಲ್ಲಿ ಅಂತಿಮ ನ್ಯಾಯ ದೊರೆಸಿಕೊಡಬೇಕಾದಲ್ಲಿ ಬಲಿಯಾದವರ ಮತ್ತು ಸಾಕ್ಷಿಗಳ ಹಕ್ಕುಗಳು ಮತ್ತು ಹಿತಾಸಕ್ತಿಗಳು ಕಾಯ್ದೆಯಲ್ಲಿ ಅಂತರ್ಗತಗೊಳ್ಳಬೇಕು ಮತ್ತು ಸಾಂಸ್ಥೀಕರಣ ಆಗುವ ಅಗತ್ಯತೆ ಬೆಸ್ಟ್ ಬೇಕರಿ ಪ್ರಕರಣ ನಂತರದ ಚರ್ಚೆಗಳಲ್ಲಿ ಹೊರಹೊಮ್ಮಿದೆ.

ವಾಸ್ತವವಾಗಿ ದೌರ್ಜನ್ಯಕ್ಕೆ ಬಲಿಯಾದವರು ಮತ್ತು ಸಂಬಂಧಿಕರು ಅವರ ಮೇಲೆ ಆಗಿರುವ ಹೀನ ಅಪರಾಧಗಳ ಮಾಹಿತಿ ನೀಡಲು ಹಿಂಜರಿಯುತ್ತಾರೆ. ಇದಕ್ಕೆ ಕಾರಣ ದುಷ್ಕರ್ಮಿಗಳು ಹಗೆತನ ಸಾಧಿಸಬಹುದು ಎನ್ನುವ ಭೀತಿ. ಈ ರೀತಿಯ ಸನ್ನಿವೇಶದಲ್ಲಿ ಅಪರಾಧ ಪತ್ತೆಹಚ್ಚಲು(ವಿಶೇಷವಾಗಿ ದೌರ್ಜನ್ಯ ತಡೆ ಕಾಯ್ದೆಯ ಹೀನ ಅಪರಾಧಗಳಲ್ಲಿ) ಪೋಲೀಸರಿಗೆ ಕಷ್ಟ. ಪೋಲೀಸರ ತನಿಖೆ ಮತ್ತು ನ್ಯಾಯಾಲಯದ ಕ್ರಿಮಿನಲ್

ಪ್ರಾಸಿಕ್ಯೂಷನ್‌ಗೆ ಸಾಕ್ಷಿ ನೀಡುವಲ್ಲಿ, ಸಾಕ್ಷಿಗಳ ಪಾತ್ರ ಮಹತ್ವದ್ದು ಎನ್ನುವುದರಲ್ಲಿ ಸಂಶಯವಿಲ್ಲ.

ದೌರ್ಜನ್ಯಕ್ಕೆ ಬಲಿಯಾದವರ ಮತ್ತು ಸಾಕ್ಷಿಗಳ ಹಕ್ಕು ಮತ್ತು ಆಸಕ್ತಿಗಳನ್ನು ರಕ್ಷಿಸುವ ನಿಟ್ಟಿನಲ್ಲಿ ಕಾನೂನಿನಲ್ಲಿರುವ ಕೊರತೆ ಸಹ ದೌರ್ಜನ್ಯಕ್ಕೆ ಬಲಿಯಾದವರಲ್ಲಿ ಅಸಹಾಯಕ ಭಾವನೆ ತರಿಸುತ್ತದೆ. ನ್ಯಾಯ ಒದಗಿಸುವ ವ್ಯವಸ್ಥೆ ದೌರ್ಜನ್ಯಕ್ಕೆ ಬಲಿಯಾದವರ ಬದಲಿಗೆ ದುಷ್ಕರ್ಮಿಗಳ ಪರ ವಹಿಸುತ್ತದೆ ಎನ್ನುವ ಒಂದು ಸಾರ್ವಜನಿಕ ಅಭಿಪ್ರಾಯ ಈ ಅಂಶಗಳು ಸೃಷ್ಟಿಸುತ್ತವೆ. ಆದ್ದರಿಂದ ದೌರ್ಜನ್ಯಕ್ಕೆ ಬಲಿಯಾದವರಿಗೆ ನೆರವನ್ನು, ಹಣಕಾಸಿನ ರೂಪದಲ್ಲಿ, ಮಾರ್ಗದರ್ಶನದ ಮೂಲಕ ಅಥವಾ ವೈದ್ಯಕೀಯ ನೆರವಿನ ಮೂಲಕವಾಗಲೀ ನೀಡುವುದು ಅತ್ಯಾವಶ್ಯಕ. ಏಕೆಂದರೆ ಈ ಎಲ್ಲಾ ಅಂಶಗಳು ದೌರ್ಜನ್ಯಕ್ಕೆ ಬಲಿಯಾದವರ ಮನಸ್ಸಿನಲ್ಲಿ ಎಲ್ಲರೂ ನಮ್ಮ ಕೈ ಬಿಟ್ಟಿಲ್ಲ ಹಾಗೂ ನಮ್ಮ ಬವಣೆಯನ್ನು ಅರ್ಥ ಮಾಡಿಕೊಳ್ಳುತ್ತಾರೆ ಎನ್ನುವ ಭಾವನೆ ಮೂಡಿಸುತ್ತದೆ.

ದೌರ್ಜನ್ಯಕ್ಕೆ ಬಲಿಯಾದವರು ಮತ್ತು ಸಾಕ್ಷಿಗಳು ಹಾಗೂ ನ್ಯಾಯ ದೊರಕಿಸಿಕೊಡಲು ನೆರವಾದ ಸಂಸ್ಥೆಗಳಿಗೆ ಕ್ರಿಮಿನಲ್ ನ್ಯಾಯದ ವ್ಯವಸ್ಥೆಯಲ್ಲಿ ಕೆಳಕಂಡ ಸಮಸ್ಯೆ ಎದುರಾಗಿವೆ:

a) ಕ್ರಿಮಿನಲ್ ಕೋಡ್ ಮತ್ತು ದೌರ್ಜನ್ಯ ತಡೆ ಕಾಯ್ದೆ ಎರಡರಲ್ಲಿಯೂ ದೌರ್ಜನ್ಯದ ವಿವರವನ್ನು ಸಂಕ್ಷಿಪ್ತವಾಗಿ ಪುಸ್ತಕದಲ್ಲಿ ಬರೆಯಬೇಕು ಎನ್ನುವ ನಿಯಮ ಇದ್ದರೂ ಪೋಲೀಸರು ಪ್ರಕರಣ ದಾಖಲಿಸಲು ನಿರಾಕರಿಸಿ ಅಥವಾ ತಡ ಮಾಡಿ ಅಥವಾ ಅಸಮರ್ಪಕ ಸೆಕ್ಷನ್‌ಗಳಡಿ ಎಫ್.ಐ.ಆರ್ ತಯಾರಿಸುವ ದೌರ್ಜನ್ಯಕ್ಕೆ ಬಲಿಯಾದವರಿಗೆ ಪ್ರೋತ್ಸಾಹ ನೀಡುವುದಿಲ್ಲ.

b) ತನಿಖೆಯ ದಿನಾಂಕ, ಪ್ರಕರಣದ ಪ್ರಗತಿ, ಆರೋಪಿಗಳ ಬಿಡುಗಡೆ, ವಿಚಾರಣೆ ದಿನಾಂಕ ಇತ್ಯಾದಿ ಮಾಹಿತಿಯನ್ನು ದೌರ್ಜನ್ಯಕ್ಕೆ ಒಳಗಾದವರಿಗೆ ಮತ್ತು ಸಾಕ್ಷಿಗಳಿಗೆ ನೀಡಿರುವುದಿಲ್ಲ. ಪ್ರಕರಣದ ಪ್ರತಿ ಹಂತದಲ್ಲಿ ಮಾಹಿತಿ ನೀಡುವುದು ಪ್ರಾಸಿಕ್ಯೂಷನ್ ಮತ್ತು ತನಿಖೆ ಮಾಡುವವರ ಆದ್ಯ ಕರ್ತವ್ಯ. ಆದರೆ ಈ ಹಕ್ಕುಗಳನ್ನು ದೌರ್ಜನ್ಯಕ್ಕೆ ಒಳಗಾದವರು ಪಡೆದುಕೊಳ್ಳಲು ಸರಿಯಾದ ವ್ಯವಸ್ಥೆ ಇಲ್ಲವಾದ್ದರಿಂದ ಕೇಸುಗಳ ಬೆನ್ನತ್ತಲು ಸಾಧ್ಯವಾಗಿಲ್ಲ.

c) ದೌರ್ಜನ್ಯಕ್ಕೆ ಒಳಗಾದವರು ಮತ್ತು ಸಾಕ್ಷಿಗಳ ರಕ್ಷಣೆ ಹಕ್ಕುಗಳನ್ನು ದೊರೆಯುವಂತೆ ಮಾಡುವುದು ರಾಜ್ಯ, ತನಿಖೆ ಮತ್ತು ಪ್ರಾಸಿಕ್ಯೂಷನ್ ಕರ್ತ್ಯವ್ಯ.

d) ಪ್ರತಿ ಹಂತದಲ್ಲಿಯೂ ಎಫ್.ಐ.ಆರ್, ಆರೋಪಪಟ್ಟಿ, ವೈದ್ಯಕೀಯ ಪರಿಶೀಲನೆ ವರದಿ, ಮರಣೋತ್ತರ ಪರೀಕ್ಷೆ ವರದಿ ಮತ್ತು ಇತರೆ ವರದಿಗಳನ್ನು ದೌರ್ಜನ್ಯಕ್ಕೆ ಒಳಗಾದವರಿಗೆ ಮತ್ತು ಅವರ ಏಜೆಂಟರಿಗೆ ನೀಡಲು ಸಂಬಂಧಪಟ್ಟ ಅಧಿಕಾರಿಗಳು ನಿರಾಕರಿಸುತ್ತಾರೆ. ಕೆಲವೊಮ್ಮೆ ದೌರ್ಜನ್ಯಕ್ಕೆ ಬಲಿಯಾದವರನ್ನು ವಿಚಾರಣೆಯಿಂದ ದೂರವಿಡಲು ಉದ್ದೇಶಪೂರಕವಾಗಿ ಹೀಗೆ ಮಾಡುತ್ತಾರೆ.

e) ದೌರ್ಜನ್ಯಕ್ಕೆ ಬಲಿಯಾದವರು ತಮ್ಮ ಮಾನವ ಹಕ್ಕುಗಳ ಉಲ್ಲಂಘನೆಯಾದ ಕಾರಣ ತಕ್ಷಣದ ನೆರವು ಮತ್ತು ಪರಿಹಾರ, ನಷ್ಟಪರಿಹಾರ ಮತ್ತು ಪುನರ್ವಸತಿ ಪಡೆಯುವುದು ಅವರ ಹಕ್ಕು ಆಗಿದೆ.

ಮಾಳಿಮಠ ಸಮಿತಿ ತನ್ನ ಶಿಫಾರಸ್ಸಿನಲ್ಲಿ 'ದೌರ್ಜನ್ಯಕ್ಕೆ ಬಲಿಯಾದವರಿಗೆ ನ್ಯಾಯ' ದೊರಕಿಸಿಕೊಡುವುದು ದೇಶದ ಕ್ರಿಮಿನಲ್ ನ್ಯಾಯ ವ್ಯವಸ್ಥೆಯ ಅವಿಭಾಜ್ಯ ಕರ್ತವ್ಯ ಎಂದು ತಿಳಿಸಿದೆ. ಪಾತಕ ಕೃತ್ಯಗಳಿಗೆ ಬಲಿಯಾದವರಿಗೆ ಕ್ರಿಮಿನಲ್ ಪ್ರಕ್ರಿಯೆಯಲ್ಲಿ ಭಾಗವಹಿಸುವುದು ಅವರ ಹಕ್ಕು ಎಂದು ಪರಿಗಣಿಸಿ ಅವಕಾಶ ನೀಡಬೇಕು. ಅವರಿಗೆ ಆಗಿರುವ ಹಾನಿ ಮತ್ತು ನಷ್ಟಕ್ಕೆ ಪರಿಹಾರ ಕೇಳಲು ಅವಕಾಶ ನೀಡಬೇಕು ಎನ್ನುವ ವಾದವನ್ನು ಮಂಡಿಸಿತು. ಸಾಕ್ಷಿಗಳನ್ನು ರಕ್ಷಿಸಲು ಕಾನೂನಿನ ಲೋಪದೋಷ ಅಂತಿಮವಾಗಿ ಸಾಕ್ಷಿಗಳನ್ನು ಹಾಸ್ಟೈಲ್(ವ್ಯತಿರಿಕ್ತ ಹೇಳಿಕೆ ನೀಡುವುದು) ಆಗುವಂತೆ ಮಾಡುತ್ತಿದೆ. ಈ ಧೋರಣೆಯೂ ಹೆಚ್ಚುತ್ತಿದೆಯೆಂದು ಹೇಳಿದೆ.

ಕ್ರಿಮಿನಲ್ ನ್ಯಾಯ ವ್ಯವಸ್ಥೆಯಲ್ಲಿ ಪಾತಕ ಕೃತ್ಯಕ್ಕೆ ಬಲಿಯಾದವರಿಗೆ ಅರ್ಥಪೂರ್ಣ ಪಾತ್ರ ನೀಡಲು, ದೌರ್ಜನ್ಯಕ್ಕೆ ಬಲಿಯಾದವರಿಗೆ ಮತ್ತು ಸಾಕ್ಷಿಗಳಿಗೆ ಇರುವ ಹಕ್ಕುಗಳನ್ನು ತಿಳಿಸುವ ಹೊಸ ಮತ್ತು ಪ್ರತ್ಯೇಕ ಅಧ್ಯಾಯ ಈ ಕಾಯ್ದೆಯಲ್ಲಿ ಸೇರಿಸಲು ಪ್ರಸ್ತಾವನೆ ಸಲ್ಲಿಸುತ್ತಿದ್ದೇವೆ. ಈ ಅಧ್ಯಾಯ ದೌರ್ಜನ್ಯಕ್ಕೆ ಬಲಿಯಾದವರಿಗೆ ದೂರು ನೀಡಿದ ದಿನದಿಂದ ತೀರ್ಪು ದೊರೆಯುವವರೆಗೆ ಪ್ರತಿ ಹಂತದಲ್ಲಿ, ಅಂದರೆ ಎಫ್.ಐ.ಆರ್ ನೊಂದಾವಣೆ, ವಿಚಾರಣೆಯ ಪ್ರಗತಿ, ದಾಖಲೆಗಳನ್ನು ಪಡೆಯಲು, ರಕ್ಷಣೆ, ವೈದ್ಯಕೀಯ ಪರೀಕ್ಷೆ, ಪರಿಹಾರ, ಇತ್ಯಾದಿ ಹಕ್ಕುಗಳನ್ನು ತಿಳಿಸುತ್ತದೆ.

ದೇಶವು ನಾಗರಿಕ ಮತ್ತು ರಾಜಕೀಯ ಹಕ್ಕುಗಳ ಅಂತರಾಷ್ಟ್ರೀಯ ಹಕ್ಕುಗಳ ಒಪ್ಪಂದ ಮಾಡಿಕೊಂಡಿರುವುದರಿಂದ ಕಾನೂನಿನ ದೃಷ್ಟಿಯಲ್ಲಿ ಎಲ್ಲರೂ ಸಮಾನರು ಎನ್ನುವ ಶಾಸನವನ್ನು ಜಾರಿಗೆ ತರುವುದು ದೇಶದ ಆದ್ಯ ಕರ್ತವ್ಯವಾಗಿದೆ. ECRI ಮಾರ್ಗದರ್ಶನಗಳು ಸಹ ಪಕ್ಷಪಾತಕ್ಕೆ ಬಲಿಯಾದವರಿಗೆ, ಪಕ್ಷಪಾತದಿಂದ ಆದ ಹಾನಿಗೆ ಪರಿಹಾರದ ಹಕ್ಕು ಸಿಗಬೇಕು ಎನ್ನುವ ಶಿಫಾರಸ್ಸು ಮಾಡಿದೆ. ದೌರ್ಜನ್ಯಕ್ಕೆ ಬಲಿಯಾದ ಮತ್ತು ಸಾಕ್ಷಿಗಳಿಗೆ ಆಡಳಿತ ವ್ಯವಸ್ಥೆಯ ಎಲ್ಲಾ ಹಂತಗಳಲ್ಲಿ ನ್ಯಾಯ ಸಿಗುವಂತಾಗಲು ಮೂಲಭೂತ ತತ್ವಗಳನ್ನು ರೂಪಿಸಿ, ಆ ಮೂಲಕ ಅವರ ಹಕ್ಕುಗಳನ್ನು ರಕ್ಷಿಸಬೇಕೆಂದು ರಾಜ್ಯಗಳಿಗೆ ಸಲಹೆ ನೀಡಿದೆ. ದೌರ್ಜನ್ಯಕ್ಕೆ ಬಲಿಯಾದವರಿಗೆ ಮತ್ತು ಸಾಕ್ಷಿಗಳಿಗೆ ರಕ್ಷಣೆ, ಮಾಹಿತಿ ಪಡೆಯುವ ಹಕ್ಕು, ಚಿಕಿತ್ಸೆ, ಹಕ್ಕುಗಳ ಪುನರ್ವಶ ಮತ್ತು ಆಗಿರುವ ನಷ್ಟಕ್ಕೆ ಪರಿಹಾರ ದೊರಕಿಸಲು ಈ ತತ್ವಗಳು ಕರೆ ನೀಡುತ್ತದೆ.

# IV

## 1989ರ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ದೌರ್ಜನ್ಯ ತಡೆ ಕಾಯ್ದೆಯ ಬಲವರ್ಧನೆ ಮತ್ತು ಅನುಷ್ಠಾನಕ್ಕೆ ಪ್ರಸ್ತಾಪಿಸಿರುವ ಕರಡು ತಿದ್ದುಪಡಿಗಳು

*(ಪ್ರಾಧಾನ್ಯತೆ ಮತ್ತು ಸೆಕ್ಷನ್ ಸಂಖ್ಯೆ ಆಧಾರದಲ್ಲಿ ನಿಮ್ಮ ಮುಂದೆ ಇಡಲಾಗಿದೆ)*

**ಕ್ರಮ ಸಂಖ್ಯೆ: 1**

**ಸೆಕ್ಷನ್: ಅಧ್ಯಾಯ–IV ಕಲಂ14**

***ಕಾಯ್ದೆಯಲ್ಲಿದ್ದಂತೆ ಪದಗಳು:*** *ತ್ವರಿತ ವಿಚಾರಣೆಯನ್ನು ನೀಡಲು, ರಾಜ್ಯ ಸರ್ಕಾರವು, ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿಯ ಸಮ್ಮತಿಯೊಂದಿಗೆ, ಅಧಿಕೃತ ವಾರ್ತಪತ್ರದಲ್ಲಿ ಅಧಿಸೂಚನೆಯ ಮೂಲಕ, ಈ ಕಾಯ್ದೆಯ ಅಡಿ ಬರುವ ಅಪರಾಧಗಳ ವಿಚಾರಣೆಯನ್ನು ನಿರ್ವಹಿಸಲು ಪ್ರತಿ ಜಿಲ್ಲೆಯ ಸೆಷನ್ ನ್ಯಾಯಾಲಯವನ್ನು ವಿಶೇಷ ನ್ಯಾಯಾಲಯವೆಂದು ಸೂಚಿಸುತ್ತದೆ*

**ತಿದ್ದುಪಡಿಯಾದ ನಂತರದ ಪದಗಳು:**

(1) ತ್ವರಿತ ವಿಚಾರಣೆಯನ್ನು ನೀಡುವ ಉದ್ದೇಶಕ್ಕಾಗಿ, ರಾಜ್ಯ ಸರ್ಕಾರವು ಉಚ್ಚನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿಯ ಸಮ್ಮತಿಯೊಂದಿಗೆ, ಅಧಿಕೃತ ವಾರ್ತಾಪತ್ರದಲ್ಲಿ ಅಧಿಸೂಚನೆಯ ಮೂಲಕ, ಪ್ರತಿ ಜಿಲ್ಲೆಯಲ್ಲಿಯೂ, ಈ ಕಾಯ್ದೆಯ ಅಡಿಯಲ್ಲಿ ಬರುವ ಅಪರಾಧಗಳ ವಿಚಾರಣೆಯನ್ನಷ್ಟೇ ಮಾಡಲು ಸೆಷನ್ ನ್ಯಾಯಾಲಯವನ್ನು ಆ ಜಿಲ್ಲೆಯಲ್ಲಿ ವಿಶೇಷ ನ್ಯಾಯಾಲಯವೆಂದು ಸ್ಥಾಪಿಸತಕ್ಕದ್ದು.

ಯಾವುದಾದರೂ ಜಿಲ್ಲೆಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದವರ ಮೇಲೆ ದೌರ್ಜನ್ಯ ಪ್ರಕರಣಗಳೇ ಇಲ್ಲದಿದ್ದರೆ, ಸರ್ಕಾರವು, ಪರಿಶಿಷ್ಟ ಜಾತಿಯ ರಾಷ್ಟ್ರೀಯ ಆಯೋಗ ಮತ್ತು ಪರಿಶಿಷ್ಟ ವರ್ಗಗಳ ರಾಷ್ಟ್ರೀಯ ಆಯೋಗದ ಸಮ್ಮತಿಯೊಂದಿಗೆ ಅಂತಹ ಜಿಲ್ಲೆಗೆ ಅಥವಾ ಜಿಲ್ಲೆಗಳಿಗೆ ವಿನಾಯತಿ ನೀಡಬಹುದು ಅಥವಾ ಅಂತಹ ಜಿಲ್ಲೆ(ಗಳನ್ನು) ಪ್ರತ್ಯೇಕ ವಿಶೇಷ ನ್ಯಾಯಾಲಯಗಳನ್ನು ಸ್ಥಾಪಿಸುವ ಉದ್ದೇಶದಿಂದ ನೆರೆಯ ಯಾವುದೇ ಜಿಲ್ಲೆ(ಗಳ) ಜೊತೆ ಒಟ್ಟುಗೂಡಿಸಬಹುದು ಮತ್ತು ವಿವರಗಳನ್ನು ಅಧಿಕೃತ ವಾರ್ತಾಪತ್ರದಲ್ಲಿ ಸೂಚಿಸಬೇಕು;

ಒಂದು ಜಿಲ್ಲೆಯಲ್ಲಿ ಹೆಚ್ಚಿನ ಸಂಖ್ಯೆಯ ಪ್ರಕರಣಗಳು ಇದ್ದಲ್ಲಿ, ಈ ಕಾಯ್ದೆಯ ಅಡಿಯಲ್ಲಿ ಬರುವ ಅಪರಾಧಗಳ ತ್ವರಿತ ವಿಚಾರಣೆಯನ್ನು ಖಚಿತಪಡಿಸಲು, ಸರ್ಕಾರವು ಅನೇಕ ಹೆಚ್ಚುವರಿ ವಿಶೇಷ ನ್ಯಾಯಾಲಯಗಳನ್ನು ವಿಚಾರಣೆಯ ಸಲುವಾಗಿ ಸ್ಥಾಪಿಸತಕ್ಕದ್ದು;

(2) ಕ್ರಿಮಿನಲ್ ದಂಡ ಸಂಹಿತೆಯ ಅಧ್ಯಾಯ XIVರ ನಿಬಂಧನೆಗಳನ್ನು ಬದಿಗಿಟ್ಟು, ಈ ವಿಶೇಷ ನ್ಯಾಯಾಲಯಗಳು ಮೂಲ ವ್ಯಾಪ್ತಿ ಇರುವ ನ್ಯಾಯಾಲಯಗಳಾಗಿ ಈ ಕಾಯ್ದೆಯ ಅಡಿಯಲ್ಲಿ ಬರುವ ಅಪರಾಧವನ್ನು ಮ್ಯಾಜಿಸ್ಟ್ರೇಟ್ ಮೂಲಕವೇ ವರ್ಗಾಯಿಸದೆ ಗ್ರಹಿಸಲು ಅಧಿಕಾರ ಇರುತ್ತದೆ;

(3) ವಿಶೇಷ ನ್ಯಾಯಾಲಯಗಳು ಕೇವಲ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ದೌರ್ಜನ್ಯ ಪ್ರಕರಣಗಳ ವಿಚಾರಣೆಯನ್ನಷ್ಟೇ ಮಾಡಬೇಕು ಮತ್ತು ಈ ಕಾಯ್ದೆಯಲ್ಲಿ ಬರುವ ಪ್ರಕರಣಗಳನ್ನು ಹೊರತು ಪಡಿಸಿ ಇನ್ನಾವುದೇ ಪ್ರಕರಣವನ್ನು ವಿಚಾರಣೆಗೆ ನೀಡಬಾರದು;

(4) ವಿಶೇಷ ನ್ಯಾಯಾಲಯಗಳು ಈ ಕಾಯ್ದೆಯ ಅಡಿಯಲ್ಲಿ ಬರುವ ಅಪರಾಧಗಳ ವಿಚಾರಣೆಯನ್ನು ಪ್ರತಿ–ದಿನದ ಆಧಾರದಲ್ಲಿ ಕೈಗೊಳ್ಳಬೇಕು, ಮತ್ತು ವಿಚಾರಣೆಯನ್ನು ಸಾಧ್ಯವಾದಷ್ಟು ತ್ವರಿತವಾಗಿ, 90 ದಿನಗಳಿಗೆ ಮೀರದಂತೆ ಪೂರ್ಣಗೊಳಿಸಬೇಕು;

(5) ಈ ಕಾಯ್ದೆಯ ನಿಬಂಧನೆಯನ್ನು ಕಟ್ಟುನಿಟ್ಟಾಗಿ ಪಾಲಿಸುವಲ್ಲಿ ವಿಶೇಷ ನ್ಯಾಯಾಲಯದ ನ್ಯಾಯಾಧೀಶರು, ನಾಲ್ಕು ತಿಂಗಳಿಗೊಮ್ಮೆ ವರದಿಯನ್ನು ಉನ್ನತ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿಯವರಿಗೆ ಸಲ್ಲಿಸಬೇಕು;

(6) ಈ ಕಾಯ್ದೆಯ ಅಡಿಯಲ್ಲಿ ಯಾವುದೇ ಅಪರಾಧದ ವಿಚಾರಣೆಯನ್ನು ದೌರ್ಜನ್ಯಕ್ಕೆ ಬಲಿಯಾದ ವ್ಯಕ್ತಿ ಅಥವಾ ಆ ವ್ಯಕ್ತಿಯ ಪರವಾಗಿ ನಿರ್ವಹಿಸುವಾಗ ದೌರ್ಜನ್ಯಕ್ಕೆ ಬಲಿಯಾದ ಅಂತಹ ವ್ಯಕ್ತಿಯ ವಿರುದ್ಧ ಅಪರಾಧವಾಗುವ ಮೊದಲು ಅಥವಾ ನಂತರ ಅದೇ ಪೋಲೀಸ್ ಠಾಣೆಯಲ್ಲಿ ಅಥವಾ ಇನ್ನಾವುದೇ ಪೋಲೀಸ್ ಠಾಣೆಯಲ್ಲಿ ಯಾವುದೇ ಪ್ರಕರಣ ದಾಖಲಾಗಿದೆ ಎಂಬುದು ಯಾವುದೇ ಸಂದರ್ಭದಲ್ಲಿ ವಿಶೇಷ ನ್ಯಾಯಾಲಯದ ಗಮನಕ್ಕೆ ಬಂದರೆ, ವಿಶೇಷ ನ್ಯಾಯಾಲಯವು ಅಂತಹ ಪ್ರಕರಣಕ್ಕೆ(ಗಳಿಗೆ) ಸಂಬಂಧಿಸಿದ ಎಲ್ಲಾ ದಾಖಲೆಗಳನ್ನು ತರಿಸಿಕೊಳ್ಳತಕ್ಕದ್ದು ಮತ್ತು ಅಂತಹ ಪ್ರಕರಣಗಳನ್ನು ದೌರ್ಜನ್ಯ ಅಪರಾಧದ ಜೊತೆ ಜಂಟಿಯಾಗಿ, ಒಂದೇ ವಿಚಾರಣೆಯಾಗಿ ನಿರ್ವಹಿಸತಕ್ಕದ್ದು;

(7) ಸೆಷನ್ ವಿಶೇಷ ನ್ಯಾಯಾಲಯದ ನ್ಯಾಯಾಧೀಶರ ನೇಮಕದಲ್ಲಿ ಅವರು ಹಿಂದೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದವರ ಹಕ್ಕುಗಳನ್ನು ಎತ್ತಿಹಿಡಿದ ಕೀರ್ತಿ ಮತ್ತು ದಾಖಲೆಗಳನ್ನು ಪರಿಗಣಿಸತಕ್ಕದ್ದು, ವಿಶೇಷವಾಗಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದವರ ಹಿಂಸೆ ಮತ್ತು "ಅಸ್ಪೃಶ್ಯತೆಯ" ವಿರುದ್ಧ ರಕ್ಷಣೆಯ ಹಕ್ಕುಗಳು;

(8) ವಿಶೇಷ ನ್ಯಾಯಾಲಯ ಮತ್ತು ಅದರ ನ್ಯಾಯಾಧೀಶರಿಗೆ ಬೇಕಾದಷ್ಟು ಯಾವುದೇ ಇತರೆ ಮುಖ್ಯವಾಹಿನಿ ಸೆಷನ್ ನ್ಯಾಯಾಲಯಕ್ಕೆ ಮತ್ತು ಅದರ ನ್ಯಾಯಾಧೀಶರಿಗೆ ನೀಡಿದ ಸಹಾಯಕ ಸಿಬ್ಬಂಧಿ ಮತ್ತು ಸೌಲಭ್ಯಗಳಿಗೆ ಕಡಿಮೆ

ಇಲ್ಲದಂತೆ ನೀಡತಕ್ಕದ್ದು; ಮತ್ತು ಪರಿಣಾಮಕಾರಿಯಾಗಿ ಕಾರ್ಯ ನಿರ್ವಹಿಸಲು ಬೇಕಾದ ಸಹಾಯಕ ಸಿಬ್ಬಂಧಿ ಮತ್ತು ಸೌಲಭ್ಯಗಳ ಪೂರ್ಣ ಕೊರತೆ ಅಥವಾ ಭಾಗಶ: ಕೊರತೆಯ ಮೂಲಕ ಅವರ ಕಾರ್ಯಾಚರಣೆಯನ್ನು ತಡೆಯಬಾರದು;

(9) ನ್ಯಾಯಾಧೀಶರಿಗೆ ಬಡ್ತಿ ನೀಡುವಾಗ ವಿಶೇಷ ನ್ಯಾಯಾಲಯಗಳಲ್ಲಿ ಅವರ ಕಾರ್ಯ ಸಾಧನೆಯನ್ನು ಪ್ರಮುಖ ಅಂಶವಾಗಿ ಪರಿಗಣಿಸಿ, ಅಂತಹ ಬಡ್ತಿಯಲ್ಲಿ ಅವರ ಒಳ್ಳೆಯ ಕಾರ್ಯಸಾಧನೆಗೆ ಹೆಚ್ಚುವರಿ ಪ್ರಾಮುಖ್ಯತೆಯನ್ನು ನೀಡಬೇಕು ಮತ್ತು ಉನ್ನತ ನ್ಯಾಯಾಲಯವು ಈ ಉದ್ದೇಶಕ್ಕಾಗಿ ಸೂಕ್ತ ಕಾರ್ಯಯೋಜನೆಯನ್ನು ಹಾಕಿಕೊಳ್ಳಬಹುದು;

(10) (a) ನ್ಯಾಯಾಧೀಶರ ವರ್ಗಾವಣೆಯನ್ನು ಮಾಡುವಾಗ ವಿಶೇಷ ನ್ಯಾಯಾಲಯಗಳಲ್ಲಿ ನ್ಯಾಯಾಧೀಶರ ಹುದ್ದೆ ಎಂದಿಗೂ ಖಾಲಿ ಇರದಂತೆ ಪೂರ್ವಯೋಜನೆಯಿಂದ ಮಾಡಬೇಕು;

(b) ವಿಶೇಷ ನ್ಯಾಯಾಲಯದಲ್ಲಿ ನ್ಯಾಯಾಧೀಶರ ಹುದ್ದೆಗಳು ಆಕಸ್ಮಿಕವಾಗಿ ಖಾಲಿ ಆದರೆ ಅಂತಹ ಆಕಸ್ಮಿಕ ಘಟನೆ ನಡೆದ ದಿನದಿಂದ 30 ದಿನಗಳ ಒಳಗಾಗಿ ಖಾಲಿ ಹುದ್ದೆಯನ್ನು ಭರ್ತಿ ಮಾಡುವುದು;

**ಕ್ರಮ ಸಂಖ್ಯೆ: 2**

**ಸೆಕ್ಷನ್: ಅಧ್ಯಾಯ–IV, ಕಲಂ.15**

**ಕಾಯ್ದೆಯಲ್ಲಿದ್ದಂತೆ ಪದಗಳು:** *ಪ್ರತಿ ವಿಶೇಷ ನ್ಯಾಯಾಲಯಕ್ಕೆ, ರಾಜ್ಯ ಸರ್ಕಾರವು, ಅಧಿಕೃತ ಅಧಿಸೂಚನೆಯ ಮೂಲಕ, ಒಬ್ಬ ಪಬ್ಲಿಕ್ ಪ್ರಾಸಿಕ್ಯೂಟರನ್ನು ಸೂಚಿಸುವುದು ಅಥವಾ ಏಳು ವರ್ಷಗಳಿಗೂ ಕಡಿಮೆ ವಕೀಲ ವೃತ್ತಿ ಮಾಡದೇ ಇರುವ ಒಬ್ಬ ವಕೀಲನನ್ನು ನ್ಯಾಯಾಲಯದಲ್ಲಿ ಪ್ರಕರಣವನ್ನು ನಿರ್ವಹಿಸುವ ಉದ್ದೇಶಕ್ಕಾಗಿ ವಿಶೇಷ ಪಬ್ಲಿಕ್ ಪ್ರಾಸಿಕ್ಯೂಟರ್ ಎಂದು ನಿಯಮಿಸುವುದು.*

**ತಿದ್ದುಪಡಿಯಾದ ನಂತರದ ಪದಗಳು:**

(1) ಪ್ರತಿ ವಿಶೇಷ ನ್ಯಾಯಾಲಯಕ್ಕೆ, ರಾಜ್ಯ ಸರ್ಕಾರವು, ಅಧಿಕೃತ ವಾರ್ತಾಪತ್ರದಲ್ಲಿ ಅಧಿಸೂಚನೆಯ ಮೂಲಕ ಪಬ್ಲಿಕ್ ಪ್ರಾಸಿಕ್ಯೂಟರನ್ನು ಅಥವಾ ಏಳು ವರ್ಷಗಳಿಗೂ ಕಡಿಮೆ ವಕೀಲ ವೃತ್ತಿ ಅನುಭವ ಇಲ್ಲದ ವಕೀಲರನ್ನು ವಿಶೇಷ ಪಬ್ಲಿಕ್ ಪ್ರಾಸಿಕ್ಯೂಟರನ್ನಾಗಿ ಈ ನ್ಯಾಯಾಲಯದಲ್ಲಿ ಈ ಕಾಯ್ದೆಯ ಅಡಿಯಲ್ಲಿ ಬರುವ ಪ್ರಕರಣಗಳನ್ನಷ್ಟೇ ನಿರ್ವಹಿಸಲು ನೇಮಿಸಬೇಕು;

(2) ರಾಜ್ಯ ಸರ್ಕಾರವು, ವಿಶೇಷ ನ್ಯಾಯಾಲಯಗಳಲ್ಲಿ ಪ್ರತ್ಯೇಕವಾಗಿ ಪ್ರಕರಣಗಳನ್ನು ನಿರ್ವಹಿಸಲು, ಜಿಲ್ಲಾ ನ್ಯಾಯಾಧೀಶರ ಶಿಫಾರಸ್ಸನ್ನು ಆಧರಿಸಿ ಪ್ರತಿ ಜಿಲ್ಲೆಯಲ್ಲಿ, ಅಗತ್ಯ ಎನಿಸುವಷ್ಟು ಸಂಖ್ಯೆಯ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಕ್ಕೆ ಸೇರಿದವರನ್ನೂ ಒಳಗೊಂಡಂತೆ ಏಳು ವರ್ಷಗಳಿಗೂ ಕಡಿಮೆ ಅನುಭವ ಇಲ್ಲದ, ವಕೀಲ ವೃತ್ತಿ ನಡೆಸುತ್ತಿರುವವರ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದವರ ಹಕ್ಕುಗಳನ್ನು ಸತತವಾಗಿ ಎತ್ತಿ ಹಿಡಿದ ಖ್ಯಾತಿಯ ದಾಖಲೆ ಇರುವ, ವಿಶೇಷವಾಗಿ ಹಿಂಸೆಯ ವಿರುದ್ಧ ರಕ್ಷಣೆಯ ಮತ್ತು "ಅಸ್ಪೃಶ್ಯತೆಯ" ಹಕ್ಕುಗಳನ್ನು ಎತ್ತಿಹಿಡಿದ, ದೌರ್ಜನ್ಯಕ್ಕೆ ಬಲಿಯಾದ ಮತ್ತು ಅಸ್ಪೃಶ್ಯತೆಗೆ ಒಳಗಾದ ವ್ಯಕ್ತಿಯ ವಿರುದ್ಧ ಪ್ರಕರಣವನ್ನು ನಿರ್ವಹಿಸದ ವಕೀಲರ ತಂಡವನ್ನು ರಚಿಸತಕ್ಕದ್ದು. ತಯಾರಿಸತಕ್ಕದ್ದು ಹಾಗೂ ಈ ತಂಡದ ಮಾನ್ಯತೆ ಮೂರು ವರ್ಷಗಳವರೆಗೂ ಇರತಕ್ಕದ್ದು ಮತ್ತು ಮೂರು ವರ್ಷಗಳ ಸಮಯ ಮೀರುವುದರ ಒಳಗಾಗಿ ಮತ್ತೊಂದು ತಂಡದ ರಚನೆ ಆಗತಕ್ಕದ್ದು;

(3) ಉಪನಿಯಮ 15 (I)ರಲ್ಲಿ ತಿಳಿಸಿರುವ ನಿಬಂಧನೆಗಳನ್ನು ಬದಿಗಿಟ್ಟು, ಜಿಲ್ಲಾ ನ್ಯಾಯಾಧೀಶರು ಅಥವಾ ದೌರ್ಜನ್ಯಕ್ಕೆ ಬಲಿಯಾದ ವ್ಯಕ್ತಿಯು ಇಚ್ಛಿಸಿದಲ್ಲಿ, ಬಲಿಯಾದ ವ್ಯಕ್ತಿಯ ಆಯ್ಕೆಯಂತೆ ವಿಶೇಷ ನ್ಯಾಯಾಲಯದಲ್ಲಿ ಪ್ರಕರಣವನ್ನು ನಿರ್ವಹಿಸಲು ದಕ್ಷ ಹಿರಿಯ ವಕೀಲರನ್ನು ಅವರು ಸೂಕ್ತ ಎಂದು ಪರಿಗಣಿಸುವ ಶುಲ್ಕದ ಪಾವತಿಯ ಮೂಲಕ ಗೊತ್ತುಪಡಿಸುವುದು;

(4) ವಿಶೇಷ ನ್ಯಾಯಾಲಯದಲ್ಲಿ ಈ ಕಾಯ್ದೆಯ ಅಡಿಯಲ್ಲಿ ಪ್ರಕರಣವನ್ನು ನಿರ್ವಹಿಸಲು ವಿಶೇಷ ಪಬ್ಲಿಕ್ ಪ್ರಾಸಿಕ್ಯೂಟರಿಗೆ ಸಹಾಯವನ್ನಷ್ಟೇ ಮಾಡುವ ಉದ್ದೇಶದಿಂದ, ಕಾಯ್ದೆಯ ಉಪಬಂಧ 1ರ ಮೂಲಕ ನಿಯಮಿಸಲಾದ ವಿಶೇಷ ಪಬ್ಲಿಕ್ ಪ್ರಾಸಿಕ್ಯೂಟರಿಗೆ ಒಬ್ಬ ಅಥವಾ ಹೆಚ್ಚು ಸಹಾಯಕ ಪಬ್ಲಿಕ್ ಪ್ರಾಸಿಕ್ಯೂಟರುಗಳನ್ನು ಅಥವಾ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಕ್ಕೆ ಸೇರಿದವರನ್ನೂ ಒಳಗೊಂಡಂತೆ, ಏಳು ವರ್ಷಗಳಿಗೂ ಕಡಿಮೆ ಅನುಭವ ಇಲ್ಲದ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದವರ ಹಕ್ಕುಗಳನ್ನು ವಿಶೇಷವಾಗಿ ಹಿಂಸೆಯ ವಿರುದ್ಧ ರಕ್ಷಣೆ ಮತ್ತು "ಅಸ್ಪೃಶ್ಯತೆಯ" ಹಕ್ಕುಗಳನ್ನು ಎತ್ತಿಹಿಡಿದ ಖ್ಯಾತಿಯ ದಾಖಲೆ ಇರುವ ಮತ್ತು ದೌರ್ಜನ್ಯಕ್ಕೆ ಬಲಿಯಾದ ಮತ್ತು ಅಸ್ಪೃಶ್ಯತೆಗೆ ಬಲಿಯಾದ ವ್ಯಕ್ತಿಯ ವಿರುದ್ಧ ಪ್ರಕರಣ ನಡೆಸದೇ ಇರುವಂತಹ, ವಕೀಲರನ್ನು ರಾಜ್ಯ ಸರ್ಕಾರವು ನೇಮಕ ಮಾಡತಕ್ಕದ್ದು;

(5) ಉಪಬಂಧ (1)ರಲ್ಲಿ ನಿಯಮಿಸಲಾದ ಒಬ್ಬ ವಿಶೇಷ ಪಬ್ಲಿಕ್ ಪ್ರಾಸಿಕ್ಯೂಟರ್ ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ವರ್ಗಕ್ಕೆ ಸೇರದೇ ಇದ್ದಲ್ಲಿ, ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ವರ್ಗಕ್ಕೆ ಸೇರಿದ ವಕೀಲರನ್ನು ಸಹಾಯಕ ವಕೀಲರನ್ನಾಗಿ ನಿಯಮಿಸತಕ್ಕದ್ದು, ಇದರಿಂದಾಗಿ ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ವರ್ಗಕ್ಕೆ ಸೇರಿದ ಕಿರಿಯ ವಕೀಲರ ವೃತ್ತಿ ಬೆಳವಣಿಗೆಯಾಗುತ್ತದೆ;

(6) ಜಿಲ್ಲಾ ನ್ಯಾಯಾಧೀಶರು ಒಂದು ಕ್ಯಾಲೆಂಡರ್ ವರ್ಷದಲ್ಲಿ ಕನಿಷ್ಠ ಎರಡು ಬಾರಿ, ಜನವರಿ ಮತ್ತು ಜುಲೈ ತಿಂಗಳಲ್ಲಿ ವಿಶೇಷ ಪಬ್ಲಿಕ್ ಪ್ರಾಸಿಕ್ಯೂಟರ್ ಮತ್ತು ಸಹಾಯಕ ಪಬ್ಲಿಕ್ ಪ್ರಾಸಿಕ್ಯೂಟರುಗಳ ಕಾರ್ಯಸಾಧನೆಯ ಪುನರಾವಲೋಕನ ಮಾಡುತ್ತಾರೆ ಹಾಗೂ ಈ ವರದಿಯನ್ನು ರಾಜ್ಯ ಸರ್ಕಾರಕ್ಕೆ, ಹಾಗೂ ರಾಜ್ಯ ಮಟ್ಟದ ಜಾಗೃತಿ ಮತ್ತು ಮೇಲ್ವಿಚಾರಣೆ ಸಮಿತಿಗೆ ಸಲ್ಲಿಸುತ್ತಾರೆ.

(7) ಈ ವರದಿಯನ್ನು ಸ್ವೀಕರಿಸಿದ ನಂತರ ಸಂಚಾಲಕನು ಈ ವರದಿಯನ್ನು ಪರಿಶೀಲಿಸಬೇಕು ಹಾಗೂ ತನ್ನ ಟಿಪ್ಪಣಿಗಳೊಂದಿಗೆ ಸಮಿತಿಯ ಅಧ್ಯಕ್ಷರಾಗಿರುವ ಮುಖ್ಯಮಂತ್ರಿಗಳು ಹಾಗೂ ಇತರೆ ಸದಸ್ಯರಿಗೆ ರವಾನಿಸತಕ್ಕದ್ದು ಹಾಗೂ ಮುಂದಿನ ಸಮಿತಿಯ ಸಭೆಯಲ್ಲಿ ವಿಷಯಸೂಚಿಯನ್ನಾಗಿ ಇಡತಕ್ಕದ್ದು;

(8) ಆಕಸ್ಮಿಕವಾಗಿ ವಿಶೇಷ ಪಬ್ಲಿಕ್ ಪ್ರಾಸಿಕ್ಯೂಟರು ಅಥವಾ ಸಹಾಯಕ ಪಬ್ಲಿಕ್ ಪ್ರಾಸಿಕ್ಯೂಟರಿನ ಹುದ್ದೆ ತೆರವಾದರೆ ಅಂತಹ ಆಕಸ್ಮಿಕ ದಿನದಿಂದ 30 ದಿನಗಳ ಒಳಗಾಗಿ ಆ ಹುದ್ದೆಯನ್ನು ಭರ್ತಿ ಮಾಡತಕ್ಕದ್ದು;

(9) ವಿಶೇಷ ಪಬ್ಲಿಕ್ ಪ್ರಾಸಿಕ್ಯೂಟರ್ ಮೌಖಿಕ ವಾದಗಳನ್ನು ಮಂಡಿಸುವುದರ ಜೊತೆಗೆ ಸಮಗ್ರ ಬರವಣಿಗೆಯ ವಾದವನ್ನು ನ್ಯಾಯಾಲಯಕ್ಕೆ ಸಲ್ಲಿಸಬೇಕು;

ಈ ಕಾಯ್ದೆಯಡಿಯಲ್ಲಿ ನಿಯಮಿಸಲಾದ ವಿಶೇಷ ಪಬ್ಲಿಕ್ ಪ್ರಾಸಿಕ್ಯೂಟರು ಹಾಗೂ ಸಹಾಯಕ ಪಬ್ಲಿಕ್ ಪ್ರಾಸಿಕ್ಯೂಟರುಗಳ ಕಾರ್ಯಸಾಧನೆಯನ್ನು ಭವಿಷ್ಯದ ಕಾರ್ಯಗಳು ಮತ್ತು ಹೆಚ್ಚುವರಿ ಕಾರ್ಯಗಳಿಗೆ ಮತ್ತು ಪ್ರಕರಣಗಳಲ್ಲಿ ಯಶಸ್ವಿಯಾಗಿ ಪ್ರಾಸಿಕ್ಯೂಟ್ ಮಾಡುವಲ್ಲಿ ಕೈಗೊಂಡ ಎಲ್ಲಾ ಪ್ರಯತ್ನಗಳು ಹಾಗೂ ವಿಚಾರಣೆ ದಿನ ಮುಂದೂಡಿಕೆಯನ್ನು ಕೇಳುವ ಪ್ರತಿವಾದಿ ವಕೀಲರ ಮನವಿಯನ್ನು ತಡೆಯುವಲ್ಲಿ ಕೈಗೊಳ್ಳುವ ಕ್ರಮಗಳು, ಮತ್ತು ಪ್ರತಿ ಅಪರಾಧಗಳ ಸಾಮಾಜಿಕ-ಆರ್ಥಿಕ ಹಿನ್ನೆಲೆಯನ್ನು ನ್ಯಾಯಾಲಯಗಳಲ್ಲಿ ಮಂಡಿಸುವ ಕಾರ್ಯಕ್ಕೆ ಭವಿಷ್ಯದಲ್ಲಿ ವಹಿಸಲಾಗುವ ಕಾರ್ಯಗಳಿಗೆ ಮಾಪಕವಾಗಿ ಹೆಚ್ಚುವರಿ ಅಂಕಗಳನ್ನು ನೀಡಬೇಕು.

**ಕ್ರಮ ಸಂಖ್ಯೆ: 3**

**ಸೆಕ್ಷನ್: ಅಧ್ಯಾಯ-II, ಕಲಂ 15 (A)**

**ಕಾಯ್ದೆಯಲ್ಲಿದ್ದಂತೆ ಪದಗಳು:** *ಈ ಉಪಬಂಧವನ್ನು ಕಲಂ 15 (A) ಅಡಿಯಲ್ಲಿ ಹೊಸದಾಗಿ ಸೇರಿಸುವುದು*

**ತಿದ್ದುಪಡಿಯಾದ ನಂತರದ ಪದಗಳು:**

ಪ್ರತಿ ವಿಶೇಷ ನ್ಯಾಯಾಲಯಕ್ಕೆ ಬೇಕಾಗುವಷ್ಟು ಡಿಎಸ್‌ಪಿ ವಿಭಾಗದಲ್ಲಿ ಸಾಮಾನ್ಯ ಪೋಲೀಸ್ ಆಡಳಿತಕ್ಕೆ ಇದ್ದಂತೆ ಈ ಕಾಯ್ದೆಯ ಅಡಿಯಲ್ಲಿ ಬರುವ ಅಪರಾಧಗಳನ್ನಷ್ಟೇ ತನಿಖೆ ಮಾಡುವ ಉದ್ದೇಶಕ್ಕಾಗಿ ಪೋಲೀಸ್ ಅಧಿಕಾರಿಗಳನ್ನು ರಾಜ್ಯ ಸರ್ಕಾರವು ನಿಯಮಿಸಬೇಕು ಮತ್ತು ಅಂತಹ ಪೋಲೀಸ್ ಅಧಿಕಾರಿಯ ಹಿಂದಿನ ಅನುಭವ, ಸಾಮಾಜಿಕ ನ್ಯಾಯಕ್ಕೆ ಸೂಕ್ಷ್ಮತೆ ಮತ್ತು ಪ್ರಕರಣದ ಪರಿಣಾಮವನ್ನು ದುರಿಸಲು ದಕ್ಷತೆ ಮತ್ತು ಸರಿಯಾದ ಮಾರ್ಗದಲ್ಲಿ ಅತ್ಯಂತ ಕಡಿಮೆ ಸಮಯದಲ್ಲಿ ತನಿಖೆಯನ್ನು ಪೂರ್ಣಗೊಳಿಸುವಂತಹ ಪೋಲೀಸ್ ಅಧಿಕಾರಿಯನ್ನು ನೇಮಕ ಮಾಡಬೇಕು.

## 2. ಪ್ರಸ್ತುತ ಕಾಯ್ದೆಯಲ್ಲಿ ತಿಳಿಸದೇ ಇರುವ ತಿದ್ದುಪಡಿಯಲ್ಲಿ ಸೇರಿಸಬೇಕಿರುವ ಅಪರಾಧಗಳು

**ಕ್ರಮ ಸಂಖ್ಯೆ:** 1.

**ಸೆಕ್ಷನ್: ಅಧ್ಯಾಯ-II, ಕಲಂ 3(1)(iv)**

**ಕಾಯ್ದೆಯಲ್ಲಿದ್ದಂತೆ ಪದಗಳು:** ಪರಿಶಿಷ್ಟ ಜಾತಿಯ ಅಥವಾ ಪರಿಶಿಷ್ಟ ವರ್ಗದ ಸದಸ್ಯನೊಬ್ಬನಿಗೆ ಮಾಲಿಕತ್ವಕ್ಕೆ ಸೇರಿದ, ವರ್ಗಾವಣೆ ಮೂಲಕ ಪ್ರಾಪ್ತಿಯಾದ, ಅರ್ಹ ಪ್ರಾಧಿಕಾರದಿಂದ ಪ್ರಾಪ್ತಿಯಾದ ಯಾವುದೇ ಭೂಮಿಯನ್ನು ಕಾನೂನು ಬಾಹಿರವಾಗಿ ಸ್ವಾಧೀನಕ್ಕೆ ಪಡೆದರೆ ಅಥವಾ ಕೃಷಿ ಮಾಡಿದರೆ;

**ತಿದ್ದುಪಡಿಯಾದ ನಂತರದ ಪದಗಳು:** ಪರಿಶಿಷ್ಟ ಜಾತಿ ಅಥವ ಪರಿಶಿಷ್ಟ ವರ್ಗದ ಸದಸ್ಯನೊಬ್ಬನ ಮಾಲಿಕತ್ವಕ್ಕೆ ಸೇರಿದ, ಅಥವಾ ಹಂಚಿದ, ಅಥವಾ ಯಾವುದೇ ಅರ್ಹ ಪ್ರಾಧಿಕಾರದಿಂದ ಅಧಿಸೂಚನೆಯ ಮೂಲಕ ಹಂಚಿದ ಭೂಮಿಯನ್ನು ಆಕ್ರಮಿಸಿದರೆ ಅಥವಾ ಕೃಷಿ ಮಾಡಿದರೆ; ಅಥವಾ ಕೃಷಿ ಮಾಡಬಹುದಾದ ಯಾವುದೇ ಸರ್ಕಾರಿ ಜಮೀನನ್ನು ಅಥವಾ ಭೂದಾನ ಭೂಮಿಯನ್ನು ನಿಯಮಗಳ ಪ್ರಕಾರ ಅರ್ಹತೆ ಇಲ್ಲದೆ; ಅಥವಾ ಹಂಚಿದ ಭೂಮಿಯನ್ನು ವರ್ಗಾಯಿಸಿಕೊಂಡರೆ; ಅಥವಾ ಈ ಕುರಿತು ಸುಳ್ಳು ದಾಖಲೆಯನ್ನು ಸಲ್ಲಿಸಿದರೆ ಅಥವಾ ದಾಖಲೆಯನ್ನು ತಿರುಚಿದರೆ;

**ಕ್ರಮ ಸಂಖ್ಯೆ:**

**ಸೆಕ್ಷನ್:** ಅಧ್ಯಾಯ-II, ಕಲಂ 3(1)(v)

**ಕಾಯ್ದೆಯಲ್ಲಿದ್ದಂತೆ ಪದಗಳು:** ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ವರ್ಗಕ್ಕೆ ಸೇರಿದ ಒಬ್ಬ ಸದಸ್ಯನನ್ನು ಆತನಿಗೆ ಸೇರಿದ ಭೂಮಿ ಅಥವಾ ಜಾಗದ ಸ್ವಾಧೀನ ಅವನಂದ ತಪ್ಪಿಸಿದರೆ ಅಥವಾ ಹಸ್ತಕ್ಷೇಪ ಮಾಡಿದರೆ ಅಥವಾ ಅವನು ಅನುಭವಿಸುತ್ತಿರುವ ಯಾವುದೇ ಭೂಮಿ, ಜಾಗದಲ್ಲಿ ಅಥವಾ ನೀರಿಗಾಗಿ ಹಸ್ತಕ್ಷೇಪ ಮಾಡಿದರೆ;

**ತಿದ್ದುಪಡಿಯಾದ ನಂತರದ ಪದಗಳು:** ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ವರ್ಗಕ್ಕೆ ಸೇರಿದ ಒಬ್ಬ ಸದಸ್ಯನನ್ನು ಆತನಿಗೆ ಸೇರಿದ ಭೂಮಿ ಅಥವಾ ಜಾಗದ ಸ್ವಾಧೀನ ಅವನಂದ ತಪ್ಪಿಸಿದರೆ ಅಥವಾ ಹಸ್ತಕ್ಷೇಪ ಮಾಡಿದರೆ ಅಥವಾ ಅವನು ಅನುಭವಿಸುತ್ತಿರುವ ಯಾವುದೇ ಭೂಮಿ, ಜಾಗದಲ್ಲಿ ಅಥವಾ ನೀರಿಗಾಗಿ ಹಸ್ತಕ್ಷೇಪ ಮಾಡಿದರೆ; ಅಥವಾ ಆ ಭೂಮಿಯ ಸ್ವಾಧೀನ ಪಡೆಯಲು ಬಳಸಲು, ಅನುಭವಿಸಲು ಉತ್ಪನ್ನಗಳನ್ನು ತೆಗೆದುಕೊಳ್ಳಲು ತಡೆದರೆ; ಅಥವಾ ಅವನಿಗೆ ಸೇರಿದ ಉತ್ಪನ್ನಗಳನ್ನು, ಅಂತಹ ಸದಸ್ಯನ ಲಿಖಿತ ಸಮ್ಮತಿ ಇಲ್ಲದೇ ತೆಗೆದುಕೊಂಡರೆ ಅಥವಾ ಅಂತಹ ಭೂಮಿ, ಪ್ರದೇಶ ಅಥವಾ ನೀರಿನ ಕುರಿತು ಸುಳ್ಳು ದಾಖಲೆಗಳನ್ನು ಸಲ್ಲಿಸಿದರೆ ಅಥವಾ ದಾಖಲೆಗಳನ್ನು ತಿರುಚಿದರೆ;

ಕ್ರಮ ಸಂಖ್ಯೆ: 3

**ಸೆಕ್ಷನ್: ಅಧ್ಯಾಯ–II, ಕಲಂ 3(1)(vi)**

**ಕಾಯ್ದೆಯಲ್ಲಿದ್ದಂತೆ ಪದಗಳು:** *ಪರಿಶಿಷ್ಟ ಜಾತಿಗೆ ಅಥವಾ ಪರಿಶಿಷ್ಟ ವರ್ಗಕ್ಕೆ ಸೇರಿದ ಸದಸ್ಯ ಒಬ್ಬನನ್ನು ಸಾರ್ವಜನಿಕ ಉದ್ದೇಶಕ್ಕಾಗಿ ಸರ್ಕಾರವು ಹೇರಿದ ಸೇವೆಯನ್ನು ಹೊರತುಪಡಿಸಿ 'ಬೇಗಾರ್' ಅಥವಾ ಇದೇ ರೀತಿಯ ಬಲವಂತದ ಅಥವಾ ಜೀತದ ಆಳಾಗಲು ಒತ್ತಾಯಪಡಿಸಿದರೆ ಅಥವಾ ಆಕರ್ಷಿಸಿದರೆ;*

**ತಿದ್ದುಪಡಿಯಾದ ನಂತರದ ಪದಗಳು:**

a. ಪರಿಶಿಷ್ಟ ಜಾತಿಗೆ ಅಥವಾ ಪರಿಶಿಷ್ಟ ವರ್ಗಕ್ಕೆ ಸೇರಿದ ಸದಸ್ಯನೊಬ್ಬನನ್ನು 'ಬೇಗಾರ್' ಅಥವಾ ಇದೇ ರೀತಿಯ ಬಲವಂತದ ಅಥವಾ ಜೀತದ ಆಳಾಗಲು ಒತಾಯಿಸಿದರೆ ಅಥವಾ ಆಕರ್ಷಿಸಿದರೆ;

b. ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ವರ್ಗಕ್ಕೆ ಸೇರಿದ ಬಾಲಕರನ್ನು ಯಾವುದೇ ಕೆಲಸಕ್ಕೆ ಒತ್ತಾಯಿಸಿದರೆ ಅಥವಾ ಬಲವಂತ ಮಾಡಿದರೆ ಅಥವಾ ಅಂತಹ ಬಾಲಕನನ್ನು "ಬಾಲ ಕಾರ್ಮಿಕ (ನಿಶೇಧ ಮತ್ತು ನಿಯಂತ್ರಣ) ಕಾಯ್ದೆ 1986 ಪರಿಶಿಷ್ಟ ಭಾಗ "ಎ" ಮತ್ತು "ಬಿ"ಯಲ್ಲಿ ತಿಳಿಸಿದ ಯಾವುದೇ ಕೆಲಸವನ್ನು ಮಾಡುವಂತೆ ಅನುಮತಿ ನೀಡಿದರೆ;

c. ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ವರ್ಗಕ್ಕೆ ಸೇರಿದ ಸದಸ್ಯನೊಬ್ಬನನ್ನು "ಬರಿಗೈ ಜಾಡಮಾಲಿ ಮತ್ತು ಒಣ ಸಂಡಾಸು ನಿರ್ಮಾಣ (ನಿಶೇಧ) ಕಾಯ್ದೆ, 1993ರಲ್ಲಿ ಅರ್ಥೈಸಿದ, ಅಥವಾ ರೊಚ್ಚು ಅಥವಾ ಚರಂಡಿ ಕಾಮಗಾರಿಗೆ ಯಾವುದೇ ಸುರಕ್ಷತೆ ಇಲ್ಲದೆ ಅಥವಾ ಯಾವುದೇ ಕಾಯ್ದೆಯಲ್ಲಿ ವಿವರಿಸಿದಂತೆ ರಕ್ಷಣೆ ಇಲ್ಲದೆ ಅಥವಾ ನ್ಯಾಯಾಲಯದ ನಿರ್ದೇಶನ ಅಥವಾ ಯಾವುದೇ ಅರ್ಹ ಪ್ರಾಧಿಕಾರದಂತೆ "ಬರಿಗೈಯಲ್ಲಿ ಜಾಡಮಾಲಿ" ಕೆಲಸ ಮಾಡಲು ನಿಯಮಿಸಿದಲ್ಲಿ ಅಥವಾ ಒಪ್ಪಿಗೆ ನೀಡಿದಲ್ಲಿ;

d. ರಾಜ್ಯದ ಯಾವುದೇ ಕಾಯ್ದೆಯಲ್ಲಿ ಅಥವಾ ಸರ್ಕಾರಿ ಆದೇಶದಲ್ಲಿ ಅರ್ಥೈಸಿದಂತೆ ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ವರ್ಗಕ್ಕೆ ಸೇರಿದ ಮಹಿಳೆಯನ್ನು ದೇವದಾಸಿಯಾಗಿ ಮೀಸಲಿಡುವ ಕೃತ್ಯವನ್ನು ಮಾಡಿದರೆ, ಅನುಮತಿ ನೀಡಿದರೆ, ಭಾಗವಹಿಸಿದರೆ, ಅಥವಾ ಅಂತಹ ಕೃತ್ಯವನ್ನು ಉತ್ತೇಜಿಸಿದರೆ ಅಥವಾ ಯಾವುದೇ ಸಂಸ್ಕಾರಗಳನ್ನು ಮಾಡಿದರೆ;

e. ಪ್ರಸ್ತುತ ಚಾಲ್ತಿಯಲ್ಲಿರುವ ಯಾವುದೇ ಕಾನೂನು, ನಿಯಮ, ಅಧಿಸೂಚನೆ, ಸರ್ಕಾರಿ ಆದೇಶ, ಸುತ್ತೋಲೆ, ಇತ್ಯಾದಿಗಳಲ್ಲಿ ತಿಳಿಸಿದ ವೇತನವನ್ನು ನೀಡುವಲ್ಲಿ ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ವರ್ಗದ ಪುರುಷ ಮತ್ತು ಮಹಿಳೆಗೆ ಪಕ್ಷಪಾತ ತೋರಿದರೆ ಮತ್ತು/ಅಥವಾ ನಿರಾಕರಿಸಿದರೆ ಅಥವಾ ಅರ್ಹ ಪ್ರಾಧಿಕಾರ, ಅಥವಾ ಗುತ್ತಿಗೆ ಕಾರ್ಮಿಕರ ಪ್ರಕರಣದಲ್ಲಿ ಗುತ್ತಿಗೆ ವೇತನ ನೀಡುವಲ್ಲಿ, ಅಂತಹ ಗುತ್ತಿಗೆ ವೇತನವು ಅರ್ಹ ಪ್ರಾಧಿಕಾರ ನಗದಿಪಡಿಸಿದ ಕನಿಷ್ಠ ವೇತನಕ್ಕಿಂತ ಕಡಿಮೆ ಇದ್ದಲ್ಲಿ;

ಕ್ರಮ ಸಂಖ್ಯೆ: 4

**ಸೆಕ್ಷನ್: ಅಧ್ಯಾಯ–II, ಕಲಂ 3(1)(vii)**

**ಕಾಯ್ದೆಯಲ್ಲಿದ್ದಂತೆ ಪದಗಳು:** *ಪರಿಶಿಷ್ಟ ಜಾತಿಯ ಅಥವಾ ಪರಿಶಿಷ್ಟ ವರ್ಗದ ಸದಸ್ಯನೊಬ್ಬನನ್ನು ಕಾನೂನಿನಲ್ಲಿ ತಿಳಿಸಿದ ವಿಧಾನವನ್ನು ಹೊರತುಪಡಿಸಿ ಮತ ಚಲಾಯಿಸಲು ಅಥವಾ ಮತ ಚಲಾಯಿಸದೇ ಇರಲು ಬಲವಂತ ಮಾಡಿದರೆ ಅಥವಾ ಬೆದರಿಸಿದರೆ;*

**ತಿದ್ದುಪಡಿಯಾದ ನಂತರದ ಪದಗಳು:**

a. ಪರಿಶಿಷ್ಟ ಜಾತಿಯ ಅಥವಾ ಪರಿಶಿಷ್ಟ ವರ್ಗದ ಸದಸ್ಯನೊಬ್ಬನನ್ನು ಕಾನೂನಿನಲ್ಲಿ ತಿಳಿಸಿದ ವಿಧಾನವನ್ನು ಹೊರತುಪಡಿಸಿ ಮತ ಚಲಾಯಿಸಲು ಅಥವಾ ಮತ ಚಲಾಯಿಸದೇ ಇರಲು ಯಾವುದೇ ರೀತಿಯಲ್ಲಿ ಹಲ್ಲೆ ಅಥವಾ ಗಾಯ ತೀವ್ರ ಗಾಯ ಅಥವಾ ಈ ಕಾಯ್ದೆಯಡಿಯಲ್ಲಿ ಬರುವ ಯಾವುದೇ ರೀತಿಯ ಅಪರಾಧಗಳನ್ನು ಒಳಗೊಂಡಂತೆ ಸಾಮಾಜಿಕ ಬಹಿಷ್ಕಾರ ಹೇರಿಕೆ ಅಥವಾ ಹೇರಿಕೆಯ ಬೆದರಿಕೆಯ ಮೂಲಕ ಬಲವಂತ ಮಾಡಿದರೆ ಅಥವಾ ಬೆದರಿಸಿದರೆ;

b. ಮತದಾನದ ನಂತರ ಕಾನೂನಿನಲ್ಲಿ ತಿಳಿಸಿದ ವಿಧಾನವನ್ನು ಹೊರತು ಪಡಿಸಿ ಪರಿಶಿಷ್ಟ ಜಾತಿಯ ಅಥವಾ ಪರಿಶಿಷ್ಟ ವರ್ಗದ ಸದಸ್ಯನೊಬ್ಬ ಮತದಾನ ಮಾಡಿದ್ದಕ್ಕಾಗಿ ಅಥವಾ ಮಾಡದೇ ಇದ್ದ ಕಾರಣ ಗಾಯ ಅಥವಾ ತೀವ್ರ ಗಾಯ ಅಥವಾ ಹಲ್ಲೆ ಅಥವಾ ಸಾಮಾಜಿಕ ಅಥವಾ ಆರ್ಥಿಕ ಬಹಿಷ್ಕಾರವನ್ನು ಹೇರಿದರೆ ಅಥವಾ ಹೇರಿಕೆಯ ಬೆದರಿಕೆ ಒಡ್ಡಿದರೆ ಅಥವಾ;

c. ಯಾವುದೇ ಚುನಾವಣೆಯಲ್ಲಿ ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ವರ್ಗದ ಸದಸ್ಯನೊಬ್ಬನನ್ನು ಅಭ್ಯರ್ಥಿಯಾಗಿ ನಾಮಪತ್ರ ಸಲ್ಲಿಸಲು ಅಥವಾ ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ವರ್ಗದ ಸದಸ್ಯನನ್ನು ಚುನಾವಣೆ ಅಭ್ಯರ್ಥಿಯಾಗಿ ಎರಡನೇ ಪ್ರಸ್ತಾವನೆಯನ್ನು ಹಲ್ಲೆ ಅಥವಾ ಗಾಯ ಅಥವಾ ತೀವ್ರ ಗಾಯ ಮಾಡುವ ಮೂಲಕ ಅಥವಾ ಸಾಮಾಜಿಕ ಅಥವಾ ಆರ್ಥಿಕ ಬಹಿಷ್ಕಾರ ಹೇರಿದರೆ ಅಥವಾ ಹೇರಿಕೆಯ ಬೆದರಿಕೆ ಹಾಕಿದರೆ ಅಥವಾ ಇನ್ನಾವುದೇ ರೀತಿಯಿಂದ ತಡೆದರೆ;

d. ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ವರ್ಗಕ್ಕೆ ಸೇರಿದ ಸದಸ್ಯನೊಬ್ಬನು ಸಂವಿಧಾನದ ಭಾಗ IXರಲ್ಲಿ ತಿಳಿಸಿದಂತೆ ಪಂಚಾಯತ್ ಮತ್ತು ಭಾಗ IX Aಯಲ್ಲಿ ತಿಳಿಸಿದಂತೆ ಪುರಸಭೆಯ ಸದಸ್ಯನಾಗಿ ಅಥವಾ ಅಧ್ಯಕ್ಷನಾಗಿ ಅಥವಾ ಯಾವುದೇ ಸ್ಥಾನ ಹೊಂದಿದ್ದರೆ ಸಾಮಾನ್ಯವಾಗಿ ಕಾರ್ಯನಿರ್ವಹಿಸುವ ಅಥವಾ ಅಧಿಕಾರ ಚಲಾಯಿಸುವಾಗ ಯಾವುದೇ ರೀತಿಯಲ್ಲಿ ಅಡ್ಡಿಪಡಿಸಿದರೆ;

ಕ್ರಮ ಸಂಖ್ಯೆ: 5

**ಸೆಕ್ಷನ್: ಅಧ್ಯಾಯ–II, ಕಲಂ. 3(1)(viii)**

**ಕಾಯ್ದೆಯಲ್ಲಿದ್ದಂತೆ ಪದಗಳು:** *ಪರಿಶಿಷ್ಟ ಜಾತಿಯ ಅಥವಾ ಪರಿಶಿಷ್ಟ ವರ್ಗದ ಸದಸ್ಯನೊಬ್ಬನ ವಿರುದ್ಧ ಸುಳ್ಳು ಅಥವಾ ದುರುದ್ದೇಶದ ಅಥವಾ ಕಿರುಕುಳದ ದಾವೆಯನ್ನು ಅಥವಾ ಇತರೆ ಕ್ರಿಮಿನಲ್ ಪ್ರಕ್ರಿಯೆಯನ್ನು ಹೂಡಿದರೆ;*

**ತಿದ್ದುಪಡಿಯಾದ ನಂತರದ ಪದಗಳು:** ಪರಿಶಿಷ್ಟ ಜಾತಿಯ ಅಥವಾ ಪರಿಶಿಷ್ಟ ವರ್ಗಕ್ಕೆ ಸೇರಿದ ಸದಸ್ಯನೊಬ್ಬನ ವಿರುದ್ಧ ಅಥವಾ ಈ ಕಾಯ್ದೆಯಲ್ಲಿ ಬರುವ ಅಪರಾಧಗಳ ದೌರ್ಜನ್ಯಕ್ಕೆ ಬಲಿಯಾದ ವ್ಯಕ್ತಿಯ ಮೇಲೆ ಅಥವಾ ಆ ವ್ಯಕ್ತಿಯ ಸಂಬಂಧಿಗಳ ವಿರುದ್ಧ ದೌರ್ಜನ್ಯ ಅಪರಾಧದ ಸ್ವಲ್ಪ ಮೊದಲು ಅಥವಾ ನಂತರ ಈ ಕಾಯ್ದೆಯ ಅಡಿಯಲ್ಲಿ ಬರುವ ಯಾವುದೇ ದೌರ್ಜನ್ಯ ಪ್ರಕರಣದಲ್ಲಿ ಸಾಕ್ಷಿ ಹೇಳದಂತೆ ಅಥವಾ ಸುಳ್ಳು ಸಾಕ್ಷಿಯನ್ನು ಹೇಳಲು ಬಲವಂತ ಮಾಡಲು ಸುಳ್ಳು, ದುರುದ್ದೇಶದ ಅಥವಾ ಕಿರುಕುಳದ ಮೊಕದ್ದಮೆ ಅಥವಾ ಕ್ರಿಮಿನಲ್ ಅಥವಾ ಪೋಲೀಸರಿಗೆ ದೂರು ನೀಡುವುದನ್ನೂ ಒಳಗೊಂಡಂತೆ ಇತರೆ ಕಾನೂನು ಪ್ರಕ್ರಿಯೆಗಳನ್ನು ಹೂಡಿದ್ದರೆ;

ಕ್ರಮ ಸಂಖ್ಯೆ: 6

**ಸೆಕ್ಷನ್: ಅಧ್ಯಾಯ–II, ಕಲಂ 3(1)(xvi)**

**ಕಾಯ್ದೆಯಲ್ಲಿದ್ದಂತೆ ಪದಗಳು:** *ಈ ಉಪಬಂಧವನ್ನು ಹೊಸ ಉಪಬಂಧವನ್ನಾಗಿ ಸೇರಿಸಲು ಪ್ರಸ್ತಾಪಿಸಲಾಗಿದೆ.*

**ತಿದ್ದುಪಡಿಯಾದ ನಂತರದ ಪದಗಳು:** ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ವರ್ಗಕ್ಕೆ ಸೇರಿದ ಸದಸ್ಯನೊಬ್ಬನಿಗೆ ಗಾಯ ಅಥವಾ ತೀವ್ರ ಗಾಯ ಮಾಡಿದರೆ;

ಕ್ರಮ ಸಂಖ್ಯೆ: 7

**ಸೆಕ್ಷನ್: ಅಧ್ಯಾಯ–II, ಕಲಂ. 3(1) (xvii)**

**ಕಾಯ್ದೆಯಲ್ಲಿದ್ದಂತೆ ಪದಗಳು:** ಈ ಉಪಬಂಧವನ್ನು ಹೊಸ ಉಪಬಂಧವನ್ನಾಗಿ ಸೇರಿಸಲು ಪ್ರಸ್ತಾಪಿಸಲಾಗಿದೆ.

**ತಿದ್ದುಪಡಿಯಾದ ನಂತರದ ಪದಗಳು:** ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ವರ್ಗಕ್ಕೆ ಸೇರಿದ ಸದಸ್ಯನೊಬ್ಬನನ್ನು ಅಪಹರಿಸಿದರೆ ಅಥವಾ ಕಾನೂನು ಬಾಹಿರವಾಗಿ ನಿರ್ಬಂಧಿಸಿದರೆ;

ಕ್ರಮ ಸಂಖ್ಯೆ: 8

**ಸೆಕ್ಷನ್: ಅಧ್ಯಾಯ–II, ಕಲಂ. 3(1) (xviii)**

**ಕಾಯ್ದೆಯಲ್ಲಿದ್ದಂತೆ ಪದಗಳು:** *ಈ ಉಪಬಂಧವನ್ನು ಹೊಸ ಉಪಬಂಧವನ್ನಾಗಿ ಸೇರಿಸಲು ಪ್ರಸ್ತಾಪಿಸಲಾಗಿದೆ.*

**ತಿದ್ದುಪಡಿಯಾದ ನಂತರದ ಪದಗಳು:** ಶೈಕ್ಷಣಿಕ ಸಂಸ್ಥೆಯಲ್ಲಿ, ಅಥವಾ ಅಂಗನವಾಡಿಯಲ್ಲಿ ಅಥವಾ ಶಾಲೆಯ ಮಧ್ಯಾಹ್ನದ ಬಿಸಿಯೂಟ ಕಾರ್ಯಕ್ರಮದಲ್ಲಿ ಅಥವಾ ಇನ್ಯಾವುದೇ ಕಲಿಯುವ ಸ್ಥಳದಲ್ಲಿ ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ವರ್ಗಕ್ಕೆ ಸೇರಿದ ಮಗುವಿನ ವಿರುದ್ಧ ಪಕ್ಷಪಾತ ತೋರಿದರೆ ಅಥವಾ ಮನನೋಯಿಸಿದರೆ;

ಕ್ರಮ ಸಂಖ್ಯೆ: 9

**ಸೆಕ್ಷನ್: ಅಧ್ಯಾಯ–II, ಕಲಂ. 3(1) (xix)**

**ಕಾಯ್ದೆಯಲ್ಲಿದ್ದಂತೆ ಪದಗಳು:** *ಈ ಉಪಬಂಧವನ್ನು ಹೊಸ ಉಪಬಂಧವನ್ನಾಗಿ ಸೇರಿಸಲು ಪ್ರಸ್ತಾಪಿಸಲಾಗಿದೆ.*

**ತಿದ್ದುಪಡಿಯಾದ ನಂತರದ ಪದಗಳು:** ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದ ಸದಸ್ಯರಿಗೆ; ಒಂದು ಪ್ರದೇಶದಲ್ಲಿರುವ ಸಂಪನ್ಮೂಲಗಳನ್ನು(ಊರಿನ ಆಸ್ತಿ), ಅಥವಾ ಸ್ಮಶಾನವನ್ನು ಬಳಸಲು, ಇತರರೊಂದಿಗೆ ಸಮಾನವಾಗಿರಲು ಅಡ್ಡಿಪಡಿಸಿದರೆ ಅಥವಾ ಕಾನೂನು ಅಥವಾ ಪದ್ಧತಿಯ ಅಡಿಯಲ್ಲಿ, ಮರ ಅಲ್ಲದ ಅರಣ್ಯ ಉತ್ಪನ್ನ ಅಥವಾ ಕಿರು ಅರಣ್ಯ ಉತ್ಪನ್ನವನ್ನು ಸಂಗ್ರಹಿಸಲು, ಅವರ ಹಕ್ಕು ಪ್ರತಿಪಾದಿಸಲು ಅಡ್ಡಿಪಡಿಸಿದರೆ;

ಕ್ರಮ ಸಂಖ್ಯೆ: 10

**ಸೆಕ್ಷನ್: ಅಧ್ಯಾಯ–II, ಕಲಂ 3(1) (xxi)**

**ಕಾಯ್ದೆಯಲ್ಲಿದ್ದಂತೆ ಪದಗಳು:** *ಹೊಸ ಉಪಬಂಧವನ್ನಾಗಿ ಸೇರಿಸಲು ಪ್ರಸ್ತಾಪಿಸಲಾಗಿದೆ.*

**ತಿದ್ದುಪಡಿಯಾದ ನಂತರದ ಪದಗಳು:** ಒಂದು ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡದ ಸಮುದಾಯವನ್ನು ಅವಮಾನಿಸಿದರೆ, ಡಾ. ಬಿ.ಆರ್. ಅಂಬೇಡ್ಕರ್ ಮತ್ತು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಇತರೆ ನಾಯಕರ ಪ್ರತಿಮೆ ಹಾನಿ ಮಾಡಿದರೆ ಅಥವಾ ವಿರೂಪಗೊಳಿಸಿದರೆ ಅಥವಾ ಅಗೌರವ ತೋರಿದರೆ

ಕ್ರಮ ಸಂಖ್ಯೆ: 11

**ಸೆಕ್ಷನ್: ಅಧ್ಯಾಯ–II, ಕಲಂ 3(1) (xxiii)**

**ಕಾಯ್ದೆಯಲ್ಲಿದ್ದಂತೆ ಪದಗಳು:** *ಹೊಸ ಉಪಬಂಧವನ್ನಾಗಿ ಸೇರಿಸಲು ಪ್ರಸ್ತಾಪಿಸಲಾಗಿದೆ.*

**ತಿದ್ದುಪಡಿಯಾದ ನಂತರದ ಪದಗಳು:** ಪರಿಶಿಷ್ಟ ಪಂಗಡ ಮತ್ತು ಇತರೆ ಸಾಂಪ್ರದಾಯಿಕ ಅರಣ್ಯ ವಾಸಿಗಳ (ಅರಣ್ಯ ಹಕ್ಕುಗಳನ್ನು ಗುರುತಿಸುವ) ಕಾಯ್ದೆ 2006ರ ಕಲಂ 3(1), ಕಲಂ 4ರಲ್ಲಿ ಅರ್ಥೈಸಿರುವ ಅರಣ್ಯ ಹಕ್ಕುಗಳನ್ನು ಅನುಭವಿಸಲು ಪರಿಶಿಷ್ಟ ಪಂಗಡದ ಯಾವುದೇ ಸದಸ್ಯರಿಗೆ ಯಾವುದೇ ರೀತಿಯ ಪಕ್ಷಪಾತ ತೋರಿದರೆ ಅಥವಾ ಅಡ್ಡಿಪಡಿಸಿದರೆ.

ಕ್ರಮ ಸಂಖ್ಯೆ: 12

**ಸೆಕ್ಷನ್: ಅಧ್ಯಾಯ–II, ಕಲಂ 3(2)(i)**

**ಕಾಯ್ದೆಯಲ್ಲಿದ್ದಂತೆ ಪದಗಳು:** *ಹೊಸ ಉಪಬಂಧವನ್ನಾಗಿ ಸೇರಿಸಲು ಪ್ರಸ್ತಾಪಿಸಲಾಗಿದೆ.*

**ತಿದ್ದುಪಡಿಯಾದ ನಂತರದ ಪದಗಳು:**

(a) ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡದ ಸದಸ್ಯನೊಬ್ಬನನ್ನು ವಾಮಾಚಾರ ಮಾಡುತ್ತಿದ್ದ ಎನ್ನುವ ಆರೋಪ ಹೊರಿಸುವುದನ್ನೂ ಒಳಗೊಂಡಂತೆ ಕೊಲೆಗೈದರೆ, ಜೀವಾವಧಿ ಶಿಕ್ಷೆ ಮತ್ತು ಆತನಿಗೆ ಸೇರಿದ ಎಲ್ಲಾ ಆಸ್ತಿಪಾಸ್ತಿಯನ್ನು ಮುಟ್ಟುಗೋಲು ಹಾಕಿ ಈ ಕಾಯ್ದೆಯಲ್ಲಿ ಬಲಿಯಾದವರಿಗೆ/ಅವರ ಅವಲಂಬಿತರಿಗೆ ನೀಡಲಾಗುವ ಪುನರ್ವಸತಿ, ಪರಿಹಾರ ಮೊತ್ತ ಮತ್ತು ನಷ್ಟಪರಿಹಾರಗೆ ಹೆಚ್ಚುವರಿಯಾಗಿ ಹಂಚುವುದು;

(b) ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡದವರನ್ನು ಸಾಮೂಹಿಕವಾಗಿ ಹತ್ಯೆ ಮಾಡುವವರಿಗೆ ಜೀವಾವಧಿ ಶಿಕ್ಷೆ ಮತ್ತು ಅವರ ಆಸ್ತಿಪಾಸ್ತಿಯನ್ನು ಮುಟ್ಟುಗೋಲು ಹಾಕಿ ಈ ಕಾಯ್ದೆಯ ಅಡಿಯಲ್ಲಿ ಬಲಿಯಾದವರ ಅವಲಂಬಿತರಿಗೆ ಪುನರ್ವಸತಿ, ಪರಿಹಾರ ಮೊತ್ತ ಮತ್ತು ನಷ್ಟಪರಿಹಾರ ಮೊತ್ತವನ್ನು ನೀಡುವುದರ ಜೊತೆ ಹೆಚ್ಚುವರಿಯಾಗಿ ಹಂಚಬೇಕು;

**ವಿವರಣೆ 1:** ಪರಿಶಿಷ್ಟ ಜಾತಿಯ ಅಥವಾ ಪರಿಶಿಷ್ಟ ಪಂಗಡದ ಇಬ್ಬರು ಅಥವಾ ಹೆಚ್ಚಿನ ಸದಸ್ಯರನ್ನು, ಒಬ್ಬ ಅಥವಾ ಹೆಚ್ಚಿನವರು ಕೊಲೆಗೈದಿದ್ದರೆ, ವ್ಯಕ್ತಿಗಳ ಗುಂಪಿನಲ್ಲಿ ಇದ್ದ ಪ್ರತಿಯೊಬ್ಬ ವ್ಯಕ್ತಿಯೂ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಸದಸ್ಯರ ಸಾಮೂಹಿಕ ಹತ್ಯೆ ಮಾಡಿದ್ದಾರೆ ಎಂದೇ ಪರಿಗಣಿಸಬೇಕು.

ಕ್ರಮ ಸಂಖ್ಯೆ: 13

**ಸೆಕ್ಷನ್: ಅಧ್ಯಾಯ–II, ಕಲಂ 3(2)(ii)**

**ಕಾಯ್ದೆಯಲ್ಲಿದ್ದಂತೆ ಪದಗಳು:** *ಹೊಸ ಉಪಬಂಧವನ್ನಾಗಿ ಸೇರಿಸಲು ಪ್ರಸ್ತಾಪಿಸಲಾಗಿದೆ.*

**ತಿದ್ದುಪಡಿಯಾದ ನಂತರದ ಪದಗಳು:**

(a) ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡದ ಮಹಿಳಾ ಸದಸ್ಯರೊಬ್ಬರನ್ನು ಅತ್ಯಾಚಾರ ಮಾಡಿದರೆ, ಜೀವಾವಧಿ ಶಿಕ್ಷೆ ಅಥವಾ ಹತ್ತು ವರ್ಷಕ್ಕಿಂತ ಕಡಿಮೆ ಇಲ್ಲದ ಸೆರೆವಾಸ ಮತ್ತು ದಂಡವನ್ನೂ ವಿಧಿಸತಕ್ಕದ್ದು ಅಥವಾ;

(b) ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದ ಹದಿನೆಂಟು ವರ್ಷದ ಕೆಳಗೆ ಇರುವ ಮಗುವನ್ನು ಅತ್ಯಾಚಾರಕ್ಕೆ ಒಳಪಡಿಸಿದರೆ ಅಥವಾ;

(c) ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದ ಯಾವುದೇ ಮಹಿಳೆಯ ವಿರುದ್ಧ ಸಾಮೂಹಿಕ ಅತ್ಯಾಚಾರ ಎಸಗಿದರೆ ಅಥವಾ;

(d) ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದ ಮಹಿಳೆಯ ಮೇಲೆ ಗುಂಪುಗೂಡಿ ಅತ್ಯಾಚಾರ ಎಸಗಿದರೆ; ಜೀವಾವಧಿ ಶಿಕ್ಷೆ ಮತ್ತು ಅವರಿಗೆ ಸೇರಿದ ಎಲ್ಲಾ ಆಸ್ತಿಯನ್ನು ಮುಟ್ಟುಗೋಲು ಹಾಕಿಕೊಳ್ಳುವ ದಂಡನೆ ಹಾಗೂ ಅದನ್ನು ಈ ಕಾಯ್ದೆಯ ಅಡಿಯಲ್ಲಿ ಬಲಿಯಾದವರ/ಅವಲಂಬಿತರಿಗೆ ಪುನರ್ವಸತಿ, ಪರಿಹಾರ ಮೊತ್ತ ಮತ್ತು ನಷ್ಟಪರಿಹಾರಯ ಜೊತೆ ಹೆಚ್ಚುವರಿಯಾಗಿ ಹಂಚತಕ್ಕದ್ದು;

**ವಿವರಣೆ 1:** ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ಮಹಿಳಾ ಸದಸ್ಯೆಯ ಮೇಲೆ ಒಬ್ಬರಿಗಿಂತ ಹೆಚ್ಚು ವ್ಯಕ್ತಿಗಳು ಗುಂಪಿನಲ್ಲಿ ಅತ್ಯಾಚಾರ ಮಾಡಿದ್ದರೆ, ಅಂತಹ ಪ್ರತಿ ವ್ಯಕ್ತಿಯೂ ಆ ಮಹಿಳೆಯ ಮೇಲೆ ಸಾಮೂಹಿಕ ಅತ್ಯಾಚಾರ ಎಸಗಿದರು ಎಂದು ಈ ಉಪಬಂಧದ ಅರ್ಥದಲ್ಲಿ ತಿಳಿದುಕೊಳ್ಳಬೇಕು.

**ವಿವರಣೆ 2:** ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದ ಇಬ್ಬರು ಅಥವಾ ಹೆಚ್ಚಿನ ಮಹಿಳೆಯರ ಮೇಲೆ ಒಬ್ಬ ಅಥವಾ ಹೆಚ್ಚಿನ ವ್ಯಕ್ತಿಗಳು ಗುಂಪಿನಲ್ಲಿ ಅತ್ಯಾಚಾರ ಮಾಡಿದ್ದರೆ, ಅಂತಹ ಪ್ರತಿ ವ್ಯಕ್ತಿಗಳೂ ಸಾಮೂಹಿಕ ಅತ್ಯಾಚಾರ ಎಸಗಿದ್ದಾರೆ ಎಂದು ಈ ಉಪಬಂಧದ ಅರ್ಥದಲ್ಲಿ ತಿಳಿದುಕೊಳ್ಳಬೇಕು.

**ಕ್ರಮ ಸಂಖ್ಯೆ: 14**

**ಸೆಕ್ಷನ್: ಅಧ್ಯಾಯ–II, ಕಲಂ 3(2)(iv) 3(2) (iii D) ಎಂಬ ಹೊಸ ಉಪಬಂಧ ಸಂಖ್ಯೆ ನೀಡಿದೆ**

**ಕಾಯ್ದೆಯಲ್ಲಿದ್ದಂತೆ ಪದಗಳು:** *ಪರಿಶಿಷ್ಟ ಜಾತಿಯ ಅಥವಾ ಪರಿಶಿಷ್ಟ ಪಂಗಡದ ಸದಸ್ಯನೊಬ್ಬನ ಒಡೆತನದಲ್ಲಿರುವ ಯಾವುದೇ ಆಸ್ತಿ ಅಥವಾ ಸಾಮಾನ್ಯವಾಗಿ ವಾಸಿಸಲು ಅಥವಾ ಪೂಜಾಸ್ಥಳವಾಗಿ ಬಳಸುವ ಕಟ್ಟಡವನ್ನು ಹಾನ ಮಾಡುವ ಉದ್ದೇಶದಿಂದ ಅಥವಾ ಹಾನಿ ಮಾಡುತ್ತದೆ ಎಂದು ತಿಳಿದು ಬೆಂಕಿ ಅಥವಾ ಸಿಡಿಯುವ ಪದಾರ್ಥದಿಂದ ಕಿಡಿಗೇಡಿತನ ಮಾಡಿದರೆ ಜೀವಾವಧಿ ಸೆರೆವಾಸ ಮತ್ತು ದಂಡದ ಶಿಕ್ಷೆ ವಿಧಿಸಬಹುದು;*

**ತಿದ್ದುಪಡಿಯಾದ ನಂತರದ ಪದಗಳು:** ಪರಿಶಿಷ್ಟ ಜಾತಿಯ ಅಥವಾ ಪರಿಶಿಷ್ಟ ಪಂಗಡದ ಸದಸ್ಯನೊಬ್ಬನ ಸುಪರ್ದಿಯಲ್ಲಿರುವ ಯಾವುದೇ ಆಸ್ತಿ ಅಥವಾ ಸಾಮಾನ್ಯವಾಗಿ ವಾಸಿಸಲು ಅಥವಾ ಪೂಜಾಸ್ಥಳವಾಗಿ ಬಳಸುವ ಕಟ್ಟಡವನ್ನು ಹಾನ ಮಾಡುವ ಉದ್ದೇಶದಿಂದ ಅಥವಾ ಹಾನಿ ಮಾಡುತ್ತದೆ ಎಂದು ತಿಳಿದು ಬೆಂಕಿ ಅಥವಾ ಸಿಡಿಯುವ ಪದಾರ್ಥದಿಂದ ಕಿಡಿಗೇಡಿತನ ಮಾಡಿದರೆ ಜೀವಾವಧಿ ಶಿಕ್ಷೆ ಮತ್ತು ದಂಡ ಹಾಗೂ ಅಪರಾಧದಲ್ಲಿ ಸಂಭವಿಸಿರುವ ಹಾನಿಯ ಮಟ್ಟಕ್ಕೆ ಸಮನಾಗಿ ಆತನ ಆಸ್ತಿಯನ್ನು ಮುಟ್ಟುಗೋಲು ಹಾಕಿ ಈ ಕಾಯ್ದೆಯ ಅಡಿಯಲ್ಲಿ ಬಲಿಯಾದವರಿಗೆ/ ಅವಲಂಬಿತರಿಗೆ ನೀಡುವ ಪುನರ್ವಸತಿ, ಪರಿಹಾರ ಮೊತ್ತ ಮತ್ತು ನಷ್ಟಪರಿಹಾರ ಮೊತ್ತದ ಜೊತೆಯಲ್ಲಿ ಹೆಚ್ಚುವರಿಯಾಗಿ ಹಂಚುವುದು;

**ಕ್ರಮ ಸಂಖ್ಯೆ: 15**

**ಸೆಕ್ಷನ್: ಅಧ್ಯಾಯ–II, ಕಲಂ3 (2)(iv A)**

**ಕಾಯ್ದೆಯಲ್ಲಿದ್ದಂತೆ ಪದಗಳು:** *ಹೊಸ ಉಪಬಂಧವನ್ನಾಗಿ ಸೇರಿಸಲು ಪ್ರಸ್ತಾಪಿಸಲಾಗಿದೆ.*

**ತಿದ್ದುಪಡಿಯಾದ ನಂತರದ ಪದಗಳು:** ಪರಿಶಿಷ್ಟ ಜಾತಿಯ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದ ಒಬ್ಬ ಸದಸ್ಯ ಅಥವಾ ಒಂದು ಕುಟುಂಬ ಅಥವಾ ಒಂದು ಗುಂಪಿಗೆ ಸಾಮಾಜಿಕ ಅಥವಾ ಆರ್ಥಿಕ ಬಹಿಷ್ಕಾರ ಹೇರಿದರೆ, ಅಥವಾ ನೈತಿಕ ಬೆದರಿಕೆ ಹೂಡಿದರೆ, ಅಥವಾ ಅಂತಹ ನಿಶೇಧವನ್ನು ಉತ್ತೇಜಿಸಿದರೆ ಜೀವಾವಧಿ ಮತ್ತು ದಂಡ ಶಿಕ್ಷೆ ಹಾಗೂ ಅವನ ಎಲ್ಲಾ ಆಸ್ತಿಯನ್ನು ಮುಟ್ಟುಗೋಲು ಹಾಕಿಕೊಂಡು ಈ ಕಾಯ್ದೆಯಲ್ಲಿ ಬಲಿಯಾದವರಿಗೆ/ಅವಲಂಬಿತರಿಗೆ ನೀಡುವ ಪುನರ್ವಸತಿ, ಪರಿಹಾರ ಮತ್ತು ನಷ್ಟಪರಿಹಾರ ಮೊತ್ತದ ಜೊತೆಯುಲ್ಲಿ ಹೆಚ್ಚುವರಿ ಹಂಚತಕ್ಕದ್ದು;

**ವಿವರಣೆ 1:** ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡದ ಒಬ್ಬ ಸದಸ್ಯ, ಅಥವಾ ಕುಟುಂಬ ಅಥವಾ ಯಾವುದೇ ಗುಂಪುಗಳಿಗೆ ಯಾವುದೇ ಸಮಯದಲ್ಲಿ ತಲೆ–ಕ್ಷೌರ, ಬಟ್ಟೆ ತೊಳೆಯುವ, ಅಂಗಡಿಯಲ್ಲಿ ಸಾಮಾನು ಸರಂಜಾಮು ನೀಡುವ, ಸೇವೆಗಳನ್ನು ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರದೇ ಇರುವ ವ್ಯಕ್ತಿ, ವ್ಯಕ್ತಿಗಳ ಗುಂಪು ನಿರಾಕರಿಸಿದರೆ, ಹಾಗೆ ನಿರಾಕರಿಸಿದ ಪ್ರತಿಯೊಬ್ಬರೂ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಸದಸ್ಯರ ಮೇಲೆ ನಿಶೇಧ ಹೇರಿದರೆಂದು ತಿಳಿದುಕೊಳ್ಳುವುದು.

**ವಿವರಣೆ 2:** ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡದ ಒಬ್ಬ ಸದಸ್ಯ ಅಥವಾ ಯಾವುದೇ ಗುಂಪು ಅಥವಾ ಕುಟುಂಬಕ್ಕೆ ವೇತನದ ಉದ್ಯೋಗವನ್ನು ನೀಡಲು ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರದೇ ಇರುವ ವ್ಯಕ್ತಿ, ವ್ಯಕ್ತಿಗಳ ಗುಂಪು ನಿರಾಕರಿಸಿದರೆ, ಪ್ರತಿ ವ್ಯಕ್ತಿಯೂ ಅಂತಹ ಸಮಯದವರೆಗೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವಿರುದ್ಧ ಆರ್ಥಿಕ ಬಹಿಷ್ಕಾರವನ್ನು ಹೇರಿದ್ದಾರೆ ಎಂದೇ ತಿಳಿದುಕೊಳ್ಳುವುದು.

**ವಿವರಣೆ 3:** ಸಾಮಾಜಿಕ ನೈತಿಕ ಬೆದರಿಕೆ ಎಂದರೆ ಸಾಮಾಜಿಕ ಬಹಿಷ್ಕಾರ ಹಾಕುವ ಬೆದರಿಕೆ ಎಂದು ಅರ್ಥ, ಮತ್ತು ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರದೇ ಇರುವ ವ್ಯಕ್ತಿ ಅಥವಾ ವ್ಯಕ್ತಿಗಳು ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದ ಒಬ್ಬ ಸದಸ್ಯನಿಗೆ ತನ್ನ ಹಕ್ಕು ಪ್ರತಿಪಾದಿಸುವುದನ್ನು ತಡೆಯಲು ಅಥವಾ ಸೇಡು ತೀರಿಸಿಕೊಳ್ಳಲು ಅವರ ಯಾವುದೇ ಹಕ್ಕುಗಳನ್ನು ಪ್ರತಿಪಾದಿಸುವುದನ್ನು ತಡೆದರೆ, ಅದು ಸಾಮಾಜಿಕ–ನೈತಿಕಬೆದರಿಕೆಯ ಅಪರಾಧ ಮಾಡಿದಂತೆ ಆಗುತ್ತದೆ.

**ವಿವರಣೆ 4:** ಆರ್ಥಿಕ–ನೈತಿಕಬೆದರಿಕೆ ಎಂದರೆ ಆರ್ಥಿಕ ಬಹಿಷ್ಕಾರದ ಬೆದರಿಕೆ ಮತ್ತು ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರದ ವ್ಯಕ್ತಿ ಅಥವಾ ವ್ಯಕ್ತಿಗಳ ಗುಂಪು ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದ ಒಬ್ಬ ಸದಸ್ಯ ಅಥವಾ ಯಾವುದೇ ಗುಂಪು ಅಥವಾ ಕುಟುಂಬವನ್ನು ತಮ್ಮ ಯಾವುದೇ ಹಕ್ಕುಗಳನ್ನು ಪ್ರತಿಪಾದಿಸಲು ಅಥವಾ ಸೇಡು ತೀರಿಸಿಕೊಳ್ಳುವ ಉದ್ದೇಶದಿಂದ ಹಕ್ಕುಗಳನ್ನು ಪ್ರತಿಪಾದಿಸಲು ತಡೆದರೆ ಅದು ಆರ್ಥಿಕ ನೈತಿಕ ಬೆದರಿಕೆ ಆಗುತ್ತದೆ.

**ಕ್ರಮ ಸಂಖ್ಯೆ: 16**

**ಸೆಕ್ಷನ್: ಅಧ್ಯಾಯ–II, ಕಲಂ 3 (2)(iv B)**

**ಕಾಯ್ದೆಯಲ್ಲಿದ್ದಂತೆ ಪದಗಳು:** *ಹೊಸ ಉಪಬಂಧವನ್ನಾಗಿ ಸೇರಿಸಲು ಪ್ರಸ್ತಾಪಿಸಲಾಗಿದೆ.*

**ತಿದ್ದುಪಡಿಯಾದ ನಂತರದ ಪದಗಳು:** ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದ ಸದಸ್ಯನ ಸ್ಥಿರಾಸ್ತಿ ಅಥವಾ ಚರಾಸ್ತಿಯನ್ನು ಅಥವಾ ಮನೆಯ ಸಾಮಾನು ಸರಂಜಾಮುಗಳು ಅಥವಾ ಆಹಾರ ಧಾನ್ಯಗಳು, ಕೃಷಿ ಉತ್ಪನ್ನಗಳು, ನೀರಾವರಿ ಸೌಲಭ್ಯಗಳನ್ನು ಯಾವುದೇ ರೀತಿಯಲ್ಲಿ ಧ್ವಂಸ ಮಾಡಿದರೆ, ಹಾನಿ ಮಾಡಿದರೆ, ನಷ್ಟ ಮಾಡಿದರೆ, ಅವರಿಗೆ ಶಿಕ್ಷೆ ವಿಧಿಸಬಹುದಾಗಿದ್ದು ಹತ್ತು ವರ್ಷಗಳ ಸೆರೆವಾಸ ಮತ್ತು ಅಪರಾಧದಲ್ಲಿ ಹಾನಿಯಾದಷ್ಟು ಆಸ್ತಿಗೆ ಸಮನಾಗಿ ಅವರ ಆಸ್ತಿಯನ್ನು ಮುಟ್ಟುಗೋಲು ಹಾಕಿ ಈ ಕಾಯ್ದೆಯ ಅಡಿಯಲ್ಲಿ ಬಲಿಯಾದವರಿಗೆ/ ಅವಲಂಬಿತರಿಗೆ ನೀಡುವ ಪುನರ್ವಸತಿ, ಪರಿಹಾರ ಮೊತ್ತ ಮತ್ತು ನಷ್ಟಪರಿಹಾರದ ಜೊತೆ ಹೆಚ್ಚುವರಿ ವಿತರಿಸುವುದು;

ಕ್ರಮ ಸಂಖ್ಯೆ: 17

**ಸೆಕ್ಷನ್: ಅಧ್ಯಾಯ–II, ಕಲಂ 3 (2)(vi B)**

**ಕಾಯ್ದೆಯಲ್ಲಿದ್ದಂತೆ ಪದಗಳು:** *ಹೊಸ ಉಪಬಂಧವನ್ನಾಗಿ ಸೇರಿಸಲು ಪ್ರಸ್ತಾಪಿಸಲಾಗಿದೆ.*

**ತಿದ್ದುಪಡಿಯಾದ ನಂತರದ ಪದಗಳು:** ಈ ಕಾಯ್ದೆಯ ಅಡಿಯಲ್ಲಿ ಅಥವಾ ನಾಗರಿಕ ಹಕ್ಕುಗಳ ರಕ್ಷಣಾ ಕಾಯ್ದೆ 1955ರ ಅಡಿಯಲ್ಲಿ ಸತ್ಯವನ್ನು ತಿರುಚಿ ಯಾವುದೇ ಸುಳ್ಳು ಸಾಕ್ಷಿ ನೀಡಿದರೆ, ಇದರಿಂದಾಗಿ ಒಬ್ಬ ವ್ಯಕ್ತಿಯು ಶಿಕ್ಷೆಗೆ ಒಳಪಟ್ಟರೆ ಅಥವಾ ಅಪರಾಧ ಮಾಡಿದ್ದು ಬಿಡುಗಡೆಯಾದರೆ, ಆ ಅಪರಾಧಕ್ಕೆ ನೀಡಿರುವ ಶಿಕ್ಷೆಯ ಪ್ರಕಾರ ಶಿಕ್ಷಾರ್ಹ.

ಕ್ರಮ ಸಂಖ್ಯೆ: 18

**ಸೆಕ್ಷನ್: ಕಲಂ 3(5)**

**ಕಾಯ್ದೆಯಲ್ಲಿದ್ದಂತೆ ಪದಗಳು:** *ಹೊಸ ಕಲಂ ಆಗಿ ಸೇರಿಸಲು ಪ್ರಸ್ತಾಪಿಸಲಾಗಿದೆ.*

**ತಿದ್ದುಪಡಿಯಾದ ನಂತರದ ಪದಗಳು:**

a ಯಾವುದೇ ಕಾರ್ಯಾಚರಣೆಯಲ್ಲಿ, ಸಾವು ಸಂಭವಿಸಿದರೆ, ಸಾವಿಗೊಳಗಾದ ವ್ಯಕ್ತಿ ಪರಿಶಿಷ್ಟ ಜಾತಿಯ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದವರಾಗಿದ್ದರೆ, ಪೋಲೀಸ್ ಕಸ್ಟಡಿಯಲ್ಲಿ, ಸೆರೆಮನೆಯ ಕಸ್ಟಡಿಯಲ್ಲಿ, ಬಾಲ ನ್ಯಾಯ ಕಾಯ್ದೆಯ ಅಥವಾ ಮತ್ಯಾವುದೇ ಕಾಯ್ದೆಯು ಆಡಳಿತ ನಡೆಸುವ ಬಾಲಗೃಹಗಳಲ್ಲಿ, ಅನೈತಿಕ ಸಾಗಾಟ ತಡೆ ಕಾಯ್ದೆಯ ಅಡಿಯಲ್ಲಿ ಆಡಳಿತಕ್ಕೊಳಪಡುವ ಮಹಿಳಾ ಗೃಹಗಳಲ್ಲಿ, ಮಾನಸಿಕ ಆರೋಗ್ಯ ಕಾಯ್ದೆಯ ಅಡಿಯಲ್ಲಿ ಬರುವ ಎಲ್ಲಾ ಮಾನಸಿಕ ಆರೋಗ್ಯದ ಸಂಸ್ಥೆಗಳಲ್ಲಿ ಮತ್ತು ಅಂತಹ ಇತರೆ ಸಂಸ್ಥೆಗಳಲ್ಲಿ, ವಿಚಾರಣಾಧೀನ ಮತ್ತು ಆರೋಪ ಸಾಬೀತು ಆದ ಖೈದಿಗಳನ್ನು ಉಪಚರಿಸುವ ಸರ್ಕಾರಿ ಆಸ್ಪತ್ರೆಗಳ ವಾರ್ಡ್‌ಗಳಲ್ಲಿ ಸಾವು ಸಂಭವಿಸಿದರೆ ನ್ಯಾಯಾಂಗ ವಿಚಾರಣೆ ಆಗುತ್ತದೆ ಮತ್ತು ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರ ಆಯಾ ಪ್ರಕರಣಕ್ಕೆ ಸಂಬಂಧಿಸಿದಂತೆ ನ್ಯಾಯಾಂಗ ವಿಚಾರಣೆಯನ್ನು ಪ್ರಾರಂಭಿಸಲು ತಕ್ಷಣದ ಕ್ರಮವನ್ನು ಕೈಗೊಳ್ಳಬೇಕು.

b ಇಂತಹ ನ್ಯಾಯಾಂಗ ವಿಚಾರಣೆಯನ್ನು ನಡೆಸಲು ನಿಷ್ಪಕ್ಷಪಾತತನಕ್ಕೆ ಹೆಸರಾಗಿರುವ ಮತ್ತು ಸಾಮಾಜಿಕ ನ್ಯಾಯದ ಕುರಿತು ಸೂಕ್ಷ್ಮತೆ ಇರುವ ಮತ್ತು ವಿಶೇಷವಾಗಿ ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡದ ಜನರ ಕುರಿತಾಗಿ ಕಾಳಜಿ ಇರುವ ಈಗ ಕುಳಿತಿರುವ ಮತ್ತು ನಿವೃತ್ತಿಗೊಂಡ ನ್ಯಾಯಾಧೀಶರ ಒಂದು ತಂಡವನ್ನು ಪ್ರತಿ ರಾಜ್ಯ ಸರ್ಕಾರವು ಅಂತಹ ನೇಮಕಾತಿಯನ್ನು ಕೇಂದ್ರ ಸರ್ಕಾರ/ಭಾರತದ ಮುಖ್ಯ ನ್ಯಾಯಾಧೀಶರ ಸಮಾಲೋಚನೆಯೊಂದಿಗೆ ಮಾಡತಕ್ಕದ್ದು

c. ಈ ವಿಚಾರಣೆಯು ಉಪಬಂಧದಲ್ಲಿ ಸಂಭವಿಸಿದ ಸಾವುಗಳಿಗೆ ಕಾನೂನುಬಾಹಿರ ಕ್ರಮ/ವಿಫಲತೆ/ನಿರ್ಲಕ್ಷ್ಯ ಕಂಡುಬಂದಲ್ಲಿ ಅಂತಹ ವಿಚಾರಗಳನ್ನು ಹಾಗು, ಇತರೆ ವಿಷಯಗಳನ್ನು ಬಯಲಿಗೆಳೆಯಬೇಕು. ಈ ವಿಚಾರಣೆಯ ಮೂಲಕ ಕಂಡು ಹಿಡಿದ ಯಾವುದೇ ಅಂಶಗಳಿಗೆ ಸರ್ಕಾರವು ಬದ್ಧವಾಗಿರಬೇಕು ಮತ್ತು ವಿಚಾರಣೆಯ ಸಂದರ್ಭದಲ್ಲಿ ಸರ್ಕಾರಿ ಸೇವೆಯಲ್ಲಿರುವ ಯಾವುದೇ ವ್ಯಕ್ತಿಯು ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡದ ವ್ಯಕ್ತಿಯ ವಿರುದ್ಧ ಪಾತಕ ಕೃತ್ಯದ ಅಪರಾಧ ಎಸಗಿರುವುದು ಕಂಡು ಬಂದಲ್ಲಿ ಅಥವಾ ಅಂತಹ ಪ್ರಕರಣದಲ್ಲಿ ಉತ್ತೇಜನ/ವಿಫಲತೆ/ನಿರ್ಲಕ್ಷದಿಂದಾಗಿ ಸಾವು ಸಂಭವಿಸಿರುವುದು ಕಂಡು ಬಂದಲ್ಲಿ, ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರ ಅಂತಹ ಸಾರ್ವಜನಿಕ ಸೇವಕನನ್ನು ಕಾಯ್ದೆಯ ನಿಬಂಧನೆಗಳ ಅನುಸಾರ ವಿಚಾರಣೆಗೆ ತರತಕ್ಕದ್ದು.

ಕ್ರಮ ಸಂಖ್ಯೆ: 19

**ಸೆಕ್ಷನ್: ಅಧ್ಯಾಯ–II, ಕಲಂ 4(1)**

**ಕಾಯ್ದೆಯಲ್ಲಿದ್ದಂತೆ ಪದಗಳು:** *ಈ ಉಪಬಂಧವನ್ನು ಕಲಂ 4ರ ಅಡಿಯಲ್ಲಿ ಹೊಸ ಉಪಬಂಧವನ್ನಾಗಿ ಸೇರಿಸಲು ಪ್ರಸ್ತಾಪಿಸಲಾಗಿದೆ.*

**ತಿದ್ದುಪಡಿಯಾದ ನಂತರದ ಪದಗಳು:**

1. ಈ ಕಾಯ್ದೆಯಲ್ಲಿ ಬರುವ ಯಾವುದೇ ಅಪರಾಧಕ್ಕೆ ದುಷ್ಪ್ರೇರಣೆ ನೀಡಿದರೆ, ದುಷ್ಪ್ರೇರಿತ ಕೃತ್ಯಗಳು ಜರುಗಿದ್ದರೆ, ಅಥವಾ;
2. ಈ ಕಾಯ್ದೆಯಲ್ಲಿ ಅಪರಾಧ ಎಸಗುವ ಯೋಜನೆಯಲ್ಲಿ ಯಾರಾದರೂ ಭಾಗಿಯಾಗಿದ್ದರೆ

ಅದು ಶಿಕ್ಷಾರ್ಹ ಮತ್ತು ಅಪರಾಧಕ್ಕೆ ತಿಳಿಸಲಾಗಿರುವ ಶಿಕ್ಷೆಯನ್ನು ವಿಧಿಸಲಾಗುವುದು.

**3. ದೌರ್ಜನ್ಯಕ್ಕೆ ಬಲಿಯಾದವರ ಮತ್ತು ಸಾಕ್ಷಿಗಳ ಹಕ್ಕು (ಇವುಗಳಲ್ಲಿ ಕೆಲವು ದೌರ್ಜನ್ಯ ತಡೆ ನಿಯಮದಲ್ಲಿ ಇದೆ.). ಈ ಹೊಸ ಅಧ್ಯಾಯಕ್ಕೆ IV A ಸಂಖ್ಯೆ ನೀಡಲಾಗಿದೆ ("ದೌರ್ಜನ್ಯಕ್ಕೊಳಗಾದವರು" ಮತ್ತು "ಸಾಕ್ಷಿ"ಯ ವ್ಯಾಖ್ಯಾನವನ್ನು ಹೊರತುಪಡಿಸಿ ಉಳಿದ ಎಲ್ಲವನ್ನೂ ಕಾಯ್ದೆಯ ಕಲಂ–2ರ ವ್ಯಾಖ್ಯಾನದಲ್ಲಿ ಸೇರಿಸಬೇಕು).**

1] **ಸೆಕ್ಷನ್: ಅಧ್ಯಾಯ–II A, ಕಲಂ 16 (1)**

**ಪ್ರಸ್ತಾವಿತ ಪದಗಳು: ಪ್ರಥಮ ಮಾಹಿತಿ ವರದಿಯ ನೋಂದಾವಣೆ–** ದೂರೊಂದನ್ನು ಪೋಲೀಸ್ ಠಾಣೆಯ ಉಸ್ತುವಾರಿ ಅಧಿಕಾರಿಗೆ ಯಾವಾಗ ನೀಡಲಾಗುವುದೋ, ಆತನು ಕಾಯ್ದೆಯ ಸರಿಯಾದ ಕಲಂಗಳ ಅಡಿಯಲ್ಲಿ; ಪ್ರಾಮಾಣಿಕವಾಗಿ ಪ್ರಥಮ ಎಫ್.ಐ.ಆರ್ ದಾಖಲಿಸತಕ್ಕದ್ದು; ಮೌಖಿಕವಾಗಿ ಆತನಿಗೆ ಮಾಹಿತಿ ನೀಡಿದರೆ, ಆತನ ನಿರ್ದೇಶನದ ಮೇರೆಗೆ ಅದನ್ನು ಲಿಖಿತ ರೂಪಕ್ಕೆ ತರಬೇಕು, ಮತ್ತು ಮಾಹಿತಿ ನೀಡಿದವನ ಎದುರು ಓದಬೇಕು, ಮತ್ತು ಲಿಖಿತ ರೂಪದಲ್ಲಾಗಲೀ ಅಥವಾ ಲಿಖಿತ ರೂಪಕ್ಕೆ ತಂದ ಅಂತಹ ಮಾಹಿತಿಯನ್ನು ಕೊಟ್ಟ ವ್ಯಕ್ತಿಯು ಸಹಿ ಮಾಡಿ ಕೊಡಬೇಕು, ಹಾಗೂ ಅದರಲ್ಲಿರುವ ಅಂಶಗಳನ್ನು ಒಂದು ಪುಸ್ತಕದಲ್ಲಿ ಬರೆದು ಪೋಲೀಸ್ ಠಾಣೆಯವರು ಆ ಪುಸ್ತಕವನ್ನು ನಿರ್ವಹಿಸಬೇಕು.

(i). ಒಬ್ಬ ವ್ಯಕ್ತಿಯು ಪಂಚಾಯತ್ ಅಧ್ಯಕ್ಷರ ಮುಂದೆ ಅಥವಾ ಪಂಚಾಯತ್‌ನ ಯಾವುದೇ ಸದಸ್ಯನ ಎದುರು ಸಲ್ಲಿಸಬಹುದು, ಅವನು ಆ ದೂರನ್ನು ಪೋಲೀಸ್ ಠಾಣೆಯ ಉಸ್ತುವಾರಿ ಅಧಿಕಾರಿಗೆ ಹೋಗಿ ನೀಡಬೇಕು ಮತ್ತು ಉಸ್ತುವಾರಿ ಅಧಿಕಾರಿಯು, ಆ ದೂರು ಪಡೆದ ತಕ್ಷಣವೇ ಕಾಯ್ದೆಯ ಸರಿಯಾದ ಕಲಂಗಳಲ್ಲಿ ಎಫ್.ಐ.ಆರ್ ದಾಖಲಿಸಬೇಕು.

(ii) ಯಾವುದೇ ಕಾರಣಗಳಿಗೆ ದೌರ್ಜನ್ಯಕ್ಕೆ ಬಲಿಯಾದವರು ಅಥವಾ ದೂರುದಾರ ದೂರು ನೀಡಲು ತಡ ಮಾಡಿದ್ದರೂ ಪೋಲೀಸ್ ಠಾಣೆಯ ಉಸ್ತುವಾರಿ ಅಧಿಕಾರಿಯು ಕಾಯ್ದೆಯ ಸರಿಯಾದ ಕಲಂಗಳ ಅಡಿಯಲ್ಲಿ ಎಫ್.ಐ.ಆರ್ ದಾಖಲಿಸಬೇಕು.

(iii) ಮೇಲೆ ತಿಳಿಸಿದ ನಿಬಂಧನೆಗಳ ಅಡಿಯಲ್ಲಿ ಆ ರೀತಿಯಲ್ಲಿ ದಾಖಲಿಸಿದ ಎಫ್.ಐ.ಆರ್ ಪ್ರತಿಯೊಂದನ್ನು, ತಕ್ಷಣವೇ ಮಾಹಿತಿ ನೀಡಿದವರಿಗೆ ಅಥವಾ ಬಲಿಯಾದವರಿಗೆ ಅಥವಾ ಅವರಿಗೆ ಸಹಾಯ ಮಾಡಿದ ಸಾಮಾಜಿಕ ಕಾರ್ಯಕರ್ತ/ವಕೀಲರಿಗೆ ನೀಡಬೇಕು.

2] **ಸೆಕ್ಷನ್: ಅಧ್ಯಾಯ–II A, ಕಲಂ 16 (2)**

**ಪ್ರಸ್ತಾವಿತ ಪದಗಳು: ತನಿಖೆ ಮತ್ತು ಆರೋಪ ಪಟ್ಟಿ–**

(i) ರಾಜ್ಯ ಸರ್ಕಾರ/ಡೈರೆಕ್ಟರ್–ಜನರಲ್ ಪೋಲೀಸ್/ಪೋಲೀಸ್ ಸೂಪರಿಂಟೆಡೆಂಟ್‌ರವರಿಂದ ಹಿಂದಿನ ಅನುಭವ ಮತ್ತು ಸಾಮಾಜಿಕ ನ್ಯಾಯದಲ್ಲಿ ಸೂಕ್ಷ್ಮತೆಯನ್ನು ಹಾಗೂ ಪ್ರಕರಣದ ಪರಿಣಾಮವನ್ನು ಎದುರಿಸಬಲ್ಲ ದಕ್ಷತೆಯನ್ನೂ ಪರಿಗಣಿಸಿ ಈ ಕಾಯ್ದೆಯ ಅಡಿಯಲ್ಲಿ ಆದ ಅಪರಾಧವನ್ನು ಈ ಕಾಯ್ದೆಯ ಅಪರಾಧಗಳನ್ನು ತನಿಖೆ ಮಾಡಲೆಂದೇ ಪ್ರತ್ಯೇಕವಾಗಿ ನೇಮಕವಾದ ಡೆಪ್ಯುಟಿ ಸೂಪರಿಂಟೆಂಡೆಂಟ್ ಮಟ್ಟದ ಸ್ಥಾನಕ್ಕಿಂತಲೂ ಕಡಿಮೆ ಇಲ್ಲದ ಪೋಲೀಸ್ ಅಧಿಕಾರಿಯು ತನಿಖೆ ಮಾಡಬೇಕು ಹಾಗೂ ತನಿಖೆಯನ್ನು ಸರಿಯಾದ ಮಾರ್ಗದಲ್ಲಿ ಮೂವತ್ತು ದಿನಗಳ ಒಳಗಾಗಿ ಪೂರ್ಣಗೊಳಿಸಿ ಪ್ರಕರಣವನ್ನು ವಿಚಾರಣೆಗಾಗಿ ಪ್ರಾಮಾಣಿಕವಾಗಿ ನ್ಯಾಯಾಲಯಕ್ಕೆ ಸಲ್ಲಿಸಬೇಕು.

(ii) ತನಿಖಾಧಿಕಾರಿಯು, ಬಲಿಯಾದ ವ್ಯಕ್ತಿ ಮತ್ತು ಸಾಕ್ಷಿಯ ಹೇಳಿಕೆಯನ್ನು ಆದಷ್ಟು ಬೇಗನೇ ಕ್ರಿಮಿನಲ್ ದಂಡ ಸಂಹಿತೆಯ ಕಲಂ 161ರ ಅಡಿಯಲ್ಲಿ ದಾಖಲಿಸಬೇಕು. ಬಲಿಯಾದ ವ್ಯಕ್ತಿ ಅಥವಾ ಸಾಕ್ಷಿಯು ವ್ಯತಿರಿಕ್ತ ಸಾಕ್ಷಿಗಳಾಗಿ ಮಾರ್ಪಟ್ಟರೂ ಸಹ ಹಾಗೆ ದಾಖಲಿಸಲಾದ ಹೇಳಿಕೆಗಳನ್ನು ಧೃಡವಾದ ಸಾಕ್ಷಿ ಎಂದು ಪರಿಗಣಿಸಬೇಕು.

(iii) ಬಲಿಯಾದವರಿಗೆ ನೆರವು ನೀಡುತ್ತಿರುವ ದೂರುದಾರ, ಸಾಕ್ಷಿ ಅಥವಾ ಇನ್ಯಾವುದೇ ವ್ಯಕ್ತಿಯನ್ನು ಮ್ಯಾಜಿಸ್ಟ್ರೇಟರಿಂದ ಬಂಧನದ ಅಪ್ಪಣೆ ಪಡೆಯದೇ ಪೋಲೀಸ್ ಅಧಿಕಾರಿಯು ವಿಚಾರಣೆಗಾಗಲೀ ಅಥವಾ ಇನ್ಯಾವುದೇ ಉದ್ದೇಶಕ್ಕಾಗಿ ಬಂಧಿಸುವಂತಿಲ್ಲ.

(iv) ರಾಜ್ಯ ಸರ್ಕಾರದ ಗೃಹ ಇಲಾಖೆಯ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆಯ ಕಾರ್ಯದರ್ಶಿ, ಪ್ರಾಸಿಕ್ಯೂಷನ್ ನಿರ್ದೇಶಕರು/ರಾಜ್ಯದ ಪ್ರಾಸಿಕ್ಯೂಷನ್ ಉಸ್ತುವಾರಿ ಅಧಿಕಾರಿ, ಡೈರೆಕ್ಟರ್ ಜನರಲ್ ಪೋಲೀಸರು ಪ್ರತಿ ನಾಲ್ಕು ತಿಂಗಳಿಗೊಮ್ಮೆ ತನಿಖಾಧಿಕಾರಿಯು ಮಾಡಿರುವ ತನಿಖೆಗಳ ಪುನರಾವಲೋಕನ ಮಾಡಬೇಕು. ತನಿಖೆಯನ್ನು ಮೂವತ್ತು ದಿನಗಳ ಒಳಗಾಗಿ ಪೂರೈಸಬೇಕು ಎನ್ನುವ ನಿಬಂಧನೆಯನ್ನೂ ಒಳಗೊಂಡಂತೆ ಮೇಲಿನ ಯಾವುದೇ ನಿಬಂಧನೆಗಳನ್ನು ಯಾವುದೇ ಸಂದರ್ಭದಲ್ಲಿ ಪಾಲನೆ ಮಾಡದೇ ಇದ್ದಲ್ಲಿ ತನಿಖಾಧಿಕಾರಿಯ ಮೇಲೆ ಕ್ರಮ ಜರುಗಿಸಬೇಕು ಮತ್ತು ತನಿಖೆಯನ್ನು ಸರಿಯಾಗಿ ಮತ್ತು ಸಮಯಕ್ಕೆ ತನಿಖಾಧಿಕಾರಿಗಳು ಮುಗಿಸುವಂತೆ ಎಲ್ಲಾ ರೀತಿಯ ನಿರ್ದೇಶನಗಳನ್ನು ನೀಡಬೇಕು. ಗೃಹ ಇಲಾಖೆಯ ಕಾರ್ಯದರ್ಶಿಗಳು ಈ ಸಮಿತಿಯ ಅಧ್ಯಕ್ಷರಾಗಿರುತ್ತಾರೆ ಹಾಗೂ ಸಮಾಜ ಕಲ್ಯಾಣ ಇಲಾಖೆಯ ಕಾರ್ಯದರ್ಶಿಗಳು ಸಂಚಾಲಕರಾಗಿರುತ್ತಾರೆ.

3] **ಸೆಕ್ಷನ್: ಅಧ್ಯಾಯ–II A, ಕಲಂ 16 (3)**

**ಪ್ರಸ್ತಾವಿತ ಪದಗಳು: ರಕ್ಷಣೆ**

(i) ಪ್ರಕರಣ ದಾಖಲಾದ ದಿನದಿಂದ ವಿಚಾರಣೆಯು ಪೂರ್ಣಗೊಳ್ಳುವವರೆಗೆ ಬಲಿಯಾದವರ, ದೂರುದಾರರ ಮತ್ತು ಸಾಕ್ಷಿಗಳ ವಿರುದ್ಧ ಯಾವುದೇ ರೀತಿಯ ಕೆಟ್ಟ–ಉಪಚಾರಗಳಿಗೆ, ಹಿಂಸೆ, ಹಿಂಸೆಯ ಬೆದರಿಕೆ ಅಥವಾ ಬೆದರಿಕೆ, ಪ್ರತಿದಾಳಿ ಮತ್ತು ಇತರೆ ಯಾವುದೇ ರೂಪದ ಒತ್ತಡ ಅಥವಾ ಘರ್ಷಣೆಯಿಂದ ಅವರ ರಕ್ಷಣೆಯನ್ನು ಖಚಿತಪಡಿಸಿಕೊಳ್ಳುವ ಕರ್ತವ್ಯ ತನಿಖಾಧಿಕಾರಿಯದ್ದಾಗಿರುತ್ತದೆ. ತನಿಖಾಧಿಕಾರಿಯು ಬಲಿಯಾದವರಿಗೆ ಖಾಸಗಿತನವನ್ನು ಖಚಿತಪಡಿಸಿಕೊಳ್ಳಬೇಕು.

(ii) ಅಗತ್ಯ ಬಿದ್ದಾಗ ತನಿಖಾಧಿಕಾರಿಯು ಬಲಿಯಾದವರಿಗೆ, ದೂರುದಾರರಿಗೆ ಮತ್ತು ಸಾಕ್ಷಿಗಳಿಗೆ ಸರ್ಕಾರಿ ವೆಚ್ಚದಲ್ಲಿ ಜೀವನೋಪಾಯಕ್ಕೆ ಆಧಾರ, ಆಹಾರ, ವೈದ್ಯಕೀಯ ನೆರವು, ಸಾಗಾಟದ ಸೌಲಭ್ಯಗಳನ್ನೂ ಒಳಗೊಂಡಂತೆ ಎಲ್ಲಾ ಸೌಲಭ್ಯಗಳನ್ನು ಕಲ್ಪಿಸಿ ಆಶ್ರಯ ನೀಡುವುದನ್ನು ಖಚಿತಪಡಿಸಿಕೊಳ್ಳಬೇಕು.

(iii) ಬಲಿಯಾದ ವ್ಯಕ್ತಿ, ದೂರುದಾರ ಅಥವಾ ಸಾಕ್ಷಿಗೆ ನೀಡಿರುವ ರಕ್ಷಣೆಯ ಕುರಿತು ತನಿಖಾಧಿಕಾರಿಯು ನ್ಯಾಯಾಲಯಕ್ಕೆ ತಿಳಿಸಬೇಕು.

(iv) ಬಲಿಯಾದವರನ್ನು ಮತ್ತು ಸಾಕ್ಷಿಗಳನ್ನು ಸಂದರ್ಶನ ಮಾಡಲು ಪ್ರತಿವಾದಿ ವಕೀಲರು ಕೋರುವಾಗ ಕಾನೂನು ಪ್ರಕಾರ ಪ್ರತಿಕ್ರಿಯೆಯನ್ನು ಮಾಡುವುದರ ಹೊರತು ಮತ್ತು ಬಲಿಯಾದವರು ಅಥವಾ ಸಾಕ್ಷಿಗಳು ಸಂದರ್ಶನಕ್ಕೆ ಒಳಪಡುತ್ತೇವೆ ಎಂದು ನಿರ್ಧರಿಸಿದರೆ, ಸಂದರ್ಶನದ ಮೇಲೆ ಷರತ್ತುಗಳನ್ನು ವಿಧಿಸುವ ಹಕ್ಕುಗಳು ಹಾಗೂ ಅದನ್ನು ನಿರಾಕರಿಸಬಹುದಾದ ಅವರ ಹಕ್ಕುಗಳ ಕುರಿತು ಅವರಿಗೆ ತಿಳಿಸಬೇಕು.

(v) ಬಲಿಯಾದ ವ್ಯಕ್ತಿಗಳ ಅಥವಾ ಸಾಕ್ಷಿಗಳು ಭಯದಲ್ಲಿ ಇದ್ದಾರೆ ಅಥವಾ ಹೆದರಿದ್ದಾರೆ ಅಥವಾ ಅವರನ್ನು ದೂರು ನೀಡುವುದರಿಂದ ಅಥವಾ ಸಾಕ್ಷಿಗಳಾಗಿ ಹಾಜರಾಗುವುದನ್ನು ತಡೆಯಲಾಗಿದೆ ಎಂಬ ವಿಷಯ ವಿಶೇಷ ನ್ಯಾಯಾಲಯದ ಗಮನಕ್ಕೆ ಯಾವುದೇ ಸಂದರ್ಭದಲ್ಲಿ ಬಂದರೂ ಸಹ ಬಲಿಯಾದ ಅಂತಹ ವ್ಯಕ್ತಿಗಳಿಗೆ ಅಥವಾ ಸಾಕ್ಷಿಗಳಿಗೆ ತಮ್ಮ ಸಾಕ್ಷಿಯನ್ನು ಸುರಕ್ಷತೆಯ ವಾತಾವರಣದಲ್ಲಿ ವೀಡಿಯೋ ಅಥವಾ ಇತರೆ ಸೂಕ್ತ ಸಾಧನದ ಮೂಲಕ ಮಾಹಿತಿ ತಂತ್ರಜ್ಞಾನವನ್ನು ಬಳಸಿ ಸಾಕ್ಷಿ ನೀಡಲು ಅವಕಾಶ ನೀಡಬೇಕು.ಬಲಿಯಾದ ವ್ಯಕ್ತಿಗಳಿಗೆ,

(vi) ದೂರುದಾರರಿಗೆ ಮತ್ತು ಸಾಕ್ಷಿಗಳಿಗೆ ದೂರನ್ನು ಅಥವಾ ಯಾವುದೇ ಸಾಕ್ಷಿಯನ್ನು ನೀಡುವುದನ್ನು ಅಥವಾ ನೀಡಬಹುದು ಎನ್ನುವ ಸಾಕ್ಷಿಯನ್ನು ತಡೆಯಲು ಯಾವುದೇ ವಿಧಾನದ ಘರ್ಷಣೆ ಅಥವಾ ಬೆದರಿಕೆ ಅಥವಾ ಸಾಮಾಜಿಕ ಅಥವಾ ಆರ್ಥಿಕ ಬಹಿಷ್ಕಾರಗಳನ್ನು ಹೇರುವ ಸಂದರ್ಭದಲ್ಲಿ ಅವರಿಗೆ ಪರಿಣಾಮಕಾರಿ ರಕ್ಷಣೆ ನೀಡುವಂತೆ ವಿಶೇಷ ನ್ಯಾಯಾಲಯವು ಅಂತಹ ನಿರ್ದೇಶನಗಳನ್ನು ನೀಡಬೇಕು ಮತ್ತು ಹಾಗೆ ನೀಡಲಾದ ರಕ್ಷಣೆಯು ಸಾಕಾಗುವಷ್ಟು ಮತ್ತು ಪರಿಣಾಮಕಾರಿಯಾಗಿ ಇದೆ ಎನ್ನುವುದನ್ನು ಕಾಲಕಾಲಕ್ಕೆ ಪರಿಶೀಲಿಸಬೇಕು ಮಾಡಬೇಕು.

4. **ಸೆಕ್ಷನ್: ಅಧ್ಯಾಯ–II A, ಕಲಂ 16 (4)**

**ಪ್ರಸ್ತಾವಿತ ಪದಗಳು: ವೈದ್ಯಕೀಯ ಪರೀಕ್ಷೆ ಮತ್ತು ವರದಿಗಳು**

(i) ಬಲಿಯಾದ ವ್ಯಕ್ತಿಯು ಘಟನೆಯನ್ನು ವರದಿ ಮಾಡಿದ ತಕ್ಷಣವೇ ಹತ್ತಿರದ ಸರ್ಕಾರಿ ಆಸ್ಪತ್ರೆ ಅಥವಾ ಹೆಸರುವಾಸಿಯಾದ ಖಾಸಗಿ ಆಸ್ಪತ್ರೆಗೆ ವೈದ್ಯಕೀಯ ಪರೀಕ್ಷೆಗಾಗಿ ಕರೆದೊಯ್ಯಲು ತಕ್ಷಣದ ಕ್ರಮ ಕೈಗೊಳ್ಳುವುದು ಸಂಬಂಧಿತ ಕಾರ್ಯಕಾರಿ ಮ್ಯಾಜಿಸ್ಟ್ರೇಟ್, ತನಿಖಾಧಿಕಾರಿ ಅಥವಾ SHOಗಳ ಕರ್ತ್ಯವ್ಯ ಆಗಿರುತ್ತದೆ. ಈ ಕರ್ತವ್ಯವನ್ನು ನಿಭಾಯಿಸುವುದರಲ್ಲಿ ವಿಫಲವಾದರೆ ಕನಿಷ್ಠ ಎರಡು ವರ್ಷಗಳ ಹಾಗೂ ಗರಿಷ್ಠ ಏಳು ವರ್ಷಗಳ ಶಿಕ್ಷೆಯನ್ನು ಅನುಭವಿಸಬೇಕಿರುತ್ತದೆ.

(ii) ಲೈಂಗಿಕ ಹಿಂಸೆ, ಅತ್ಯಾಚಾರ, ಸಾಮೂಹಿಕ ಅತ್ಯಾಚಾರ, ಕೊಲೆ, ಗಾಯ, ತೀವ್ರ ಗಾಯ ಇನ್ಯಾವುದೇ ದೌರ್ಜನ್ಯ ಅಥವಾ ನಿರ್ಲಕ್ಷದಿಂದ ಉದ್ಭವಿಸುವ ಅಪರಾಧ ಪ್ರಕರಣಗಳಿಗೆ ಸಂಬಂಧಿಸಿದಂತೆ ವೈದ್ಯಕೀಯ ಮಂಡಳಿಯೊಂದನ್ನು ನೇಮಕ ಮಾಡುವುದು ಜಿಲ್ಲಾ ಕಲೆಕ್ಟರ್/ಜಿಲ್ಲಾ ಆಯುಕ್ತರು/ ಜಿಲ್ಲಾ ಕಲೆಕ್ಟರ್ ಮತ್ತು ಜಿಲ್ಲಾ ನ್ಯಾಯಾಧೀಶ ಅಥವಾ ಅವರಿಂದ ನಿಯೋಜಿತಗೊಂಡ ಅಧಿಕಾರಿಯ ಕರ್ತವ್ಯ ಆಗಿರುತ್ತದೆ.

(iii) ವೈದ್ಯಕೀಯ ಮಂಡಳಿ/ವೈದ್ಯಕೀಯ ಅಧಿಕಾರಿ, ವೈದ್ಯಕೀಯ ಪರಿಶೀಲನೆಯ ವರದಿ, ವಿಧಿವಿಜ್ಞಾನ ಪರೀಕ್ಷೆ ವರದಿ, ಮರಣೋತ್ತರ ಪರೀಕ್ಷೆ ವರದಿ ಅಥವಾ ಯಾವುದೇ ವೈದ್ಯಕೀಯ–ಕಾನೂನು ದಾಖಲೆಯ ಪ್ರತಿಯೊಂದನ್ನು ಬಲಿಯಾದ ವ್ಯಕ್ತಿಗೆ ಅಥವಾ ಆತನಿಗೆ ನೆರವಾಗುತ್ತಿರುವ ಆತನ ಪ್ರತಿನಿಧಿ ಅಥವಾ ವಕೀಲರು ಅಥವಾ ಸಾಮಾಜಿಕ ಕಾರ್ಯಕತರಿಗೆ ವೈದ್ಯಕೀಯ ಪರೀಕ್ಷೆ ಆದ ಎರಡು ದಿನಗಳ ಒಳಗಾಗಿ ನೀಡಬೇಕು.

(iv) ಮರಣೋತ್ತರ ಪರೀಕ್ಷೆಯ ಪ್ರಕ್ರಿಯೆಯನ್ನು ವೀಡಿಯೋ ಚಿತ್ರೀಕರಣ ಮಾಡಬೇಕು. ಮರಣೋತ್ತರ ಮಾಡುವ ಸಂದರ್ಭದಲ್ಲಿ ಬಲಿಯಾದ ವ್ಯಕ್ತಿಯ ಕುಟುಂಬದ ಸದಸ್ಯ ಅಥವಾ ಆತನ/ಆಕೆಯ ಪ್ರತಿನಿಧಿ ಅಥವಾ ಬಲಿಯಾದ ವ್ಯಕ್ತಿಗೆ ನೆರವಾಗುತ್ತಿರುವ ನಾಗರಿಕ ಸಮಾಜ ಸಂಸ್ಥೆಯ ಪ್ರತಿನಿಧಿಗೆ ಹಾಜರು ಇರಲು ಹಕ್ಕು ಇರುತ್ತದೆ.

(v) ಮರಣೋತ್ತರಕ್ಕೆ ಸಂಬಂಧಿಸಿದಂತೆ ಯಾವುದೇ ವಿವಾದ ಇದ್ದಲ್ಲಿ, ಬಲಿಯಾದ ವ್ಯಕ್ತಿಯ ಕುಟುಂಬದ ಸದಸ್ಯನೊಬ್ಬನು ಅಥವಾ ಆತನ/ ಆಕೆಯ ಪ್ರತಿನಿಧಿ ಅಥವಾ ಬಲಿಯಾದ ವ್ಯಕ್ತಿಗೆ ನೆರವಾಗುತ್ತಿರುವ ನಾಗರಿಕ ಸಮಾಜ ಸಂಸ್ಥೆಯ ಪ್ರತಿನಿಧಿ ಅಥವಾ ಒಬ್ಬ ವಕೀಲ ಅಥವಾ ಬಲಿಯಾದ ವ್ಯಕ್ತಿಗೆ ನೆರವಾಗುತ್ತಿರುವ ಸಾಮಾಜಿಕ ಕಾರ್ಯಕರ್ತನಿಗೆ ವಿಶೇಷ ನ್ಯಾಯಾಲಯಕ್ಕೆ ಅಪೀಲು ಸಲ್ಲಿಸುವ ಹಕ್ಕು ಇರುತ್ತದೆ ಮತ್ತು ಹಾಗೆ ಸಲ್ಲಿಸಿದ ಮನವಿಯನ್ನು ಪರಿಗಣಿಸಿ 2 ದಿನಗಳ ಒಳಗಾಗಿ, ಮನವಿದಾರನಿಗೆ ಮಾಹಿತಿ ನೀಡುವ ಮೂಲಕ ಮರಣೋತ್ತರ ಪರೀಕ್ಷೆಯ ಕುರಿತು ಸೂಕ್ತ ನಿರ್ದೇಶನವನ್ನು ನೀಡುವುದರ ಜೊತೆಗೆ ನಿರ್ಧರಿಸಬೇಕು.

5] **ಸೆಕ್ಷನ್: ಅಧ್ಯಾಯ–II A, ಕಲಂ 16 (5)**

**ಪ್ರಸ್ತಾವಿತ ಪದಗಳು: ವಿಚಾರಣೆ**

(i) ಬಲಿಯಾದ ವ್ಯಕ್ತಿಗೆ ತನಗೆ ದೊರೆಯುವ ನಷ್ಟಪರಿಹಾರ, ಪ್ರಯಾಣ ಭತ್ಯೆಯ ಹಕ್ಕುಗಳನ್ನು ಒಳಗೊಂಡಂತೆ ನ್ಯಾಯಾಲಯದಲ್ಲಿ ವಿಚಾರಣೆಗೆ ನಿಗದಿಯಾದ ದಿನಾಂಕ, ನ್ಯಾಯಾಲಯ ಕುಳಿತುಕೊಳ್ಳುವ ಸ್ಥಳ, ವಿಳಂಬ ಅಥವಾ ವಿಚಾರಣೆಯ ಮುಂದೂಡಿಕೆಯನ್ನು ತಿಳಿಸುವ ಹಕ್ಕು ಇರುತ್ತದೆ.

(ii) ಪ್ರತ್ಯೇಕ ಕಾಯುವ ಕೊಠಡಿಯನ್ನೂ ಒಳಗೊಂಡಂತೆ, ಎಲ್ಲೆಲ್ಲಿ ಅಗತ್ಯವಿದೆಯೋ ಅಲ್ಲಿ ಬಲಿಯಾದ ವ್ಯಕ್ತಿಗಳಿಗೆ ಮತ್ತು ಸಾಕ್ಷಿಗಳಿಗೆ ಯಾವುದೇ ರೀತಿಯ ಬೆದರಿಕೆಯಿಂದ ರಕ್ಷಣೆಯನ್ನು ಹಾಗೂ ಖಾಸಗಿತನವನ್ನು ನ್ಯಾಯಾಲಯದ ಸ್ಥಳದಲ್ಲಿಯೇ ಕಲ್ಪಿಸಿಕೊಡಬೇಕು.

(iii) ಬಲಿಯಾದ ವ್ಯಕ್ತಿಯ ವೈಯಕ್ತಿಕ ಹಿತಾಸಕ್ತಿಗಳಿಗೆ ಪರಿಣಾಮ ಬೀರುವ ಆರೋಪಿಯ ಕುರಿತು ಯಾವುದೇ ರೀತಿಯ ಪೂರ್ವಾಗ್ರಹಪೀಡಿತ ಭಾವನೆ ಇಲ್ಲದೆ ರಾಷ್ಟ್ರೀಯ ಕ್ರಿಮಿನಲ್ ನ್ಯಾಯ ವ್ಯವಸ್ಥೆಗೆ ಸರಿಹೊಂದುವಂತೆ ಅಭಿಪ್ರಾಯ ಮತ್ತು ಕಾಳಜಿಯನ್ನು ಪ್ರಕ್ರಿಯೆಗಳ ಸೂಕ್ತ ಹಂತಗಳಲ್ಲಿ ತಿಳಿಸಲು ಅವಕಾಶ ನೀಡಬೇಕು.

(iv) ಅರ್ಹ ಪ್ರಾಧಿಕಾರವು ಪ್ರಾಸಿಕ್ಯೂಟ್ ಮಾಡುವುದಿಲ್ಲ ಎಂಬ ತೀರ್ಮಾನವನ್ನು ಕೈಗೊಂಡರೆ, ಆ ನಿರ್ಧಾರವನ್ನು ಮರುಪರಿಶೀಲಿಸಲು ಅಥವಾ ಖಾಸಗಿ ಪ್ರಾಸಿಕ್ಯೂಷನ್ ತರಲು ಬಲಿಯಾದ ವ್ಯಕ್ತಿಗಳಿಗೆ ಹಕ್ಕು ಇರಬೇಕು.

(v) ನ್ಯಾಯಾಲಯವು ವಿಚಾರಣೆಯನ್ನು ಮುಂದೂಡುವ ಕೋರಿಕೆಯನ್ನು ಪರಿಗಣಿಸಿದಾಗ ಬಲಿಯಾದ ವ್ಯಕ್ತಿಗಳಿಗೆ ತಮ್ಮ ಹಿತಾಸಕ್ತಿಯನ್ನು ಪರಿಗಣಿಸುವಂತೆ ಕೋರಲು ಹಕ್ಕು ಇರುತ್ತದೆ, ದೌರ್ಜನ್ಯವು ಬಲಿಯಾದ ವ್ಯಕ್ತಿಯ ಮೇಲೆ ಯಾವ ರೀತಿಯಲ್ಲಿ ಆರ್ಥಿಕ, ದೈಹಿಕ ಮತ್ತು ಮಾನಸಿಕ ಪರಿಣಾಮ ಬೀರುತ್ತದೆ ಎಂದು ಲಿಖಿತ ಅಥವಾ ಮೌಖಿಕ ಹೇಳಿಕೆಯನ್ನು ನೀಡಬಹುದು ಈ ಹೇಳಿಕೆಯನ್ನು ಶಿಕ್ಷೆ ವಿಧಿಸುವಾಗ ಪರಿಗಣಿಸಲಾಗುವುದು.

(vi) ಅಪರಾಧಿಯು ಪೆರೋಲ್ ಮನವಿಯನ್ನು ನೀಡಿದರೆ, ಅಪರಾಧಿಗೆ ಇರುವ ಪೆರೋಲ್ ಅರ್ಹತೆ ಕುರಿತು ಬಲಿಯಾದ ವ್ಯಕ್ತಿಗಳಿಗೆ ಸೂಚನೆ ನೀಡಬೇಕು ಮತ್ತು ಪೆರೋಲ್ ನಿರ್ಧಾರದಲ್ಲಿ ಅವರ ಅಭಿಪ್ರಾಯವನ್ನು ಪರಿಗಣಿಸಬೇಕು. ಮುಂದೆ ರಾಜ್ಯಪಾಲರಿಗೆ ಶಿಕ್ಷೆಯ ಮನ್ನಣೆಗೆ ಅರ್ಜಿ ಹಾಕಿದರೆ ಬಲಿಯಾದ ವ್ಯಕ್ತಿಗಳಿಗೆ ಸೂಚನೆ ಕಳುಹಿಸಬೇಕು ಹಾಗೂ ಶಿಕ್ಷೆಯ ಮನ್ನಣೆ ಅರ್ಜಿಯಲ್ಲಿ ಲಿಖಿತ ಹೇಳಿಕೆ ಪಡೆದುಕೊಳ್ಳಬೇಕು.

**6] ಸೆಕ್ಷನ್: ಅಧ್ಯಾಯ–II A, ಕಲಂ 16 (6)**

**ಪ್ರಸ್ತಾವಿತ ಪದಗಳು: ಪರಿಹಾರ, ನಷ್ಟಪರಿಹಾರ ಮತ್ತು ಪುನರ್ವಸತಿ**

(i) 1973ರ ಹಾಗೂ ಕಾಲಕಾಲಕ್ಕೆ ತಿದ್ದುಪಡಿಗೊಂಡ ಕ್ರಿಮಿನಲ್ ದಂಡ ಸಂಹಿತೆಯ ಕಲಂ 357ಎ ಬದಿಗಿಟ್ಟು ದೌರ್ಜನ್ಯಕ್ಕೆ ಬಲಿಯಾದ ವ್ಯಕ್ತಿಗೆ ದೌರ್ಜನ್ಯದ ಪರಿಣಾಮವಾಗಿ ದೈಹಿಕ ಮತ್ತು ಮಾನಸಿಕ ಹಾನಿಗೆ ಸರ್ಕಾರಿ ವೆಚ್ಚದಲ್ಲಿ ನೆರವನ್ನು ಒಳಗೊಂಡಂತೆ ನ್ಯಾಯ ಸಮ್ಮತ ಮತ್ತು ಸಾಕಷ್ಟು ಪರಿಹಾರ, ನಷ್ಟಪರಿಹಾರ ಮತ್ತು ಪುನರ್ವಸತಿಯ ಹಕ್ಕು ಇರುತ್ತದೆ.

(ii) ಜಿಲ್ಲಾ ನ್ಯಾಯಾಧೀಶರು ಅಥವಾ ಉಪ–ವಿಭಾಗೀಯ ನ್ಯಾಯಾಧೀಶರು ಅಥವಾ ಇನ್ಯಾವುದೇ ಕಾರ್ಯಾಕಾರಿ ನ್ಯಾಯಾಧೀಶರು ದೌರ್ಜನ್ಯಕ್ಕೆ ಬಲಿಯಾದ ವ್ಯಕ್ತಿಗಳಿಗೆ, ಅವರ ಕುಟುಂಬಕ್ಕೆ ಮತ್ತು ಅವಲಂಬಿತರಿಗೆ ಈ ನಿಯಮಗಳಲ್ಲಿ ಅನುಬಂಧಿಸಲಾಗಿರುವ ಮಿತಿಗೆ ಕಡಿಮೆ ಇಲ್ಲದಂತೆ ತಕ್ಷಣದ ಪರಿಹಾರವನ್ನು ನಗದು ಅಥವಾ ಇತರೆ ರೂಪದಲ್ಲಿ 24 ಘಂಟೆಯ ಒಳಗಾಗಿ ದೊರೆಯುವಂತೆ ವ್ಯವಸ್ಥೆ ಮಾಡಬೇಕು (ಅನುಬಂಧ–IIನ್ನು ಓದಿಕೊಂಡು ಅನುಬಂಧ–I ರಂತೆ). ಅಂತಹ ತಕ್ಷಣದ ಪರಿಹಾರವು ಆಹಾರ, ನೀರು, ಬಟ್ಟೆ, ಆಶ್ರಯ, ವೈದ್ಯಕೀಯ ನೆರವು, ಹಲವಾರು ಪ್ರಾಧಿಕಾರಗಳನ್ನು ಭೇಟಿ ಮಾಡಲು ಪ್ರಯಾಣ ಸೌಲಭ್ಯ ಅಥವಾ ಬಲಿಯಾದ ವ್ಯಕ್ತಿ ಮತ್ತು ಸಾಕ್ಷಿಗಳಿಗೆ ಸಂಪೂರ್ಣ ಹಣದ ಮರುಪಾವತಿ ಒಳಗೊಂಡಿರಬೇಕು ಮತ್ತು ಮನುಷ್ಯರಿಗೆ ಅತ್ಯಗತ್ಯ ವಸ್ತುಗಳು.

(iii) ಮರಣ, ಅಥವಾ ಅತ್ಯಾಚಾರ, ಅಥವಾ ಸಾಮೂಹಿಕ ಅತ್ಯಾಚಾರ, ಅಥವಾ ಆಸ್ತಿಗೆ ಹಾನಿ, ಅಥವಾ ನಷ್ಟದ ಸಂದರ್ಭದಲ್ಲಿ ದೌರ್ಜನ್ಯಕ್ಕೆ ಬಲಿಯಾದ ವ್ಯಕ್ತಿಗೆ ಅಥವಾ ಅವನ ಅವಲಂಬಿತರಿಗೆ ನೀಡುವ ಪರಿಹಾರವು, ಸಧ್ಯಕ್ಕೆ ಚಾಲ್ತಿಯಲ್ಲಿರುವ ಯಾವುದೇ ಕಾನೂನಿನ ಅಡಿಯಲ್ಲಿ ನಷ್ಟಪರಿಹಾರ ಕೇಳುವ ಹಕ್ಕುಗಳ ಜೊತೆ ಹೆಚ್ಚುವರಿ ಪರಿಹಾರವಾಗಿರಬೇಕು.

(iv) ಒಂದು ಗ್ರಾಮದಲ್ಲಿ ಅಥವಾ ನಗರ ಪ್ರದೇಶದಲ್ಲಿ, ದೌರ್ಜನ್ಯದ ಘಟನೆ ಆದಾಗ ಬಲಿಯಾದ ವ್ಯಕ್ತಿಗಳ, ದೂರುದಾರರ, ಸಾಕ್ಷಿಗಳ ಘರ್ಷಣೆ ತಡೆಯುವ ಒಂದು ಕ್ರಮವಾಗಿ ಸಂಬಂಧಿತ ಜಿಲ್ಲಾ ಕಲೆಕ್ಟರ್/ಜಿಲ್ಲಾಧಿಕಾರಿ/ ಜಿಲ್ಲಾ ಕಲೆಕ್ಟರ್ ಮತ್ತು ಜಿಲ್ಲಾ ಮ್ಯಾಜಿಸ್ಟ್ರೇಟ್ ತಕ್ಷಣವೇ ಗ್ರಾಮದಲ್ಲಿ ಮಹಾತ್ಮಗಾಂಧಿ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಅಡಿಯಲ್ಲಿ ಕಾಮಗಾರಿಗಳನ್ನು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಸದಸ್ಯರುಗಳಿಗಾಗಿ ಕೈಗೊಳ್ಳಬೇಕು ಹಾಗೂ ನಗರಪ್ರದೇಶದಲ್ಲಿಯೂ ಸಹ ಇದೇ ರೀತಿಯ ಕಾಮಗಾರಿಗಳನ್ನು ಕೈಗೊಳ್ಳಬೇಕು.

(v) ಅಂತಹ ಎಲ್ಲಾ ಕಾಮಗಾರಿಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ನೇರ ಆರ್ಥಿಕ, ಶೈಕ್ಷಣಿಕ ಅಥವಾ ಸಾಮಾಜಿಕ ಪ್ರಯೋಜನಗಳಾಗಬೇಕು, ಪ್ರಕರಣಗಳ ಅಗತ್ಯಕ್ಕೆ ತಕ್ಕಂತೆ ಅವರ ಭೂಮಿಯಲ್ಲಿ ತೆರೆದ ಬಾವಿ/ಕೊಳವೆ ಬಾವಿ, ಅವರ ಮನೆ ನಿರ್ಮಾಣ, ಮತ್ತು ಅವರಿಗೆ ಅಗತ್ಯವಿರುವ ಕೂಡು ರಸ್ತೆಗಳು, ಅವರ ವಾಸ್ತವ್ಯಕ್ಕಾಗಿ ರಸ್ತೆಗಳ ಮತ್ತು ಚರಂಡಿಗಳ ಅಭಿವೃದ್ಧಿ ಮತ್ತು ಇತರೆ ಅಗತ್ಯ ಸೌಲಭ್ಯಗಳು, ವಾಸ್ತವ್ಯ ಇರುವ ಸ್ಥಳಗಳಲ್ಲಿ ಅಧ್ಯಯನ ಕೇಂದ್ರಗಳ ನಿರ್ಮಾಣ.

(vi) ಈ ಕಾಯ್ದೆಯಲ್ಲಿ ಆಗಿರುವ ಅಪರಾಧಗಳಲ್ಲಿ; ತನಿಖಾಧಿಕಾರಿ, ಪೋಲೀಸ್ ಸೂಪರಿಂಟೆಂಡೆಂಟ್/ಡೆಪ್ಯುಟಿ ಪೋಲೀಸ್ ಸೂಪರಿಂಟೆಂಡೆಂಟ್, ಜಿಲ್ಲಾ ಮ್ಯಾಜಿಸ್ಟ್ರೇಟ್ ಅಥವಾ ಇನ್ಯಾವುದೇ ಕಾರ್ಯನಿರ್ವಾಹಕ ಮ್ಯಾಜಿಸ್ಟ್ರೇಟ್‌ರವರನ್ನು ವಿಚಾರಣೆಯ ಆಲಿಕೆಗಾಗಿ ಬಲಿಯಾದ ವ್ಯಕ್ತಿಯು ಮತ್ತು ಸಾಕ್ಷಿಗಳು ಹೋಗುವಾಗ ಅಗತ್ಯವಿರುವ ಪ್ರಯಾಣದ ಸೌಲಭ್ಯ ಅಥವಾ ಪ್ರಯಾಣಕ್ಕೆ ಆದ ಖರ್ಚಿನ ಸಂಪೂರ್ಣ ಮರುಪಾವತಿ ಮಾಡಲು ಅಗತ್ಯ ಕ್ರಮಗಳನ್ನು ಜಿಲ್ಲಾ ಮ್ಯಾಜಿಸ್ಟ್ರೇಟ್ ಅಥವಾ ಉಪ–ವಿಭಾಗೀಯ ಮ್ಯಾಜಿಸ್ಟ್ರೇಟ್ ಅಥವಾ ಇನ್ಯಾವುದೇ ಕಾರ್ಯನಿರ್ವಾಹಕ ಮ್ಯಾಜಿಸ್ಟ್ರೇಟ್ ಮಾಡತಕ್ಕದ್ದು.

(vii) ದೌರ್ಜನ್ಯಕ್ಕೆ ಬಲಿಯಾದ ವ್ಯಕ್ತಿಗಳಿಗೆ ಮತ್ತು ಅವರ ಕುಟುಂಬದವರಿಗೆ ಆರ್ಥಿಕವಾಗಿ ಸ್ವತಂತ್ರರಾಗಲು, ಯಾವುದೇ ವೇತನದ ಉದ್ಯೋಗ ಅರಸದೇ ಇರುವಂತಾಗಲು, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನರಿಗೆ ಆ ಗ್ರಾಮದಲ್ಲಿ ಭೂಮಿಯನ್ನು ವಿತರಿಸುವುದು ಮತ್ತು ನೀರಾವರಿಯನ್ನೂ ಒಳಗೊಂಡಂತೆ ಅಂತಹ ಭೂಮಿಯ ಅಭಿವೃದ್ಧಿಯನ್ನು ಕೈಗೊಳ್ಳುವುದನ್ನೂ ಒಳಗೊಂಡಂತೆ ರಾಜ್ಯ ಸರ್ಕಾರವು ಸಂಪೂರ್ಣ ಹಣಕಾಸು ಬೆಂಬಲ ನೀಡುವುದನ್ನು ಖಚಿತಪಡಿಸಿಕೊಳ್ಳಬೇಕು ಹಾಗೂ ಅಂತಹ ಬಲಿಯಾದ ವ್ಯಕ್ತಿಗಳ/ಕುಟುಂಬಗಳಿಗೆ ಸೇರಿದ ಮಕ್ಕಳ ಶಿಕ್ಷಣದ ಜವಾಬ್ದಾರಿಯನ್ನು ಅವರ ಆಯ್ಕೆಯ ಮೇರೆಗೆ ಆ ರಾಜ್ಯದಲ್ಲಿರುವ ಅತ್ಯುತ್ತಮ ಶಾಲಾ ಮತ್ತು ಕಾಲೇಜುಗಳಲ್ಲಿ, ಅವರ ಆಹಾರ ಮತ್ತು ನಿರ್ವಹಣೆಯ ವೆಚ್ಚಗಳನ್ನೂ ಒಳಗೊಂಡಂತೆ ರಾಜ್ಯ ಸರ್ಕಾರವು ಜವಾಬ್ದಾರಿ ಹೊತ್ತುಕೊಳ್ಳಬೇಕು.

(viii) ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡದವರ ಮೇಲೆ ಜಂಟಿಯಾಗಿ ಆಕ್ರಮಣಗಳು ನಡೆದ ಪ್ರಕರಣಗಳಲ್ಲಿ ರಾಜ್ಯವು ತಕ್ಷಣವೇ ಸಂಪೂರ್ಣ ಹಣಕಾಸು ನೆರವು ನೀಡಬೇಕು ಮತ್ತು ಇತರೆ ನೆರವು ನೀಡುವ ಕ್ರಮಗಳನ್ನು ಕೈಗೊಳ್ಳಬೇಕು ಹಾಗೂ ಆ ಗ್ರಾಮದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಕುಟುಂಬಗಳು ಆರ್ಥಿಕವಾಗಿ ಸ್ವತಂತ್ರರಾಗುವಂತೆ, ಯಾವುದೇ ಸದಸ್ಯರು ವೇತನದ ಉದ್ಯೋಗ ಅರಸದಂತೆ ಮತ್ತು ಪರಿಶಿಷ್ಟ ಜಾತಿಯ ಮತ್ತು ಪರಿಶಿಷ್ಟ ಪಂಗಡದವರ ಮಕ್ಕಳ ಶಿಕ್ಷಣವನ್ನು ಮೇಲೆ ಉಪಬಂಧ (vi)ರಲ್ಲಿ ತಿಳಿಸಿದ ರೀತಿಯಲ್ಲಿ ಜವಾಬ್ದಾರಿಯನ್ನು ರಾಜ್ಯವು ತೆಗೆದುಕೊಳ್ಳಬೇಕು.

(ix) ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಲ್ಲಿ ಅತ್ಯಾಚಾರಕ್ಕೆ ಬಲಿಯಾದ ಪ್ರತಿ ವ್ಯಕ್ತಿಗೆ ಮತ್ತು ಪ್ರತಿ ಕೊಲೆ ಪ್ರಕರಣಗಳಲ್ಲಿ ಬಲಿಯಾದ ಕುಟುಂಬದ ಸದಸ್ಯರೊಬ್ಬರಿಗೆ ಇನ್ನುಮುಂದೆ ಶಾಶ್ವತ ಸರ್ಕಾರಿ/ಅರೆ–ಸರ್ಕಾರಿ ನೌಕರಿಯನ್ನು, ಆತನ/ಆಕೆಯ ಶಿಕ್ಷಣದ ಮಟ್ಟಕ್ಕೆ ಅತ್ಯುನ್ನತ ಹುದ್ದೆ ನೀಡಬೇಕು, ಅವನಿಗೆ/ಅವಳಿಗೆ ಯಾವುದೇ ವಿದ್ಯಾಭ್ಯಾಸ ಇಲ್ಲದಿದ್ದರೆ ಅವನ/ಅವಳ ಆಯ್ಕೆಯ ಮೇರೆಗೆ ಗ್ರೂಪ್ ಡಿ/ಪಂಗಡ–4ರ

ಹುದ್ದೆಯನ್ನು ಮಂತ್ರಾಲಯ/ಇಲಾಖೆ/ಸಾರ್ವಜನಿಕ ಹಣಕಾಸು ಸಂಸ್ಥೆಗಳು/ಇತರೆ ಸಾರ್ವಜನಿಕ ಕ್ಷೇತ್ರದ ಸಂಸ್ಥೆಗಳಲ್ಲಿ ನೀಡಬೇಕು. ಹುದ್ದೆ ಖಾಲಿ ಇಲ್ಲದ ಪಕ್ಷ, ಅವನನ್ನು/ಅವಳನ್ನು ನೇಮಕ ಮಾಡಿಕೊಳ್ಳಲೆಂದೇ ಹೆಚ್ಚುವರಿ ಹುದ್ದೆಯು ಸೃಷ್ಟಿಯಾಗಿದೆ ಎಂದು ಪರಿಗಣಿಸುವುದು. ದೌರ್ಜನ್ಯ ಜರುಗಿದ ದಿನದಿಂದಲೇ ಅಂತಹ ಕಡ್ಡಾಯ ನೇಮಕ ಮಾಡಿಕೊಳ್ಳಲು ರಾಜ್ಯ ಸರ್ಕಾರವು ಜಿಲ್ಲಾ ಕಲೆಕ್ಟರ್/ ಇಲಾಖೆಯ ಮುಖ್ಯಸ್ಥರು/ಸಾರ್ವಜನಿಕ ಹಣಕಾಸು ಸಂಸ್ಥೆಗಳ ಮುಖ್ಯಸ್ಥರು/ಸಾರ್ವಜನಿಕ ಕ್ಷೇತ್ರ ಸಂಸ್ಥೆಗಳ ಮುಖ್ಯಸ್ಥರುಗಳಿಗೆ ತಕ್ಷಣವೇ ಅಧಿಕಾರ ನಿಯೋಜನೆ ಮಾಡಬೇಕು.

(x) ಜಿಲ್ಲಾ ಮ್ಯಾಜಿಸ್ಟ್ರೇಟ್ ಅಥವಾ ಉಪ-ವಿಭಾಗೀಯ ಮ್ಯಾಜಿಸ್ಟ್ರೇಟ್ ಅಥವಾ ಕಾರ್ಯನಿರ್ವಾಹಕ ಮ್ಯಾಜಿಸ್ಟ್ರೇಟ್ ಅಥವಾ ಸೂಪರಿಂಟೆಂಡೆಂಟ್ ಪೋಲೀಸರು ಒದಗಿಸಿದ ಪರಿಹಾರ ಮತ್ತು ಪುನರ್ವಸತಿ ಸೌಲಭ್ಯಗಳ ವರದಿಯನ್ನು ವಿಶೇಷ ನ್ಯಾಯಾಲಯಕ್ಕೆ ಕಳುಹಿಸಬೇಕು. ಬಲಿಯಾದ ವ್ಯಕ್ತಿಗೆ ಅಥವಾ ಅವನ/ಅವಳ ಅವಲಂಬಿತರಿಗೆ ನೀಡಿರುವ ಪರಿಹಾರ ಮೊತ್ತ ಮತ್ತು ನಷ್ಟಪರಿಹಾರ ಸಾಕಾಗಲಿಲ್ಲ ಎಂದು ವಿಶೇಷ ನ್ಯಾಯಾಲಯಕ್ಕೆ ಮನವರಿಕೆಯಾದರೆ, ಪೂರ್ಣ ಪಾವತಿ ಅಥವಾ ಭಾಗಶ: ಪರಿಹಾರ ಪಾವತಿ ಮತ್ತು ಇತರೆ ರೀತಿಯ ಸಹಾಯವನ್ನು ನೀಡಲು ಆದೇಶ ಮಾಡುವುದು.

(xi) ಗ್ರಾಮದಲ್ಲಿ ಅಥವಾ ಪಟ್ಟಣಗಳಲ್ಲಿ ದೌರ್ಜನ್ಯ ಎಲ್ಲಿ ಆಗಿದೆಯೋ ಅಂತಹ ಸ್ಥಳಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಲಾಭವಾಗುವಂತಹ ಭಾರತ್ ನಿರ್ಮಾಣ್ ಮತ್ತು ಪ್ರಧಾನ ಮಂತ್ರಿ ಗ್ರಾಮ್ ಸಡಕ್ ಯೋಜನೆ ಒಳಗೊಂಡಂತೆ ಇತರೆ ಅಭಿವೃದ್ಧಿ ಕಾರ್ಯಕ್ರಮಗಳನ್ನು ಜಿಲ್ಲಾ ಕಲೆಕ್ಟರ್/ಜಿಲ್ಲಾಧಿಕಾರಿ/ಜಿಲ್ಲಾ ಕಲೆಕ್ಟರ್ ಮತ್ತು ಜಿಲ್ಲಾ ಮ್ಯಾಜಿಸ್ಟ್ರೇಟ್ ಹಮ್ಮಿಕೊಳ್ಳತಕ್ಕದ್ದು.

7] **ಸೆಕ್ಷನ್: ಅಧ್ಯಾಯ-II A, Sec. 16 (6)**

**ತಿದ್ದುಪಡಿಯಾದ ನಂತರದ ಪದಗಳು: ದಾಖಲೆ ಮತ್ತು ಮಾಹಿತಿ**

(i) ಬಲಿಯಾದ ವ್ಯಕ್ತಿಗಳಿಗೆ ಈ ಕಾಯ್ದೆಯ ಉದ್ದೇಶದಂತೆ ಅವರು ಮೊದಲ ಬಾರಿ ಪೋಲೀಸ್ ಅಥವಾ ನ್ಯಾಯಾಲಯದ ಸಂಪರ್ಕಕ್ಕೆ ಬಂದ ಸಂದರ್ಭದಿಂದ ಆಗಿರುವ ಎಲ್ಲಾ ಬೆಳವಣಿಗೆಗಳ ಮಾಹಿತಿಯನ್ನು ನೀಡಲು ಸರ್ಕಾರ ಮಾಡುವ ವ್ಯವಸ್ಥೆಯು ಅವರ ಹಕ್ಕಾಗಿದೆ.

(ii) ತನಿಖೆ, ಆರೋಪ ಪಟ್ಟಿ ತಯಾರಿಕೆ, ಜಾಮೀನು, ಬಂಧನದಿಂದ ಅಪರಾಧಿಯ ಬಿಡುಗಡೆ, ವಿಚಾರಣೆಯ ದಿನಾಂಕಗಳು ಮತ್ತು ಮಿಸಲೇನಿಯಸ್ ಮನವಿಯ ವಿಚಾರಣೆಯ ಕುರಿತು ಮಾಹಿತಿಯನ್ನು ತನಿಖಾಧಿಕಾರಿ ಮತ್ತು ಪಬ್ಲಿಕ್ ಪ್ರಾಸಿಕ್ಯೂಟರುಗಳು ಪ್ರತಿ ಬಲಿಯಾದ ವ್ಯಕ್ತಿಗಳು ಮತ್ತು ಸಾಕ್ಷಿಗಳಿಗೆ ನೀಡುವ ಹಕ್ಕು ಪಡೆಯುತ್ತಾರೆ.

(iii) ತನಿಖಾಧಿಕಾರಿ ಮತ್ತು ಪಬ್ಲಿಕ್ ಪ್ರಾಸಿಕ್ಯೂಟರುಗಳು ಬಲಿಯಾದ ವ್ಯಕ್ತಿಗೆ ನೆರವು ಪಡೆದುಕೊಳ್ಳುವ ಸಾಧ್ಯತೆಗಳು, ವಾಸ್ತವ ಮತ್ತು ಕಾನೂನು ಸಲಹೆ, ಅಪರಾಧಿ ನೀಡುವ ನಷ್ಟಪರಿಹಾರ ಮತ್ತು ರಾಜ್ಯವು ನೀಡುವ ನಷ್ಟಪರಿಹಾರ, ಪೋಲೀಸರ ತನಿಖೆಯಿಂದ ಬರುವ ಫಲಿತಾಂಶಗಳನ್ನು ತಿಳಿಸಬೇಕು.

(iv) ಬಲಿಯಾದ ವ್ಯಕ್ತಿಗೆ ತಾನೊಬ್ಬ ದೌರ್ಜನ್ಯಕ್ಕೆ ಬಲಿಯಾದ ವ್ಯಕ್ತಿಯಾಗಿ ದೊರೆಯುವ ಹಣಕಾಸು ನೆರವು ಮತ್ತು ಸಾಮಾಜಿಕ ಸೇವೆಗಳು, ರಾಜ್ಯದಿಂದ ನಷ್ಟಪರಿಹಾರ ಕ್ಲೇಮು ಪಡೆಯುವ ಹಕ್ಕುಗಳನ್ನು ಒಳಗೊಂಡಂತೆ ಇತರೆ ನೆರವು ಮತ್ತು ಸೇವೆಗಳನ್ನು ತಿಳಿಸಬೇಕು.

(v) ಅಪರಾಧದಿಂದ ಆಗಿರುವ ನಷ್ಟ ಅಥವಾ ಹಾನಿಗೆ ಲಭ್ಯವಿರುವ ಮರುಸ್ವಾಧೀನ ಮತ್ತು ಈ ಕಾಯ್ದೆಯ ನಿಯಮದಡಿಯಲ್ಲಿ ತಿಳಿಸಿರುವುದಕ್ಕೆ ಕ್ರಮವಾಗಿ ಮರುಸ್ವಾಧೀನ ಮಾಡಿಕೊಳ್ಳಲು ಲಭ್ಯವಿರುವ ನೆರವಿನ ಕುರಿತು ಬಲಿಯಾದ ವ್ಯಕ್ತಿಗೆ ಸಲಹೆ ನೀಡಬೇಕು.

## 4. ಕಾಯ್ದೆಯಲ್ಲಿ ನೀಡಿರುವ ಪದ ಅರ್ಥಗಳ ವ್ಯಾಪ್ತಿ

1] **ಸೆಕ್ಷನ್: ಅಧ್ಯಾಯ-I, ಕಲಂ 2(1)(c)**

**ಕಾಯ್ದೆಯಲ್ಲಿದ್ದಂತೆ ಪದಗಳು:** *"ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ"ಕ್ಕೆ ಕ್ರಮವಾಗಿ ಸಂವಿಧಾನದ ಅನುಚ್ಛೇದ 366ರ ಅನುಬಂಧ (24) ಮತ್ತು ಅನುಬಂಧ (25)ರಲ್ಲಿ ತಿಳಿಸಿದ ಅರ್ಥವನ್ನು ಸ್ಪಷ್ಟಪಡಿಸುವುದು;*

**ತಿದ್ದುಪಡಿಯಾದ ನಂತರದ ಪದಗಳು:** ಸಂವಿಧಾನದ ಅನುಚ್ಛೇದ 366ರಲ್ಲಿರುವ ಕ್ರಮವಾಗಿ ಉಪಬಂಧ 24 ಮತ್ತು 25ರ ಉದ್ದೇಶಕ್ಕಾಗಿ ಸಂವಿಧಾನಕ್ಕೆಂದೇ ಪರಿಶಿಷ್ಟ ಜಾತಿಗಳ ಮತ್ತು ಪರಿಶಿಷ್ಟ ಪಂಗಡಗಳ ಅರ್ಥವನ್ನು ವಿವರಿಸಿ ರಾಷ್ಟ್ರಪತಿಗಳು ಹೊರಡಿಸಿದ 341 ಮತ್ತು 342 ಅಧಿಸೂಚನೆಯನ್ನು ಬದಿಗಿಟ್ಟು; ಕೇವಲ ಈ ಕಾಯ್ದೆಯ ಉದ್ದೇಶಕ್ಕಾಗಿ ಮಾತ್ರ ಪರಿಶಿಷ್ಟ ಜಾತಿಯಲ್ಲಿ ಪರಿಶಿಷ್ಟ ಪಟ್ಟಿಯಲ್ಲಿ ತಿಳಿಸಿರುವ ಯಾವುದೆ ಜಾತಿಗೆ ಸೇರಿದ ಹಿಂದೂ, ಸಿಖ್, ಅಥವಾ ಬೌದ್ಧ ಧರ್ಮ ಪಾಲಿಸುವವರಷ್ಟೇ ಅಲ್ಲದೆ ಬೇರೆ ಧರ್ಮವನ್ನೂ ಪಾಲಿಸುವ ಜನರನ್ನೂ ಹಾಗೂ ಅಂತಹವರ ವಂಶಜರು ಇತರೆ ರಾಜ್ಯಗಳಿಗೆ ಕೆಲಸಕ್ಕಾಗಿ ವಲಸೆ ಹೋದವರು ಮತ್ತು ಅಂತಹ ರಾಜ್ಯದ ಪರಿಶಿಷ್ಟ ಪಟ್ಟಿಯಲ್ಲಿ ಇವರ ಜಾತಿಯನ್ನು ಸೇರಿಸದೇ ಹೋಗಿದ್ದಲ್ಲಿ ಅಂತಹವರನ್ನೂ ಈ ಕಾಯ್ದೆಯ ಉದ್ದೇಶಕ್ಕಾಗಿ ಮಾತ್ರ ಪರಿಶಿಷ್ಟ ಜಾತಿಯವರು ಎಂದು ಪರಿಗಣಿಸತಕ್ಕದ್ದು.

2] **ಸೆಕ್ಷನ್: ಅಧ್ಯಾಯ-2 (1) (g)**

**ಕಾಯ್ದೆಯಲ್ಲಿದ್ದಂತೆ ಪದಗಳು:** *ಹೊಸ ಉಪಬಂಧವನ್ನಾಗಿ ಸೇರಿಸಲು ಪ್ರಸ್ತಾಪಿಸಲಾಗಿದೆ.*

**ತಿದ್ದುಪಡಿಯಾದ ನಂತರದ ಪದಗಳು:** 'ಬಲಿಯಾದ ವ್ಯಕ್ತಿ' ಎಂದರೆ, ಪರಿಶಿಷ್ಟ ಜಾತಿಯ ಅಥವಾ ಪರಿಶಿಷ್ಟ ಪಂಗಡದ ಸದಸ್ಯನೊಬ್ಬನ ವಿರುದ್ಧ ಯಾವುದೇ ದೌರ್ಜನ್ಯದ ಅಪರಾಧ ಎಸಗಿದರೆ, ವೈಯಕ್ತಿಕವಾಗಿ, ಅಥವಾ ಸಾಮೂಹಿಕವಾಗಿ ಮತ್ತು ಅವರ ಕುಟುಂಬದ ಸದಸ್ಯರು/ಬದುಕುಳಿದ ಸದಸ್ಯರು;

3] **ಸೆಕ್ಷನ್: 2 (1) (h)**

**ಕಾಯ್ದೆಯಲ್ಲಿದ್ದಂತೆ ಪದಗಳು:** *ಹೊಸ ಉಪಬಂಧವನ್ನಾಗಿ ಸೇರಿಸಲು ಪ್ರಸ್ತಾಪಿಸಲಾಗಿದೆ.*

**ತಿದ್ದುಪಡಿಯಾದ ನಂತರದ ಪದಗಳು:** 'ಸಾಕ್ಷಿ' ಎಂದರೆ, ಒಂದು ದೌರ್ಜನ್ಯ ಅಪರಾಧದ ಕುರಿತು ಅರಿವು ಇರುವ ವ್ಯಕ್ತಿ, ಅಥವಾ ಸತ್ಯಾಂಶ, ಅಥವಾ ಸತ್ಯಾಂಶಗಳ, ಅಥವಾ ಸನ್ನಿವೇಶಗಳ ಅರಿವು ಇದೆ ಎಂದು ವಿಶ್ವಾಸ ಇರಿಸಬಹುದಾದ ವ್ಯಕ್ತಿ, ಮತ್ತು ವಿಶೇಷ ನ್ಯಾಯಾಲಯ, ಅಥವಾ ಸಾಕ್ಷಿ ನೀಡಬೇಕಾದ ಯಾವುದೇ ಸೂಕ್ತ ನ್ಯಾಯಸ್ಥಾನ, ಅಥವಾ ಈ ಪ್ರಕರಣದಲ್ಲಿ ಸಾಕ್ಷಿ ನೀಡಲು ಕರೆಯಬಹುದಾದ ಯಾವುದೇ ವ್ಯಕ್ತಿಯ ಮುಂದೆ ಸಾಕ್ಷಿಯನ್ನು ನೀಡಬಹುದು ಎಂದು ವಿಶ್ವಾಸ ಇರಿಸಬಹುದಾದ ಅಥವಾ ಸಾಕ್ಷಿ ನೀಡುವ ಅಗತ್ಯ ಇರುವ ವ್ಯಕ್ತಿ;

## 5. ಕೆಲವು ಪದಗಳನ್ನು ಅಳಿಸಿ ಹಾಕಲು ಪ್ರಸ್ತಾವನೆ– 'ಉದ್ದೇಶ', 'ಆಧಾರದಲ್ಲಿ

1] **ಸೆಕ್ಷನ್: ಅಧ್ಯಾಯ–II, ಕಲಂ 3(1)(ii)**

**ಕಾಯ್ದೆಯಲ್ಲಿದ್ದಂತೆ ಪದಗಳು:** *ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದ ಸದಸ್ಯನೊಬ್ಬನಿಗೆ ಹಾನಿ, ಅವಮಾನ ಅಥವಾ ಪೀಡಿಸುವ ಉದ್ದೇಶದಿಂದ ಮಲ, ತ್ಯಾಜ್ಯ ವಸ್ತು, ಸತ್ತ ಪ್ರಾಣಿಯ ತ್ಯಾಜ್ಯ ಅಥವಾ ಹೇಸಿಕೆ ವಸ್ತುವನ್ನು ಅವನ ಸ್ಥಳ ಅಥವಾ ನೆರೆಯ ಸ್ಥಳದಲ್ಲಿ ಹಾಕುವ ಕೃತ್ಯ ಮಾಡಿದರೆ;*

**ತಿದ್ದುಪಡಿಯಾದ ನಂತರದ ಪದಗಳು:** ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದ ಸದಸ್ಯನೊಬ್ಬನ ಸ್ಥಳದಲ್ಲಿ ಅಥವಾ ನೆರೆಯಸ್ಥಳದಲ್ಲಿ ಅಥವಾ ಪರಿಶಿಷ್ಟ ಜಾತಿಯ ಅಥವಾ ಪರಿಶಿಷ್ಟ ಪಂಗಡಗಳ ಸದಸ್ಯರು ವಾಸಿಸುವ ಸ್ಥಳದ ಹತ್ತಿರ ಮಲ, ತ್ಯಾಜ್ಯ ವಸ್ತು, ಪ್ರಾಣಿಯ ತ್ಯಾಜ್ಯ ಅಥವಾ ಹೇಸಿಕೆ ವಸ್ತುವನ್ನು ಸುರಿದರೆ;

2] **ಸೆಕ್ಷನ್: ಅಧ್ಯಾಯ–II, ಕಲಂ 3(1) (iii)**

**ಕಾಯ್ದೆಯಲ್ಲಿದ್ದಂತೆ ಪದಗಳು:** *ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದ ಸದಸ್ಯನೊಬ್ಬನ ಬಟ್ಟೆಗಳನ್ನು ಬಲವಂತವಾಗಿ ಕಳಚಿದರೆ ಅಥವಾ ಬೆತ್ತಲೆ ಅಥವಾ ಮುಖಕ್ಕೆ ಮಸಿ ಬಳಿದು ಅಥವಾ ದೇಹವನ್ನು ಮೆರವಣಿಗೆ ಮಾಡಿದರೆ ಅಥವಾ ಮಾನವ ಘನತೆಗೆ ಚುತಿ ಬರುವಂತಹ ಇತರೆ ಯಾವುದೇ ಅನುಚಿತ ಕೃತ್ಯಗಳನ್ನು ಮಾಡಿದರೆ;*

**ತಿದ್ದುಪಡಿಯಾದ ನಂತರದ ಪದಗಳು:** ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದ ಸದಸ್ಯನೊಬ್ಬನ ಬಟ್ಟೆಗಳನ್ನು ಕಳಚಿದರೆ ಅಥವಾ ಬೆತ್ತಲೆ ಅಥವಾ ಮುಖಕ್ಕೆ ಮಸಿಬಳಿದು ಮೆರವಣಿಗೆ ಮಾಡಿದರೆ ಅಥವಾ ಇದೇ ರೀತಿಯ ಇನ್ನಾವುದೇ ಕೃತ್ಯ ಮಾಡಿದರೆ;

3] **ಸೆಕ್ಷನ್: ಅಧ್ಯಾಯ–II, ಕಲಂ 3(1)(x)**

**ಕಾಯ್ದೆಯಲ್ಲಿದ್ದಂತೆ ಪದಗಳು:** *ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದ ಸದಸ್ಯನೊಬ್ಬನನ್ನು ಸಾರ್ವಜನಿಕರು ನೋಡುವ ಯಾವುದೇ ಪ್ರದೇಶದಲ್ಲಿ ಉದ್ದೇಶಪೂರ್ವಕವಾಗಿ ಅವಮಾನಿಸಿದರೆ ಅಥವಾ ಬೆದರಿಸಿದರೆ ಮನನೋಯಿಸಲು ಉದ್ದೇಶಿಸಿದರೆ;*

**ತಿದ್ದುಪಡಿಯಾದ ನಂತರದ ಪದಗಳು:** ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡದ ಸದಸ್ಯನೊಬ್ಬನನ್ನು ಸಾರ್ವಜನಿಕರು ನೋಡುವ ಯಾವುದೇ ಪ್ರದೇಶದಲ್ಲಿ ಅವಮಾನಿಸಿದರೆ ಅಥವಾ ಬೆದರಿಸಿದರೆ ಅಥವಾ ಮನನೋಯಿಸಿದರೆ;

4] **ಸೆಕ್ಷನ್: ಅಧ್ಯಾಯ–II, ಕಲಂ 3(1)(xi)**

**ಕಾಯ್ದೆಯಲ್ಲಿದ್ದಂತೆ ಪದಗಳು:** *ಪರಿಶಿಷ್ಟ ಜಾತಿಯ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದ ಯಾವುದೇ ಮಹಿಳೆಯ ಮೇಲೆ ಗೌರವ ಅಥವಾ ಸನ್ನಡತೆಯನ್ನು ಕುಗ್ಗಿಸುವ ಉದ್ದೇಶದಿಂದ ಹಲ್ಲೆ ಅಥವಾ ಬಲಪ್ರಯೋಗ ಮಾಡಿದರೆ;*

**ತಿದ್ದುಪಡಿಯಾದ ನಂತರದ ಪದಗಳು:** ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದ ಮಹಿಳೆಯೊಬ್ಬಳ ಮೇಲೆ ಯಾವುದೇ ರೀತಿಯಲ್ಲಿ ಹಲ್ಲೆ ಅಥವಾ ಬಲ ಪ್ರಯೋಗ ಮಾಡಿದರೆ ಅಥವಾ ಆಕೆಯ ಬಟ್ಟೆಯ ಯಾವುದೇ ಭಾಗವನ್ನು ಕಳಚಿದರೆ;

5] **ಸೆಕ್ಷನ್: ಅಧ್ಯಾಯ–II, ಕಲಂ 3(1)(xii)**

**ಕಾಯ್ದೆಯಲ್ಲಿದ್ದಂತೆ ಪದಗಳು:** *ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದ ಮಹಿಳೆಯ ಇಚ್ಚೆಯ ಮೇಲೆ ಪ್ರಭಾವ ಬೀರುವ ಸ್ಥಾನ ಹೊಂದಿದ್ದು, ಆ ಸ್ಥಾನ ಇಲ್ಲದೇ ಇದ್ದಲ್ಲಿ ಆಕೆಯು ಒಪ್ಪದೇ ಇದ್ದಂತಹ ಪಕ್ಷದಲ್ಲಿ ಆಕೆಯನ್ನು ಲೈಂಗಿಕವಾಗಿ ಶೋಷಿಸಲು ಆ ಸ್ಥಾನವನ್ನು ಬಳಸಿದರೆ;*

**ತಿದ್ದುಪಡಿಯಾದ ನಂತರದ ಪದಗಳು:** ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದ ಮಹಿಳೆಯ ಇಚ್ಚೆಯ ಮೇಲೆ ಪ್ರಾಧಾನ್ಯ, ಪ್ರಭಾವ ಅಥವಾ ನಿಯಂತ್ರಣ ಬೀರುವ ಸ್ಥಾನ ಹೊಂದಿದ್ದು, ಆ ಸ್ಥಾನ ಇಲ್ಲದೇ ಇದ್ದಾಗ, ಆಕೆಯು ಒಪ್ಪದೇ ಇದ್ದಂತಹ ಪಕ್ಷದಲ್ಲಿ ಆಕೆಯನ್ನು ಲೈಂಗಿಕವಾಗಿ ಶೋಷಿಸಲು ಆ ಸ್ಥಾನವನ್ನು ಬಳಸಿದರೆ;

ಪ್ರಾಧಾನ್ಯ, ಪ್ರಭಾವ ಮತ್ತು ನಿಯಂತ್ರಣಕ್ಕೆ ಕೆಳಕಂಡ ಕೆಲವು ನಿದರ್ಶನಗಳು.

(a) ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡದ ಮಹಿಳೆಯೊಬ್ಬಳನ್ನು ಕೆಲಸಕ್ಕೆ ನಿಯಮಿಸಿಕೊಂಡ ಸಂಬಂಧ ಭೂಮಾಲಿಕ;

(b) ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡದ ಮಹಿಳೆಯನ್ನು ಉದ್ಯೋಗಕ್ಕೆ ನೇಮಿಸಿಕೊಂಡ ಸಂಬಂಧ ಸಾರ್ವಜನಿಕ ಅಥವಾ ಖಾಸಗಿ ಸಂಸ್ಥೆಯ ಮುಖ್ಯಸ್ಥ ಅಥವಾ ಹಿರಿಯ ಅಥವಾ ಮೇಲ್ವಿಚಾರಣೆ ಮಾಡುವ ಸಿಬ್ಬಂಧಿ.

(c) ದಿನಗೂಲಿಯ ಉದ್ಯೋಗಿಯನ್ನೂ ಒಳಗೊಂಡಂತೆ ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡದ ಮಹಿಳಾ ಉದ್ಯೋಗಿಯ ಸಂಬಂಧ ವೇತನ ವಿತರಿಸುವ;

(d) ವಿದ್ಯಾರ್ಥಿಯ ಸಂಬಂಧ ಒಬ್ಬ ಉಪಾಧ್ಯಾಯ;

(e) ಸಹಾಯಕ್ಕಾಗಿ ಬಂದ ಅಥವಾ ತನಿಖೆ ಅಥವಾ ವಿಚಾರಣೆಗಾಗಿ ಪೋಲೀಸ್ ಠಾಣೆಗೆ ಕರೆದುಕೊಂಡು ಬಂದ ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡದ ಮಹಿಳೆಯ ಸಂಬಂಧ ಪೋಲೀಸ್ ಠಾಣೆಯ ಒಬ್ಬ ಅಧಿಕಾರಿ, ಅಥವಾ ಒಬ್ಬ ಸಿಬ್ಬಂಧಿ;

(f) ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡದ ಮಹಿಳೆಯೊಬ್ಬಳು ನಿವಾಸಿಯಾಗಿರುವ ಸೆರೆಮನೆ, ರಿಮ್ಯಾಂಡ್ ಹೋಂ ಅಥವಾ ಕಸ್ಟಡಿಯ ಸ್ಥಳ, ಅಥವಾ ಆಶ್ರಯಮನೆಯ ಸಂಬಂಧ ಅಧಿಕಾರಿ ಅಥವಾ ಸಿಬ್ಬಂಧಿ;

(g) ಪರಿಶಿಷ್ಟ ಜಾತಿಯ ಅಥವಾ ಪರಿಶಿಷ್ಟ ಪಂಗಡದ ಮಹಿಳೆ ಅಧಿಕಾರಿಯ ಸಾಮರ್ಥ್ಯದಲ್ಲಿ ಸಹಾಯ ಬೇಡಿ ಬಂದ ಸಂಬಂಧ ಸಾರ್ವಜನಿಕ ಅಧಿಕಾರಿ;

6] **ಸೆಕ್ಷನ್: ಅಧ್ಯಾಯ–II, ಕಲಂ 3(1)(xiii)**

**ಕಾಯ್ದೆಯಲ್ಲಿದ್ದಂತೆ ಪದಗಳು:** *ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡದ ಯಾವುದೇ ಸದಸ್ಯ ಸಾಮಾನ್ಯವಾಗಿ ಬಳಸುವ ಯಾವುದೇ ಕಾರಂಜಿಯ ನೀರು ಅಥವಾ ಇತರೆ ಯಾವುದೇ ಮೂಲವನ್ನು ಸಾಮಾನ್ಯವಾಗಿ ಬಳಸುತ್ತಿದ್ದ ಉದ್ದೇಶಕ್ಕಾಗಿ ಅಯೋಗ್ಯವಾಗುವಂತೆ ಮಾಲಿನ್ಯಗೊಳಿಸಿದರೆ ಅಥವಾ ಹೊಲಸು ಮಾಡಿದರೆ;*

**ತಿದ್ದುಪಡಿಯಾದ ನಂತರದ ಪದಗಳು:** ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡದ ಸದಸ್ಯರು ಸಾಮಾನ್ಯವಾಗಿ ಬಳಸುವ ಕಾರಂಜಿ, ಅಣೆಕಟ್ಟು, ಅಥವಾ ಇನ್ಯಾವುದೇ ನೀರಿನ ಮೂಲವನ್ನು ಮಾಲಿನ್ಯಗೊಳಿಸಿದರೆ ಅಥವಾ ಹೊಲಸು ಮಾಡಿದರೆ;

7] **ಸೆಕ್ಷನ್: ಅಧ್ಯಾಯ–II, ಕಲಂ 3(2)(i) 3(2)(iii A) ಎಂಬ ಹೊಸ ಉಪಬಂಧ ಸಂಖ್ಯೆ ನೀಡಿದೆ**

**ಕಾಯ್ದೆಯಲ್ಲಿದ್ದಂತೆ ಪದಗಳು:** *ಪರಿಶಿಷ್ಟ ಜಾತಿಯ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದ ಯಾವುದೇ ಸದಸ್ಯನ ವಿರುದ್ಧ ಸುಳ್ಳು ಅಥವಾ ಕಟ್ಟುಕಥೆಯ ಸಾಕ್ಷಿಯನ್ನು ಹೇಳಿದರೆ ಮತ್ತು ಅಂತಹ ಸಾಕ್ಷಿಯಿಂದ ಪರಿಶಿಷ್ಟ ಜಾತಿಯ ಅಥವಾ ಪರಿಶಿಷ್ಟ ಪಂಗಡದ ಸದಸ್ಯನೊಬ್ಬನಿಗೆ ಪ್ರಸ್ತುತ ಚಾಲ್ತಿಯಲ್ಲಿರುವ ಕಾನೂನಿನ ಪ್ರಕಾರ ಮರಣದಂಡನೆ ಅಪರಾಧವೆಂದು ಸಾಬೀತುಗೊಂಡು ಜೀವಾವಧಿ ಸೆರೆವಾಸ ಮತ್ತು ದಂಡದ ಶಿಕ್ಷೆಯಾದರೆ; ಮತ್ತು ಅಂತಹ ಸುಳ್ಳು ಅಥವಾ ಕಟ್ಟುಕಥೆಯ ಸಾಕ್ಷಿಯ ಮೇರೆಗೆ ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದ ಮುಗ್ಧ ಸದಸ್ಯನೊಬ್ಬನ ಆರೋಪ ಸಾಬೀತಾಗಿ ಅವನಿಗೆ ಶಿಕ್ಷೆಯು ಆದರೆ, ಸುಳ್ಳು ಅಥವಾ ಕಟ್ಟುಕಥೆಯ ಸಾಕ್ಷಿ ಹೇಳುವ ವ್ಯಕ್ತಿಗೆ ಮರಣದಂಡನೆ ಶಿಕ್ಷೆ ವಿಧಿಸತಕ್ಕದ್ದು;*

**ತಿದ್ದುಪಡಿಯಾದ ನಂತರದ ಪದಗಳು:** ಪರಿಶಿಷ್ಟ ಜಾತಿಯ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದ ಯಾವುದೇ ಸದಸ್ಯನ ವಿರುದ್ಧ ಸುಳ್ಳು ಅಥವಾ ಕಟ್ಟುಕಥೆಯ ಸಾಕ್ಷಿಯನ್ನು ಹೇಳಿದರೆ ಅಂತಹ ಸಾಕ್ಷಿಯಿಂದ ಪರಿಶಿಷ್ಟ ಜಾತಿಯ ಅಥವಾ ಪರಿಶಿಷ್ಟ ಪಂಗಡದ ಸದಸ್ಯರೊಬ್ಬರಿಗೆ ಪ್ರಸ್ತುತ ಚಾಲ್ತಿಯಲ್ಲಿರುವ ಕಾನೂನಿನಲ್ಲಿ ಪ್ರಕಾರ ಮರಣದಂಡನೆಯ ಶಿಕ್ಷೆಯಾದರೆ, ಜೀವಾವಧಿ ಶಿಕ್ಷೆ ಮತ್ತು ದಂಡದ ಶಿಕ್ಷೆಯನ್ನು ವಿಧಿಸುವುದು; ಮತ್ತು ಅಂತಹ ಸುಳ್ಳು ಅಥವಾ ಕಟ್ಟುಕಥೆಯ ಸಾಕ್ಷಿಯಿಂದಾಗಿ ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡದ ಮುಗ್ಧ ಸದಸ್ಯರಿಗೆ ಮರಣದಂಡನೆ ಶಿಕ್ಷೆ ನೆರವೇರಿದ್ದರೆ, ಅಂತಹ ಸುಳ್ಳು ಅಥವಾ ಕಟ್ಟುಕಥೆಯ ಸಾಕ್ಷಿಯನ್ನು ಹೇಳಿದವರಿಗೆ ಜೀವಾವಧಿ ಶಿಕ್ಷೆ ವಿಧಿಸತಕ್ಕದ್ದು ಮತ್ತು ಆತನ ಎಲ್ಲಾ ಆಸ್ತಿಯನ್ನು ಮುಟ್ಟುಗೋಲು ಹಾಕಿಕೊಂಡು ಮತ್ತು ಅದೆಲ್ಲವನ್ನೂ ಬಲಿಯಾದ ವ್ಯಕ್ತಿ/ ಅವಲಂಬಿತರಿಗೆ ಈ ಕಾಯ್ದೆಯಲ್ಲಿ ದೊರೆಯಬಹುದಾದ ಎಲ್ಲಾ ಪುನರ್ವಸತಿ, ಪರಿಹಾರ ಮೊತ್ತ ಮತ್ತು ನಷ್ಟಪರಿಹಾರ ಮೊತ್ತದ ಜೊತೆಯಲ್ಲಿ ಹೆಚ್ಚುವರಿಯಾಗಿ ವಿತರಿಸತಕ್ಕದ್ದು;

8] **ಸೆಕ್ಷನ್: ಅಧ್ಯಾಯ–II, ಕಲಂ 3(2)(ii) 3(2)(iii B) ಎಂಬ ಹೊಸ ಉಪಬಂಧ ಸಂಖ್ಯೆ ನೀಡಿದೆ**

**ಕಾಯ್ದೆಯಲ್ಲಿದ್ದಂತೆ ಪದಗಳು:** *ಪರಿಶಿಷ್ಟ ಜಾತಿಯ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದ ಯಾವುದೇ ಸದಸ್ಯನ ವಿರುದ್ಧ ಸುಳ್ಳು ಅಥವಾ ಕಟ್ಟುಕಥೆಯ ಸಾಕ್ಷಿಯನ್ನು ಹೇಳಿದರೆ ಮತ್ತು ಅಂತಹ ಸಾಕ್ಷಿಯಿಂದ ಪರಿಶಿಷ್ಟ ಜಾತಿಯ ಅಥವಾ ಪರಿಶಿಷ್ಟ ಪಂಗಡದ ಸದಸ್ಯನೊಬ್ಬನಿಗೆ ಪ್ರಸ್ತುತ ಚಾಲ್ತಿಯಲ್ಲಿರುವ ಕಾನೂನಿನ ಪ್ರಕಾರ ಅಪರಾಧವೆಂದು ಸಾಬೀತುಗೊಂಡು ಮರಣ ದಂಡನೆ ಅಲ್ಲದ ಆದರೆ ಏಳು ವರ್ಷ ಅಥವಾ ಹೆಚ್ಚು ಶಿಕ್ಷೆ ವಿಧಿಸಲ್ಪಟ್ಟರೆ, ಅವರಿಗೆ ಆರು ತಿಂಗಳಿಗೂ ಕಡಿಮೆ ಅಲ್ಲದ ಅಥವಾ ಏಳು ವರ್ಷಗಳವರೆಗೂ ಹೆಚ್ಚಿಸಬಹುದಾದ ಸೆರೆವಾಸ ಮತ್ತು ದಂಡದ ಶಿಕ್ಷೆ ವಿಧಿಸತಕ್ಕದ್ದು;*

**ತಿದ್ದುಪಡಿಯಾದ ನಂತರದ ಪದಗಳು:** ಪರಿಶಿಷ್ಟ ಜಾತಿಯ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದ ಯಾವುದೇ ಸದಸ್ಯರ ವಿರುದ್ಧ ಸುಳ್ಳು ಅಥವಾ ಕಟ್ಟುಕಥೆಯ ಸಾಕ್ಷಿಯನ್ನು ಹೇಳಿದರೆ ಮತ್ತು ಅಂತಹ ಸಾಕ್ಷಿಯಿಂದ ಪರಿಶಿಷ್ಟ ಜಾತಿಯ ಅಥವಾ ಪರಿಶಿಷ್ಟ ಪಂಗಡದ ಸದಸ್ಯನೊಬ್ಬನಿಗೆ ಪ್ರಸ್ತುತ ಚಾಲ್ತಿಯಲ್ಲಿರುವ ಕಾನೂನಿನ ಪ್ರಕಾರ ಅಪರಾಧವೆಂದು ಸಾಬೀತುಗೊಂಡು ಮರಣ ದಂಡನೆ ಅಲ್ಲದ ಆದರೆ ಏಳು ವರ್ಷ ಅಥವಾ ಹೆಚ್ಚು ಶಿಕ್ಷೆ ವಿಧಿಸಲ್ಪಟ್ಟರೆ, ಅವರಿಗೆ 2 ವರ್ಷಕ್ಕೂ ಕಡಿಮೆ ಅಲ್ಲದ ಅಥವಾ 10 ವರ್ಷಗಳವರೆಗೂ ಹೆಚ್ಚಿಸಬಹುದಾದ ಸೆರೆವಾಸ ಮತ್ತು ದಂಡದ ಶಿಕ್ಷೆ ವಿಧಿಸತಕ್ಕದ್ದು;

9] **ಸೆಕ್ಷನ್: ಅಧ್ಯಾಯ–II, ಕಲಂ 3(2)(iii) 3(2) (iii C) ಎಂಬ ಹೊಸ ಉಪಬಂಧ ಸಂಖ್ಯೆ ನೀಡಿದೆ**

**ಕಾಯ್ದೆಯಲ್ಲಿದ್ದಂತೆ ಪದಗಳು:** *ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದ ಸದಸ್ಯನಿಗೆ ಸೇರಿದ ಯಾವುದೇ ಆಸ್ತಿಯನ್ನು ಹಾನ ಮಾಡುವ ಉದ್ದೇಶದಿಂದ ಅಥವಾ ಹಾನ ಆಗುತ್ತದೆ ಎಂದು ತಿಳಿದು ಬೆಂಕಿ ಅಥವಾ ಯಾವುದೇ ಸಿಡಿಯುವ ಪದಾರ್ಥದಿಂದ ಕಿಡಿಗೇಡಿತನ ಮಾಡಿದರೆ, ಆರು ತಿಂಗಳಿಗೂ ಕಡಿಮೆ ಇಲ್ಲದ ಆದರೆ ಏಳು ವರ್ಷಗಳವರೆಗೆ ಹೆಚ್ಚಿಸಬಹುದಾದ ಸೆರೆವಾಸ ಮತ್ತು ದಂಡದ ಶಿಕ್ಷೆ ವಿಧಿಸತಕ್ಕದ್ದು;*

**ತಿದ್ದುಪಡಿಯಾದ ನಂತರದ ಪದಗಳು:** ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದ ಸದಸ್ಯನಿಗೆ ಸೇರಿದ ಯಾವುದೇ ಆಸ್ತಿಯನ್ನು ಹಾನ ಮಾಡುವ ಉದ್ದೇಶದಿಂದ ಅಥವಾ ಹಾನ ಆಗುತ್ತದೆ ಎಂದು ತಿಳಿದು ಬೆಂಕಿ ಅಥವಾ ಯಾವುದೇ ಸಿಡಿಯುವ ಪದಾರ್ಥದಿಂದ ಕಿಡಿಗೇಡಿತನ ಮಾಡಿದರೆ, ಎರಡು ವರ್ಷಕ್ಕೂ ಕಡಿಮೆ ಇಲ್ಲದ ಆದರೆ ಹತ್ತು ವರ್ಷಗಳವರೆಗೆ ಹೆಚ್ಚಿಸಬಹುದಾದ ಸೆರೆವಾಸ ಮತ್ತು ದಂಡದ ಶಿಕ್ಷೆ ವಿಧಿಸತಕ್ಕದ್ದು;

## 6. ಸಾರ್ವಜನಿಕ ಸೇವಕರು ಮತ್ತು ಇತರರಿಗೆ ಕರ್ತವ್ಯಗಳನ್ನು ತಿಳಿಸುವ ಪ್ರಸ್ತಾವಿತ ತಿದ್ದುಪಡಿ(ಹೆಚ್ಚಾಗಿ ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಸಚಿವಾಲಯ ಮತ್ತು ಗೃಹ ಮಂತ್ರಾಲಯದ ಸಲಹೆಯ ಮೇರೆಗೆ)

1] **ಸೆಕ್ಷನ್: ಅಧ್ಯಾಯ–II, ಕಲಂ 4**

**ಕಾಯ್ದೆಯಲ್ಲಿದ್ದಂತೆ ಪದಗಳು:** *ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರದೇ ಇರುವ ಯಾವುದೇ ಸಾರ್ವಜನಿಕ ಸೇವಕ, ಇಚ್ಛಾಪೂರ್ವಕವಾಗಿ ಈ ಕಾಯ್ದೆಯ ಪ್ರಕಾರ ನಿರ್ವಹಿಸಬೇಕಿರುವ ತನ್ನ ಕರ್ತವ್ಯದಲ್ಲಿ ನಿರ್ಲಕ್ಷಿಸಿದರೆ, ಆರು ತಿಂಗಳಿಗೆ ಕಡಿಮೆ ಇಲ್ಲದ ಆದರೆ ಒಂದು ವರ್ಷದವರೆಗೆ ಹೆಚ್ಚಿಸಬಹುದಾದ ಜೈಲು ಶಿಕ್ಷೆ ವಿಧಿಸತಕ್ಕದ್ದು.*

**ತಿದ್ದುಪಡಿಯಾದ ನಂತರದ ಪದಗಳು:** ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರದೇ ಇರುವ ಸಾರ್ವಜನಿಕ ಸೇವಕನೊಬ್ಬ ಈ ಕಾಯ್ದೆಯ ಅಡಿಯಲ್ಲಿ ತಿಳಿಸುವ ಕರ್ತವ್ಯಗಳನ್ನು ನಿರ್ವಹಿಸುವಲ್ಲಿ ಈ ಕೆಳಕಂಡವುಗಳನ್ನೂ ಒಳಗೊಂಡಂತೆ ನಿರ್ಲಕ್ಷಿಸಿದರೆ,–

1. ದೂರು ನೀಡಿದವನ ಮಾಹಿತಿಯನ್ನು ಲಿಖಿತ ರೂಪಕ್ಕೆ ಇಳಿಸಿ ಅಂತಹ ಮಾಹಿತಿ ನೀಡಿದವರ ಸಹಿಯನ್ನು ತೆಗೆದುಕೊಳ್ಳುವ ಮೊದಲು ಲಿಖಿತ ವರದಿಯನ್ನು ಓದಿ ತಿಳಿಸದೇ ಇದ್ದರೆ;
2. ದೂರುದಾರನ, ಮಾಹಿತಿದಾರನ, ಮತ್ತು ಬಲಿಯಾದ ವ್ಯಕ್ತಿಗೆ ಸ್ವಇಚ್ಛೆಯಿಂದ ಸಹಾಯ ಮಾಡುತ್ತಿರುವ ಯಾವುದೇ ಸಾಮಾಜಿಕ ಕಾರ್ಯಕರ್ತನ ಮೇಲೆ ಪೋಲೀಸ್ ಠಾಣೆಯ ಅಧಿಕಾರಿ ಅಥವಾ ಸಿಬ್ಬಂಧಿ ಯಾವುದೇ ರೀತಿಯಲ್ಲಿ ಅಸಭ್ಯವಾಗಿ ಉಪಚರಿಸಿದರೆ;
3. ಆರೋಪಿಗೆ ಆರೋಪ ಸಾಬೀತು ಆಗುವುದನ್ನು ತಪ್ಪಿಸುವಲ್ಲಿ ಯಾವುದೇ ಕೃತ್ಯಗಳನ್ನು ಮಾಡುವುದು ಅಥವಾ ಮಾಡದೇ ಇರುವುದು ಮತ್ತು ದಕ್ಷ ಮತ್ತು ಸತ್ಯವಾದ ತನಿಖೆಯನ್ನು, ಪರಿಣಾಮಕಾರಿ ಪ್ರಾಸಿಕ್ಯೂಷನನ್ನು ರಹಸ್ಯವಾಗಿ ನಾಶಪಡಿಸುವುದು ಮತ್ತು ಪ್ರವರ್ತಿಸುವುದು;
4. ದೂರಿನಲ್ಲಿರುವ ವಿಚಾರಗಳನ್ನು ಬದಲಾಯಿಸಲು ದೂರುದಾರನ ಹಾದಿ ತಪ್ಪಿಸುವುದು ಅಥವಾ;
5. ಎಫ್.ಐ.ಆರ್ ದಾಖಲಿಸದೇ ಇರುವುದು;
6. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ (ದೌರ್ಜನ್ಯ ತಡೆ) ಕಾಯ್ದೆ 1989ರ ಅಡಿಯಲ್ಲಿ ಎಫ್.ಐ.ಆರ್ ದಾಖಲಿಸದೇ ಇರುವುದು;
7. ಪ.ಜಾತಿ ಮತ್ತು ಪ.ಪಂಗಡ (ದೌತ) ಕಾಯ್ದೆ 1989ರ ಸೂಕ್ತ ಕಲಂಗಳಡಿಯಲ್ಲಿ ದಾಖಲಿಸದೇ ಇರುವುದು ಅಥವಾ;
8. ಮಾಹಿತಿದಾರನಿಗೆ ಮಾಹಿತಿ ದಾಖಲಿಸಿದ ನಂತರ ಪ್ರತಿಯನ್ನು ನೀಡದೇ ಇರುವುದು.
9. ಬಲಿಯಾದ ವ್ಯಕ್ತಿಯ ಅಥವಾ ಸಾಕ್ಷಿಯ ಹೇಳಿಕೆಯನ್ನು ತನಿಖಾಧಿಕಾರಿ ದಾಖಲಿಸದೇ ಇರುವುದು ಅಥವಾ;
10. ತೃಪ್ತಿಕರ ವಿವರಣೆಯನ್ನು ನೀಡದ ಹೊರತು, ತನಿಖೆಯನ್ನು 30 ದಿನಗಳಿಗಿಂತ ಹೆಚ್ಚು ತಡ ಮಾಡುವುದು ಅಥವಾ;
11. ತನಿಖೆಯಲ್ಲಿ ಮತ್ತು ಆರೋಪ ಪಟ್ಟಿಯನ್ನು ಸಲ್ಲಿಸುವಲ್ಲಿ ವಿಳಂಬ ಅಥವಾ;
12. ತಕ್ಷಣದ ಪರಿಹಾರ, ನಷ್ಟಪರಿಹಾರ, ಪುನರ್ವಸತಿ ಕಲ್ಪಿಸುವಲ್ಲಿ ವಿಫಲತೆ ಅಥವಾ;
13. ಈ ಕಾಯ್ದೆಯಲ್ಲಿ ಮತ್ತು ನಿಯಮಗಳಲ್ಲಿ ತಿಳಿಸಿರುವ ಇತರೆ ರಕ್ಷಣೆ ಮತ್ತು ನಿರ್ಬಂಧಕ ಕ್ರಮಗಳನ್ನು ಅನುಷ್ಠಾನ ಮಾಡದಿರುವುದು ಅಥವಾ;
14. ಈ ಕಾಯ್ದೆಯಲ್ಲಿ ಮತ್ತು ನಿಯಮಗಳಲ್ಲಿ ತಿಳಿಸಿರುವ ಯಾವುದೇ ಕೃತ್ಯವನ್ನು ಮಾಡದಿರುವುದು ಅಥವಾ ಇನ್ಯಾವುದೇ ಕೃತ್ಯವನ್ನು ಬಿಟ್ಟು ಬಿಡುವುದು ಅಥವಾ;
15. ವಿಚಾರಣೆ ನಗದಿಯಾದ ದಿನದಂದು ವಿಶೇಷ ಪಬ್ಲಿಕ್ ಪ್ರಾಸಿಕ್ಯೂಟರ್ ಹಾಜರಾಗದೇ ವಿಚಾರಣೆಯನ್ನು ವಿಳಂಬ ಮಾಡುವುದು ಅಥವಾ;
16. ವೈದ್ಯಕೀಯ ಅಧಿಕಾರಿಗಳು ಮಾಡಬೇಕಿರುವ ಕೆಲಸವನ್ನು ಮಾಡದೇ ಇರುವುದು ಅಥವಾ ಕರ್ತವ್ಯ ನಿರ್ಲಕ್ಷತೆ:

2 ವರ್ಷಕ್ಕಿಂತಲೂ ಕಡಿಮೆ ಇಲ್ಲದ ಆದರೆ ಏಳು ವರ್ಷಗಳವರೆಗೂ ವಿಸ್ತರಿಸಬಹುದಾದ ಜೈಲು ಶಿಕ್ಷೆ ಮತ್ತು ದಂಡ.

**7. ಹೊಸ ಅಧ್ಯಾಯ–ರಾಷ್ಟ್ರೀಯ ಮತ್ತು ರಾಜ್ಯ ಮೇಲ್ವಿಚಾರಣೆ ಮತ್ತು ಅನುಷ್ಠಾನ ಪ್ರಾಧಿಕಾರ–(ಕಾಯ್ದೆಯ ಸರಿಯಾದ ಅನುಷ್ಠಾನಕ್ಕೆ ಅಗತ್ಯವಾದ ಹೊಸ ಕಲ್ಪನೆ)**

1] **ಸೆಕ್ಷನ್: ಅಧ್ಯಾಯ–II B ಕಲಂ 17**

**ಪ್ರಸ್ತಾವಿತ ಪದಗಳು: ರಾಷ್ಟ್ರೀಯ ಮೇಲ್ವಿಚಾರಣೆ ಮತ್ತು ಅನುಷ್ಠಾನ ಪ್ರಾಧಿಕಾರ**–ರಾಜ್ಯ ಸರ್ಕಾರಗಳ ಮತ್ತು ಕಾಯ್ದೆಯಲ್ಲಿ ತಿಳಿಸಿರುವ ಇತರೆ ನಿಯೋಗಗಳ ಕೃತ್ಯಗಳಲ್ಲಿ ಸಂಯೋಜನೆ ಆಗುವುದನ್ನು ಖಚಿತ ಪಡಿಸಿಕೊಳ್ಳಲು ಮತ್ತು ಈ ಕಾಯ್ದೆಯ ನಿಬಂಧನೆಗಳ ಅನುಷ್ಠಾನವನ್ನು ಖಚಿತಪಡಿಸಿಕೊಳ್ಳಲು ಕೇಂದ್ರ ಸರ್ಕಾರವು ರಾಷ್ಟ್ರೀಯ ಮೇಲ್ವಿಚಾರಣೆ ಮತ್ತು ಅನುಷ್ಠಾನ ಪ್ರಾಧಿಕಾರವನ್ನು (ಇನ್ನು ಮುಂದೆ ರಾಷ್ಟ್ರೀಯ ಪ್ರಾಧಿಕಾರ ಎಂದು ಉಲ್ಲೇಖಿಸಲಾಗುವುದು) ಸ್ಥಾಪಿಸತಕ್ಕದ್ದು.

(1) **ಸದಸ್ಯರು:** ರಾಷ್ಟ್ರೀಯ ಪ್ರಾಧಿಕಾರದಲ್ಲಿ ಒಬ್ಬ ಅಧ್ಯಕ್ಷ, ಇಬ್ಬರು ಸದಸ್ಯರು ಮತ್ತು ಒಬ್ಬ ನೋಡಲ್ ಅಧಿಕಾರಿಯು ರಾಷ್ಟ್ರೀಯ ಪ್ರಾಧಿಕಾರದ ಸದಸ್ಯ ಕಾರ್ಯದರ್ಶಿಯಾಗಿಯೂ ಇರುತ್ತಾರೆ.

(2) **ಅರ್ಹತೆ:** – (i) ದಕ್ಷ, ಪ್ರಾಮಾಣಿಕತೆ, ಸಾಮರ್ಥ್ಯ ಮತ್ತು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನರ ನ್ಯಾಯಕ್ಕಾಗಿ ಅನೇಕ ವರ್ಷಗಳ ಸ್ವಾರ್ಥರಹಿತ ಸೇವೆಯನ್ನು ಮತ್ತು ಅವರ ವ್ಯಕ್ತಿತ್ವದಿಂದಲೇ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನರ ಆತ್ಮವಿಶ್ವಾಸವನ್ನು ಹೆಚ್ಚಿಸುವಂತಹ ಮತ್ತು ಸ್ವಾರ್ಥರಹಿತ ಸೇವೆಯ ದಾಖಲೆಯುಳ್ಳ, ಅಧ್ಯಕ್ಷನಾಗಿ ಅಥವಾ ಇತರೆ ಸದಸ್ಯನಾಗಿ ರಾಷ್ಟ್ರೀಯ ಮತ್ತು ಸಾಮಾಜಿಕ ಸೇವೆಯೆಂದು ಯಾವುದೇ ಸಂಭಾವನೆಯನ್ನು ಪಡೆಯದೇ ಇರುವಂತಹ ಸಾಮಾಜಿಕ ಕಾರ್ಯಕರ್ತರನ್ನು ಪ್ರಾಧಿಕಾರದ ಅಧ್ಯಕ್ಷ, ಇತರೆ ಸದಸ್ಯರನ್ನಾಗಿ ನೇಮಕ ಮಾಡಬೇಕು.

(ii) ನೋಡಲ್ ಅಧಿಕಾರಿಯು ಸರ್ಕಾರದ ಹಿರಿಯ ಕಾರ್ಯದರ್ಶಿಯ ಸ್ಥಾನಕ್ಕಿಂತ ಕಡಿಮೆ ಇಲ್ಲದವರು, ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನರ ನ್ಯಾಯಕ್ಕಾಗಿ ಅನೇಕ ವರ್ಷಗಳ ಸ್ವಾರ್ಥರಹಿತ ಸೇವೆಯನ್ನು ಮತ್ತು ಅವರ ವ್ಯಕ್ತಿತ್ವದಿಂದಲೇ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನರ ಆತ್ಮವಿಶ್ವಾಸವನ್ನು ಹೆಚ್ಚಿಸುವಂತಹ ಮತ್ತು ಸ್ವಾರ್ಥರಹಿತ ಸೇವೆಯ ದಾಖಲೆ ಹೊಂದಿದವರಾಗಿರಬೇಕು.

(iii) ಮೂವರಲ್ಲಿ ಕನಿಷ್ಟ ಮತ್ತೊಬ್ಬ ಸದಸ್ಯ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದವರಾಗಿರಬೇಕು ಹಾಗೂ ಇತರೆ ಸದಸ್ಯರು ಯಾವುದೇ ಸಮುದಾಯಕ್ಕೆ ಸೇರಿದವರಾಗಿರಬಹುದು, ಅಥವಾ ಮೇಲೆ ತಿಳಿಸಿದ ಉಪಬಂಧ (i) ರಲ್ಲಿ ವಿವರಿಸಿದ ಅರ್ಹತೆ ಮತ್ತು ಗುಣಗಳನ್ನು ಹೊಂದಿದವರಾಗಿರಬೇಕು.

(iv) ಸಂಸತ್ತಿನ ಯಾವುದೇ ಸದಸ್ಯರು ಅಥವಾ ಯಾವುದೇ ರಾಜ್ಯದ ಅಥವಾ ಕೇಂದ್ರಾಡಳಿತ ಪ್ರದೇಶದ ಶಾಸನಸಭೆ ಸದಸ್ಯರು ಮತ್ತು ಲಾಭತರುವ ಹುದ್ದೆಯನ್ನು ಹೊಂದಿದ ವ್ಯಕ್ತಿ ಅಥವಾ ರಾಜಕೀಯ ಪಕ್ಷದೊಟ್ಟಿಗೆ ಸಂಬಂಧ ಇರುವ ವ್ಯಕ್ತಿ ಅಥವಾ ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡದ ಹಿತಾಸಕ್ತಿಗೆ ವಿರೋಧ ಇರುವ ವ್ಯಕ್ತಿಯು ಅಧ್ಯಕ್ಷ ಮತ್ತು ಇತರೆ ಸದಸ್ಯರಾಗಬಾರದು.

(v) ರಾಷ್ಟ್ರೀಯ ಪ್ರಾಧಿಕಾರದ ಅಧ್ಯಕ್ಷ ಮತ್ತು ಇತರೆ ಸದಸ್ಯರನ್ನು ಕೇಂದ್ರ ಸರ್ಕಾರವು ಮೇಲೆ ತಿಳಿಸಿದ ಉಪಬಂಧ (i)ರಲ್ಲಿ ತಿಳಿಸಿದಂತೆ ಇರುವ ಅರ್ಹತೆ ಮತ್ತು ಗುಣಗಳು ಇರುವಂತಹ ವ್ಯಕ್ತಿಗಳ ಪ್ಯಾನೆಲ್ ತಯಾರಿಸಿ ಅಂತಹ ಪ್ಯಾನೆಲ್‌ನಿಂದ ಆಯ್ಕೆ ಮಾಡತಕ್ಕದ್ದು. ಪ್ಯಾನೆಲ್‌ನಲ್ಲಿ ಹೆಸರುಗಳನ್ನು ಸೇರಿಸಲು ರಾಜ್ಯ ಸರ್ಕಾರಗಳು ಸಲಹೆ ಮಾಡಿದ ದಲಿತ ಮತ್ತು ಮಾನವಹಕ್ಕುಗಳ ಸಂಸ್ಥೆಗಳ ಮತ್ತು ಸಮರ್ಥ ಹೆಸರುಗಳನ್ನು ಕೇಂದ್ರ ಸರಕಾರವು ಸೂಕ್ತವಾಗಿ ಪರಿಶೀಲಿಸಿ ಪರಿಗಣಿಸತಕ್ಕದ್ದು. ನೇಮಕ ಮಾಡುವ ಈ ಪ್ಯಾನೆಲ್ ವ್ಯವಸ್ಥೆಯು ಮುಂದುವರೆಯುತ್ತದೆ ಹಾಗೂ ಹೆಸರುಗಳನ್ನು ಸೇರಿಸುವ ಮತ್ತು ತೆಗೆದು ಹಾಕುವ ಕೆಲಸವನ್ನು ಕಾಲಕಾಲಕ್ಕೆ ಮಾಡಲಾಗುವುದು. ಪ್ಯಾನೆಲ್ ಮತ್ತು ಕಾಲಕಾಲಕ್ಕೆ ಮಾಡಿದ ಬದಲಾವಣೆಗಳನ್ನು ಕೇಂದ್ರ ಸರ್ಕಾರದ ಅಂತರ್ಜಾಲ ಮತ್ತು ಇತರೆ ಮಾಧ್ಯಮಗಳ ಮೂಲಕ ಸಾರ್ವಜನಿಕ ವಲಯಕ್ಕೆ ನೀಡುವುದು ಮತ್ತು ಪ್ಯಾನೆಲ್ ಸದಸ್ಯರ ವಿರುದ್ಧ ಬರುವಂತಹ ಯಾವುದೇ ಸತ್ಯಾಂಶವನ್ನು ಕೇಂದ್ರ ಸರ್ಕಾರವು ಸತ್ಯಾಂಶದ ಅರ್ಹತೆಯ ಆಧಾರದಲ್ಲಿ ನೇಮಕಾತಿಯಲ್ಲಿ ಪರಿಗಣಿಸತಕ್ಕದ್ದು.

(1). **ಅಧ್ಯಕ್ಷರ ಮತ್ತು ಇತರೆ ಸದಸ್ಯರ ನೇಮಕಾತಿ:–** (i) ಅಧ್ಯಕ್ಷರು ಮತ್ತು ಇತರೆ ಸದಸ್ಯರನ್ನು ರಾಷ್ಟ್ರಪತಿಗಳು ತಮ್ಮ ಅಧಿಕಾರದಲ್ಲಿ ಅವರ ಸಹಿ ಮತ್ತು ಮುದ್ರೆಯ ಮೂಲಕ ನೇಮಕ ಮಾಡುವುದು. ಇಂತಹ ಪ್ರತಿ ನೇಮಕಾತಿಯೂ ಸಹ ಈ ಉಪಬಂಧದಲ್ಲಿ ತಿಳಿಸಿರುವ ಕೆಳಕಂಡ ಸಮಿತಿಯ ಶಿಫಾರಸ್ಸನ್ನು ಪಡೆದು ನೇಮಕಾತಿ ಮಾಡುವುದು–

a. ಪ್ರಧಾನ ಮಂತ್ರಿಗಳು–ಅಧ್ಯಕ್ಷರು
b. ಕೆಳಮನೆಯ ಸಭಾಪತಿಗಳು–ಸದಸ್ಯರು
c. ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಮತ್ತು ಬುಡಕಟ್ಟು ಜನಾಂಗದ ಕಲ್ಯಾಣ ಮಂತ್ರಾಲಯದ ಉಸ್ತುವಾರಿ ಮಂತ್ರಿಗಳು, ಭಾರತ ಸರ್ಕಾರ–ಸದಸ್ಯರು
d. ಕೆಳಮನೆ ಸಭೆಯ ವಿರೋಧ ಪಕ್ಷದ ನಾಯಕರು–ಸದಸ್ಯರು
e. ರಾಜ್ಯಗಳ ಕೌನ್ಸಲ್ ವಿರೋಧ ಪಕ್ಷದ ನಾಯಕರು–ಸದಸ್ಯರು
f. ರಾಜ್ಯಗಳ ಕೌನ್ಸಲ್ ಉಪಾಧ್ಯಕ್ಷರು–ಸದಸ್ಯರು
g. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರ ವಿಶ್ವಾಸ ಗಳಿಸಿರುವ ನಾಗರಿಕ ಸಂಸ್ಥೆಗಳ ಸಮರ್ಥ ಸದಸ್ಯ–ಸದಸ್ಯರು

(ii) ರಾಷ್ಟ್ರೀಯ ಪ್ರಾಧಿಕಾರದ ಅಧ್ಯಕ್ಷರ ಮತ್ತು ಇತರೆ ಸದಸ್ಯರ ನೇಮಕವು ಸಮಿತಿಯ ಹುದ್ದೆಯು ಖಾಲಿ ಇದ್ದ ಮಾತ್ರಕ್ಕೆ ಅನೂರ್ಜಿತಗೊಳ್ಳುವುದಿಲ್ಲ.

(2). **ಅಧಿಕಾರದ ಅವಧಿ ಮತ್ತು ಸೇವೆಗಳ ಷರತ್ತುಗಳು–** (i) ರಾಷ್ಟ್ರೀಯ ಪ್ರಾಧಿಕಾರದ ಸದಸ್ಯರ ಅಧಿಕಾರಾವಧಿಯು ಅಧಿಕಾರ ವಹಿಸಿಕೊಂಡ ದಿನದಿಂದ ಮೂರು ವರ್ಷಗಳಾಗಿರುತ್ತದೆ.

ಒಂದು ವೇಳೆ ಎಲ್ಲರೂ ಬೇರೆ ಬೇರೆ ದಿನಗಳಂದು ಅಧಿಕಾರ ವಹಿಸಿಕೊಂಡರೆ ಎಲ್ಲಾ ಮೂರು ಸದಸ್ಯರ ಅಧಿಕಾರಾವಧಿಯನ್ನು ಅಧ್ಯಕ್ಷರು ಅಧಿಕಾರ ವಹಿಸಿಕೊಂಡ ದಿನಾಂಕದಿಂದ ಗಣನೆ ಮಾಡಲಾಗುವುದು,

ಒಂದು ವೇಳೆ ಈ ಮೂರು ಸದಸ್ಯರಲ್ಲಿ ಯಾವುದಾದರೊಬ್ಬ ಸದಸ್ಯರ ಹುದ್ದೆಯು ಮೂರು ವರ್ಷಗಳಿಗೆ ಮೊದಲು ಯಾವುದಾದರೂ ಕಾರಣಗಳಿಗೆ ಖಾಲಿ ಆದರೆ, ಆ ಸ್ಥಾನಕ್ಕೆ ನೇಮಕಗೊಳ್ಳುವ ಸದಸ್ಯರ ಅಥವಾ ಅಧ್ಯಕ್ಷರ ಅಧಿಕಾರ ಅವಧಿಯು ಮೂರು ವರ್ಷಗಳಲ್ಲಿ ಉಳಿದ ಅವಧಿಗೆ ಮಾತ್ರ ಇರತಕ್ಕದ್ದು.

(ii) ರಾಷ್ಟ್ರೀಯ ಪ್ರಾಧಿಕಾರದ ಅಧ್ಯಕ್ಷರು ಮತ್ತು ಇತರೆ ಸದಸ್ಯರಿಗೆ ಯೂನಿಯನ್ ಸಂಪುಟ ದರ್ಜೆಯ ಮಂತ್ರಿಗಳ ಸ್ಥಾನ ಇರುತ್ತದೆ ಹಾಗೂ ಅವರಿಗೆ ಯಾವುದೇ ಸಂಬಳ ಅಥವಾ ಸಂಭಾವನೆಯನ್ನು ನೀಡಲಾಗುವುದಿಲ್ಲ.

(iii) ರಾಷ್ಟ್ರೀಯ ಪ್ರಾಧಿಕಾರಕ್ಕೆ ತನ್ನ ಕಾರ್ಯನಿರ್ವಹಣೆಗಾಗಿ ಕಛೇರಿಯ ಸ್ಥಳ, ಸಿಬ್ಬಂಧಿ ಮತ್ತು ಇತರೆ ಎಲ್ಲಾ ಕಾರ್ಯಾಚರಣೆಯ ಸೌಲಭ್ಯಗಳನ್ನು ಒದಗಿಸಲಾಗುವುದು ಮತ್ತು ರಾಷ್ಟ್ರೀಯ ಪ್ರಾಧಿಕಾರವು ಈ ನಿಟ್ಟಿನಲ್ಲಿ ಸೂಚಿಸುವ ಯಾವುದೇ ಅಗತ್ಯವನ್ನು ಕೇಂದ್ರ ಸರ್ಕಾರವು ಪೂರೈಸುವುದು.

(iv) ಪ್ರಾಧಿಕಾರದ ಕೆಲಸಕ್ಕೆ ಸಂಬಂಧಿಸಿದೆ ಪ್ರಯಾಣಕ್ಕೆ ಅಥವಾ ಪ್ರಯಾಣದ ವೆಚ್ಚಕ್ಕೆ ಅವರು ಅರ್ಹರಾಗಿರುತ್ತಾರೆ.

(v) ಪ್ರಾಧಿಕಾರದ ಅಧ್ಯಕ್ಷರ ಮತ್ತು ಇತರೆ ಸದಸ್ಯರ ಪ್ರಯಾಣ ಮತ್ತು ಪ್ರವಾಸವನ್ನು ದೇಶದ ಎಲ್ಲೆಡೆ ಕೇಂದ್ರ ಸರ್ಕಾರದ ನೇರ ವೆಚ್ಚದಲ್ಲಿ ಪ್ರಯಾಣ ಭತ್ಯೆ ಮತ್ತು ಪ್ರಯಾಣ ಭತ್ಯೆಯ ಬಿಲ್ ಅಗತ್ಯತೆಯನ್ನು ನವಾರಿಸಿ ಎಲ್ಲಾ ರೀತಿಯ ವ್ಯವಸ್ಥೆಗಳನ್ನು ಮಾಡತಕ್ಕದ್ದು.

(vi) ಪ್ರಾಧಿಕಾರದ ಅಧ್ಯಕ್ಷರು ಅಥವಾ ಇನ್ಯಾವುದೇ ಸದಸ್ಯರು ಪ್ರವಾಸ ಮಾಡುವ ಸಂದರ್ಭದಲ್ಲಿ ಉಳಿದುಕೊಳ್ಳಲು, ಅತಿಥ್ಯ ಮತ್ತು ಇತರ ಕಾರ್ಯಾಚರಣೆಯ ಸೌಲಭ್ಯಗಳನ್ನು ಅವರ ಸ್ಥಾನಕ್ಕೆ ಅನುಗುಣವಾಗಿ, ಯಾವುದೇ ವೆಚ್ಚವಿಲ್ಲದೆ ಪುಕ್ಕಟೆಯಾಗಿ ಅಥವಾ ರಾಜ್ಯ ಸರ್ಕಾರ/ ಕೇಂದ್ರಾಡಳಿತ ಪ್ರದೇಶಗಳು ಖರ್ಚನ್ನು ಹೊರಿಸಬೇಕೆಂದು ಭಾವಿಸಿದರೆ ನೇರವಾಗಿ ಕೇಂದ್ರ ಸರ್ಕಾರದ ಮೇಲೆ ಹೊರಿಸುವ ಮೂಲಕ ರಾಜ್ಯ ಸರ್ಕಾರ/ಕೇಂದ್ರಾಡಳಿತ ಪ್ರದೇಶದ ಆಡಳಿತವು ರಾಜ್ಯ ಅತಿಥಿ ಗೃಹಗಳಲ್ಲಿ ಸೂಕ್ತ ವ್ಯವಸ್ಥೆಗಳನ್ನು ಮಾಡತಕ್ಕದ್ದು. ಮತ್ತು ಅವರು ಯಾವುದೇ ಖಾಸಗಿ ಹೋಟೆಲುಗಳಲ್ಲಿ ಉಳಿದುಕೊಂಡು ಅತಿಥ್ಯ ಸ್ವೀಕರಿಸಬಾರದು.

(3). **ರಾಜಿನಾಮೆ ಮತ್ತು ತೆರವು–** (i) ರಾಷ್ಟ್ರೀಯ ಪ್ರಾಧಿಕಾರದ ಅಧ್ಯಕ್ಷರು ಮತ್ತು ಪ್ರತಿ ಇತರೆ ಸದಸ್ಯರು ತಮ್ಮ ಹುದ್ದೆಗೆ ರಾಜಿನಾಮೆಯನ್ನು ರಾಷ್ಟ್ರಪತಿಗಳಿಗೆ, ಸಹಿ ಹಾಕಿದ ಸೂಚನೆಯ ಮೂಲಕ ನೀಡಬಹುದು.

(ii) (a) ರಾಷ್ಟ್ರೀಯ ಪ್ರಾಧಿಕಾರದ ಅಧ್ಯಕ್ಷರು ಅಥವಾ ಇತರೆ ಸದಸ್ಯರನ್ನು ದುರ್ನಡತೆ ಅಥವಾ ಈ ಕಾಯ್ದೆಯ ಅಡಿಯಲ್ಲಿ ಬರುವ ತಮ್ಮ ಕಾರ್ಯ ಸಾಧನೆಯಲ್ಲಿ ಕೊರತೆಯ ಆಧಾರದಲ್ಲಿ ರಾಷ್ಟ್ರಪತಿಗಳು ಆದೇಶದ ಮೂಲಕ ಅಧಿಕಾರದಿದ ವಜಾಗೊಳಿಸಬಹುದು.

(b) ರಾಷ್ಟ್ರೀಯ ಪ್ರಾಧಿಕಾರದ ಅಧ್ಯಕ್ಷರು ಅಥವಾ ಇನ್ಯಾವುದೇ ಸದಸ್ಯರ ಕುರಿತು ಈ ಉಪನಿಯಮದ ಅಡಿಯಲ್ಲಿ ಸರ್ವೋಚ್ಚ ನ್ಯಾಯಾಲಯಕ್ಕೆ ಉಲ್ಲೇಖ ನೀಡಿದ್ದರೆ, ಅಂತಹ ಉಲ್ಲೇಖದ ಮೇಲೆ ಸರ್ವೋಚ್ಚ ನ್ಯಾಯಾಲಯದ ವರದಿಯನ್ನು ಆಧರಿಸಿ ರಾಷ್ಟ್ರಪತಿಗಳು ಆದೇಶ ನೀಡುವವರೆಗೂ ರಾಷ್ಟ್ರಪತಿಗಳು ಅವರನ್ನು ಅಮಾನತ್ತಿನಲ್ಲಿ ಇಡಬಹುದು.

(c) ಉಪಬಂಧ (a)ಯಲ್ಲಿ ತಿಳಿಸಿರುವ ಎಲ್ಲವನ್ನೂ ಬದಿಗಿಟ್ಟು ರಾಷ್ಟ್ರೀಯ ಪ್ರಾಧಿಕಾರದ ಅಧ್ಯಕ್ಷರನ್ನು ಅಥವಾ ಇನ್ಯಾವುದೇ ಸದಸ್ಯರನ್ನು ಈ ಕೆಳಕಂಡ ಕಾರಣಗಳಿಗಾಗಿ ಅಧಿಕಾರದಿಂದ ತೆರವುಗೊಳಿಸಬಹುದು.

(1) ದೀವಾಳಿ ಎಂದು ತೀರ್ಪು ಇತ್ತರೆ; ಅಥವಾ

(2) ತನ್ನ ಅಧಿಕಾರಾವಧಿಯಲ್ಲಿ ಕಛೇರಿಯ ಕರ್ತವ್ಯಗಳಿಂದ ಹೊರಗೆ ಯಾವುದೇ ರೀತಿಯ ವೇತನದ ಉದ್ಯೋಗದಲ್ಲಿ ಭಾಗಿಯಾಗಿದ್ದರೆ; ಅಥವಾ

(3) ಯಾವುದೇ ಅಪರಾಧವು ಸಾಬೀತುಗೊಂಡು ಸೆರೆಮನೆಯ ಶಿಕ್ಷೆ ವಿಧಿಸಲ್ಪಟ್ಟಿದ್ದರೆ ಮತ್ತು ಅಂತಹ ಶಿಕ್ಷೆಯು ನೈತಿಕ ಭ್ರಷ್ಟತೆ ಎಂದು ರಾಷ್ಟ್ರಪತಿಗಳು ಅಭಿಪ್ರಾಯಪಟ್ಟರೆ; ಅಥವಾ

(4) ರಾಷ್ಟ್ರಪತಿಗಳ ಅಭಿಪ್ರಾಯದಲ್ಲಿ, ಬುದ್ಧಿ ಅಥವಾ ದೇಹ ಸ್ಥಿಮಿತದಲ್ಲಿ ಇಲ್ಲವೆಂಬ ಕಾರಣಕ್ಕೆ ಅಥವಾ ಆ ವ್ಯಕ್ತಿಯನ್ನು ಅಧಿಕಾರದಲ್ಲಿ ಮುಂದುವರಿಸುವುದು ಪರಿಶಿಷ್ಟ ಜಾತಿಯವರ ಹಿತಾಸಕ್ತಿಗೆ ಧಕ್ಕೆ ಬರುವಂತೆ ಅಧ್ಯಕ್ಷರ ಸ್ಥಾನಕ್ಕೆ ನಿಂದನೆ ಮಾಡಿದ್ದರೆ, ಅಥವಾ ಈ ಕಾಯ್ದೆಯ ಕಾರ್ಯಗಳನ್ನು ನೆರವೇರಿಸುವಲ್ಲಿ ಪರಿಣಾಮಕಾರಿ ಇಲ್ಲದಿದ್ದರೆ ಅಥವಾ ನಿರ್ಲಕ್ಷತನ ತೋರುವ ಮೂಲಕ ಅಧಿಕಾರದಲ್ಲಿ ಮುಂದುವರಿಯಲು ಯೋಗ್ಯತೆಯಿಲ್ಲ ಎಂದು ಕಂಡು ಬಂದರೆ.

ಆದರೆ ಈ ಉಪನಿಯಮದ ಅಡಿಯಲ್ಲಿ ಅಧ್ಯಕ್ಷರು ಅಥವಾ ಇನ್ಯಾವುದೇ ಸದಸ್ಯರನ್ನು ಅಧಿಕಾರದಿಂದ ತೆರವುಗೊಳಿಸುವ ಮುನ್ನ ಅವರ ಅಹವಾಲುಗಳನ್ನು ಕೇಳಲು ಸಕಾರಣದ ಅವಕಾಶ ನೀಡುವವರೆಗೂ ಅಧಿಕಾರದಿಂದ ತೆರವುಗೊಳಿಸಬಾರದು.

ರಾಷ್ಟ್ರೀಯ ಪ್ರಾಧಿಕಾರದ ಅಧ್ಯಕ್ಷರು ಅಥವಾ ಇನ್ಯಾವುದೇ ಸದಸ್ಯರು ಅಥವಾ ಭಾರತ ಸರ್ಕಾರದ ಪರವಾಗಿ ಅಥವಾ ರಾಜ್ಯ ಸರ್ಕಾರದ ಪರವಾಗಿ ಯಾವುದೇ ರೀತಿಯಲ್ಲಿ ಯಾವುದೇ ಕರಾರುಗಳಲ್ಲಿ ಅಥವಾ ಒಪ್ಪಂದಗಳಲ್ಲಿ ಅಥವಾ ಲಾಭ ತರುವಂತಹ ಯಾವುದೇ ಕಂಪನಗಳ ಇತರೆ ಸದಸ್ಯರ ಜೊತೆಯಲ್ಲಿ, ಹಿತಾಸಕ್ತಿ ಹೊಂದಿದ್ದರೆ ನಿಬಂಧನೆ(a) ಉದ್ದೇಶಕ್ಕಾಗಿ ಆತನನ್ನು ದುರ್ನಡತೆಯ ತಪ್ಪಿತಸ್ಥ ಎಂದು ಪರಿಗಣಿಸುವುದು.

2] **ಸೆಕ್ಷನ್: ಅಧ್ಯಾಯ–II B ಕಲಂ 18**

**ಪ್ರಸ್ತಾವಿತ ಪದಗಳು: ರಾಷ್ಟ್ರೀಯ ಪ್ರಾಧಿಕಾರದ ಕಾರ್ಯಗಳು ಮತ್ತು ಅಧಿಕಾರ– ರಾಷ್ಟ್ರೀಯ ಪ್ರಾಧಿಕಾರದ ಕರ್ತವ್ಯವು–**

(i) ಗಂಭೀರವಾದ ಪಾತಕ ಕೃತ್ಯಗಳಾದಂತಹ ಸಾಮೂಹಿಕ ಹತ್ಯೆ/ಒಬ್ಬರಿಗಿಂತ ಹೆಚ್ಚು ವ್ಯಕ್ತಿಗಳ ಕೊಲೆ, ಸಾಮೂಹಿಕ ಅತ್ಯಾಚಾರ/ಒಬ್ಬ ಮಹಿಳೆಗಿಂತ ಹೆಚ್ಚು ಮಹಿಳೆಯರ ಅತ್ಯಾಚಾರ, ಬೆಂಕಿ ಹಚ್ಚುವ ಮೂಲಕ ಕಿಡಿಗೇಡಿತನ, ಲೆಕ್ಕವಿಲ್ಲದಷ್ಟು ಮನೆ ಮತ್ತು ಇತರೆ ಆಸ್ತಿಗಳನ್ನು ಧ್ವಂಸ ಅಥವಾ ಹಾನಿಗೊಳಿಸಿದ್ದರೆ, ಸಾಮಾಜಿಕ ಮತ್ತು ಆರ್ಥಿಕ ಬಹಿಷ್ಕಾರವನ್ನು ಹೇರಿದ್ದರೆ ಮತ್ತು ಎಲ್ಲಾ ನಿರ್ಬಂಧಕ, ದಂಡನಾರ್ಹ, ಪುನರ್ವಸತಿ ಕ್ರಮಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲಾಗಿದೆಯೋ ಎಂದು ನೋಡಲು ದೌರ್ಜನ್ಯದ ಸ್ಥಳಗಳಿಗೆ ಭೇಟಿ ನೀಡುವುದು;

(ii) ವಿಶೇಷ ಕೋಶದ ಕಾರ್ಯಾಚರಣೆ, ವಿಶೇಷ ಅಧಿಕಾರಿ, ಜಿಲ್ಲಾ ಮ್ಯಾಜಿಸ್ಟ್ರೇಟ್ ಮತ್ತು ಪೋಲೀಸ್ ಸೂಪರಿಂಟೆಂಡೆಂಟ್ ಅಥವಾ ಇವರಿಂದ ನಿಯೋಜಿತರಾದ ಅಧಿಕಾರಿಗಳು, ತನಿಖಾಧಿಕಾರಿಗಳು, ರಾಜ್ಯ ಜಾಗೃತಿ ಮತ್ತು ಮೇಲ್ವಿಚಾರಣೆ ಸಮಿತಿ, ಜಿಲ್ಲಾ ಮೇಲ್ವಿಚಾರಣೆ ಮತ್ತು ಜಾಗೃತಿ ಸಮಿತಿ ಮತ್ತು ಈ ಕಾಯ್ದೆಯ ಅನುಷ್ಠಾನದ ಜವಾಬ್ದಾರಿ ಹೊತ್ತ ಇತರೆ ಅಧಿಕಾರಿಗಳ ಮೇಲ್ವಿಚಾರಣೆ ಮಾಡುವುದು ಮತ್ತು ಈ ಅಧಿಕಾರಿಗಳು ಮತ್ತು ಸಮಿತಿಗಳು/ಕೋಶಗಳು ಮಾಡಿರುವ ದೋಷಗಳನ್ನು ಸರಿಪಡಿಸಿ ಕಾಯ್ದೆಯ ಪರಿಣಾಮಕಾರಿ ಅನುಷ್ಠಾನವನ್ನು ಕೈಗೊಳ್ಳಲು ಸೂಕ್ತ ದಂಡನಾರ್ಹ ಕ್ರಮಗಳ ಆದೇಶಗಳನ್ನು ಹೊರಡಿಸುವುದು;

(iii) ರಾಷ್ಟ್ರೀಯ ಪ್ರಾಧಿಕಾರವು; (a) ನಿಯಮ 4ರ ಉಪನಿಯಮ (2) ಮತ್ತು (4) ಮತ್ತು ನಿಯಮ 6ರ ಉಪನಿಯಮ (1), ನಿಯಮ ೮ರ ಉಪನಿಯಮ (1)ರ ಪರಿಚ್ಛೇದ (xi)ರ ಅಡಿಯಲ್ಲಿ ರಾಜ್ಯ ಸರ್ಕಾರಗಳಿಂದ ಬಂದ ವರದಿಯನ್ನು; (b) ಕಾಯ್ದೆಯ ಅಡಿಯಲ್ಲಿ ದಾಖಲಾದ ಪ್ರಕರಣಗಳ ಸ್ಥಿತಿಗತಿ; (c) ಗುರುತಿಸಲಾದ ಪ್ರದೇಶದಲ್ಲಿ ಕಾನೂನು ಮತ್ತು ಸುವ್ಯವಸ್ಥೆಯ ಪರಿಸ್ಥಿತಿ; (d) ದೌರ್ಜನ್ಯಕ್ಕೆ ಬಲಿಯಾದ ವ್ಯಕ್ತಿಗೆ

ಅಥವಾ ಅವನ ಅಥವಾ ಅವಳ ಅವಲಂಬಿತರಿಬ್ಬರಿಗೂ ನಗದು ಅಥವಾ ಇತರೆ ಅಥವಾ ಎರಡೂ ರೂಪದಲ್ಲಿ ತಕ್ಷಣದ ಪರಿಹಾರವನ್ನು ಒದಗಿಸಲು ಅಳವಡಿಸಿಕೊಂಡ ಕ್ರಮಗಳನ್ನು ಮರುಪರಿಶೀಲನೆ ಮಾಡತಕ್ಕದ್ದು;

(iv) ಯಾವುದೇ ವ್ಯಕ್ತಿ ಅಥವಾ ಸಂಸ್ಥೆ ಈ ಕಾಯ್ದೆಯಲ್ಲಿ ನಿರ್ವಹಿಸಬೇಕಿರುವ ಹಲವು ಕಾರ್ಯಗಳನ್ನು ನೆರವೇರಿಸಲು ವಿಫಲಗೊಂಡಿರುವ ಕುರಿತು ಅಥವಾ ಈ ಕಾಯ್ದೆಯ ಅಡಿಯಲ್ಲಿ ಆತನ ಜವಾಬ್ದಾರಿಗಳನ್ನು ನೆರವೇರಿಸುವಲ್ಲಿ ವಿಫಲನಾಗಿರುವ ಕುರಿತು ಅಥವಾ ಇವರಲ್ಲಿ ಯಾರಾದರೂ ಒಬ್ಬರು ರಕ್ಷಣೆಯ, ನಿರ್ಬಂಧಕದ ಮತ್ತು ಪುನರ್ವಸತಿಯ ಕ್ರಮಗಳನ್ನು ನಿರ್ವಹಿಸುವ ಜವಾಬ್ದಾರಿಯನ್ನು ಸರಿಯಾಗಿ ನೆರವೇರಿಸಿಲ್ಲವಾದರೆ ಅಥವಾ ಇವರಲ್ಲಿ ಯಾರೊಬ್ಬರಾದರೂ ಕರ್ತವ್ಯವನ್ನು ನಿರ್ಲಕ್ಷಿಸಿದ್ದರ ಕುರಿತು ಯಾವುದೇ ಬಲಿಯಾದ ವ್ಯಕ್ತಿ ಅಥವಾ ಅವನಿಗೆ ಸ್ವಇಚ್ಛೆಯಿಂದ ಸಹಾಯ ಮಾಡುತ್ತಿರುವ ಸಾಮಾಜಿಕ ಕಾರ್ಯಕರ್ತನಿಂದ ಪ್ರಾಧಿಕಾರಕ್ಕೆ ದೂರು ಬಂದಲ್ಲಿ ರಾಷ್ಟ್ರೀಯ ಪ್ರಾಧಿಕಾರವು ಆ ದೂರನ್ನು ಪಡೆದು ವಿಚಾರಣೆ ಮಾಡುವುದು ಕರ್ತವ್ಯ ಆಗಿರುತ್ತದೆ;

(v) ಒಂದು ವೇಳೆ ರಾಷ್ಟ್ರೀಯ ಪ್ರಾಧಿಕಾರಕ್ಕೆ ಅಂತಹ ದೂರುಗಳ ಸಕಾರಣ ತೃಪ್ತಿಯಾದರೆ, ಆ ಕುರಿತು ವಿಚಾರಣೆಯನ್ನು ಪ್ರಾರಂಭಿಸತಕ್ಕದ್ದು;

(vi) ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಸದಸ್ಯನೊಬ್ಬನ ಮೇಲೆ ದೌರ್ಜನ್ಯದ ಆರೋಪ ಇರುವ ನ್ಯಾಯಾಲಯದಲ್ಲಿ ಬಾಕಿ ಇರುವ ಪ್ರಕರಣವಾಗಿದ್ದರೆ ಅಂತಹ ನ್ಯಾಯಾಲಯದ ಅನುಮೋದನೆಯೊಂದಿಗೆ ಯಾವುದೇ ಪ್ರಕ್ರಿಯೆಯಲ್ಲಿ ಮಧ್ಯಪ್ರವೇಶಿಸಬಹುದು;

(vii) ರಾಷ್ಟ್ರೀಯ ಪ್ರಾಧಿಕಾರವು ಈ ಕಲಂ ಅಡಿಯಲ್ಲಿ ಯಾವುದೇ ವಿಷಯವನ್ನು ವಿಚಾರಣೆ ಮಾಡುವಾಗ, ಸಿವಿಲ್ ದಂಡ ಸಂಹಿತೆ 1908ರ ಅಡಿಯಲ್ಲಿ ಮೊಕದ್ದಮೆಯನ್ನು ನಿರ್ವಹಿಸುವ ಸಿವಿಲ್ ನ್ಯಾಯಾಲಯದ ಅಧಿಕಾರವು ಈ ಪ್ರಾಧಿಕಾರಕ್ಕೆ ಈ ಕೆಳಕಂಡ ವಿಷಯಗಳಿಗೆ ಇರುತ್ತದೆ.

a. ಸಾಕ್ಷಿಯನ್ನು ಸಮನ್ ಮೂಲಕ ಹಾಜರಾಗುವಂತೆ ಮತ್ತು ಅವರನ್ನು ಪ್ರತಿಜ್ಞೆಯ ಮೂಲಕ ಪರೀಕ್ಷಿಸಲು;
b. ಯಾವುದೇ ದಾಖಲೆಯನ್ನು ಪತ್ತೆಹಚ್ಚುವುದು ಮತ್ತು ಮುಂದಿಡುವುದು;
c. ಅಫಿದವಿತ್ ಮೂಲಕ ಸಾಕ್ಷಿ ಪಡೆಯುವುದು;
d ಯಾವುದೇ ನ್ಯಾಯಾಲಯ ಅಥವಾ ಕಛೇರಿಯಿಂದ ಯಾವುದೇ ಸಾರ್ವಜನಿಕ ದಾಖಲೆಯನ್ನು ಅಥವಾ ಅದರ ಪ್ರತಿಯನ್ನು ಕೋರುವುದು;
e. ಯಾವುದೇ ದಾಖಲೆ ಅಥವಾ ಸಾಕ್ಷಿಯನ್ನು ಪರೀಕ್ಷಿಸಲು ಅನುಮತಿ ನೀಡುವುದು
f. ಇನ್ಯಾವುದೇ ಇತರೆ ವಿಷಯವನ್ನು ತಿಳಿಸಬಹುದು

(viii) ಸಂಸತ್ತಿನ ಅಥವಾ ರಾಜ್ಯ ಶಾಸನಸಭೆಯ ಇನ್ಯಾವುದೇ ಕಾನೂನನ್ನು ಬದಿಗಿಟ್ಟು, ರಾಷ್ಟ್ರೀಯ ಪ್ರಾಧಿಕಾರವು ಯಾವುದೇ ದೂರಿನ ವಿಚಾರಣೆಯನ್ನು ನಡೆಸುವಾಗ, ಯಾವುದೇ ಸಾರ್ವಜನಿಕ ಪ್ರಾಧಿಕಾರದ ನಿಯಂತ್ರಣದಲ್ಲಿರುವ ಯಾವುದೇ ದಾಖಲೆಯನ್ನು ಈ ಕಾಯ್ದೆಯ ಅಡಿಯಲ್ಲಿ ಪರೀಕ್ಷಿಸಬಹುದು ಹಾಗೂ ಅದನ್ನು ಯಾವುದೇ ಅಧಾರದಲ್ಲಿ ಹಿಡಿದಿಡುವಂತಿಲ್ಲ.

(ix) ರಾಷ್ಟ್ರೀಯ ಪ್ರಾಧಿಕಾರವು, ದೂರನ್ನು ವಿಚಾರಣೆ ಮಾಡುವಾಗ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರ ಅಥವಾ ಯಾವುದೇ ಪ್ರಾಧಿಕಾರ ಅಥವಾ ಅಧೀನ ಸಂಸ್ಥೆಯಿಂದ ಮಾಹಿತಿ ಅಥವಾ ವರದಿಯನ್ನು ತಾನು ತಿಳಿಸಿದ ನಿರ್ಧಿಷ್ಟ ಸಮಯದೊಳಗೆ ಕೇಳಬಹುದು; ಒಂದು ವೇಳೆ ನಿರ್ಧಿಷ್ಟ ಸಮಯದ ಒಳಗೆ ಮಾಹಿತಿ ಅಥವಾ ವರದಿ ಪ್ರಾಧಿಕಾರದ ಕೈ ಸೇರದೇ ಹೋದರೆ, ಅದು ದೂರಿನಲ್ಲಿ ದೊರೆಯುವ ಸಾಕ್ಷಿಯ ಅಧಾರದ ಮೇರೆಗೆ ಮತ್ತು ತನಗೆ ದೊರೆಯುವ ವಸ್ತುಗಳ ಆಧಾರದ ಮೇರೆಗೆ ವಿಚಾರಣೆ ಪ್ರಕ್ರಿಯೆಯನ್ನು ತನ್ನಂತಾನೆ ಮುಂದುವರೆಸಬಹುದು; ಒಂದು ವೇಳೆ, ಮಾಹಿತಿ ಅಥವಾ ವರದಿ ದೊರೆತರೆ, ಅಗತ್ಯದ ಕ್ರಮವನ್ನು ಸಂಬಂಧಿತ ಸರ್ಕಾರ ಅಥವಾ ಪ್ರಾಧಿಕಾರ ಈಗಾಗಲೇ ಕೈಗೊಂಡಿದೆ ಎಂದೂ, ಮುಂದಿನ ವಿಚಾರಣೆಯ ಅಗತ್ಯವಿಲ್ಲ ಎಂದೂ ಪ್ರಾಧಿಕಾರಕ್ಕೆ ಮನವರಿಕೆಯಾದರೆ, ಅದು ವಿಚಾರಣೆಯನ್ನು ಮುಂದುವರಿಸದೇ ಇರಬಹುದು ಮತ್ತು ದೂರುದಾರನಿಗೆ ಆ ರೀತಿಯಲ್ಲಿ ತಿಳಿಸಬೇಕು;

(x) ರಾಷ್ಟ್ರೀಯ ಪ್ರಾಧಿಕಾರವು ಯಾವುದೇ ದೂರಿನ ವಿಚಾರಣೆಯನ್ನು ಮುಗಿಸಿದ ನಂತರ,

a. ಕೈಗೊಂಡ ನಿರ್ಧಾರವನ್ನು ಕಾಯ್ದೆಯಲ್ಲಿ ತಿಳಿಸಿದಂತೆ ನಿರ್ಧಿಷ್ಟವಾಗಿ ಪೂರೈಸಬೇಕಿದ್ದರೆ ಹಾಗೆ ಮಾಡುವುದು, ದಾಖಲಿಸುವುದು, ಮತ್ತು ತನ್ನ ನಿರ್ಧಾರವನ್ನು ತಿಳಿಸುವುದು

i ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರ ಆಯಾ ಪ್ರಕರಣಕ್ಕೆ ತಕ್ಕಂತೆ, ಅಥವಾ ಯಾವುದೇ ಸಾರ್ವಜನಿಕ ಪ್ರಾಧಿಕಾರ ಅಥವಾ ಸಾರ್ವಜನಿಕ ಸೇವಕ ಅಥವಾ ಈ ಕಾಯ್ದೆಯ ಅಡಿಯಲ್ಲಿ ಕರ್ತವ್ಯವನ್ನು ಹೊರಿಸಿರುವ ಇನ್ಯಾವುದೇ ಇತರೆ ವ್ಯಕ್ತಿಯು, ತನಿಖಾಧಿಕಾರಿ ಅಥವಾ ವಿಶೇಷ ಪಬ್ಲಿಕ್ ಪ್ರಾಸಿಕ್ಯೂಟರ್ ಅಥವಾ ಯಾವುದೇ ಸಾರ್ವಜನಿಕ ಸೇವಕನ ಬದಲಾವಣೆಯನ್ನೂ ಒಳಗೊಂಡಂತೆ ಇನ್ಯಾವುದೇ ನ್ಯೂನತೆ ತನ್ನ/ಅವನ ಕಡೆಯಿಂದ ಅಥವಾ ಅಧೀನ ಸಿಬ್ಬಂಧಿಯ ಕಡೆಯಿಂದ ಅಂತಹ ಬದಲಾವಣೆ ಅಗತ್ಯ ಎಂದು ಪ್ರಾಧಿಕಾರವು ಪತ್ತೆ ಹಚ್ಚಿದರೆ.

ii ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರ, ಆಯಾ ಪ್ರಕರಣಕ್ಕೆ ತಕ್ಕಂತೆ, ಅಥವಾ ಯಾವುದೇ ಸಾರ್ವಜನಿಕ ಪ್ರಾಧಿಕಾರ ಅಥವಾ ಸಾರ್ವಜನಿಕ ಸೇವಕ ತನ್ನ/ಅವನ ಯಾವುದೇ ಕರ್ತ್ಯವ್ಯವನ್ನು ಅಥವಾ ಕಾಲಕಾಲಕ್ಕೆ ನೆರವೇರಿಸುತ್ತಿಲ್ಲವೋ, ಅಂತಹ ಕರ್ತವ್ಯ ಈ ಕಾಯ್ದೆಯಲ್ಲಿ ತಿಳಿಸಿದಂತೆ ಮಾಡುವುದರಲ್ಲಿ ಜಿಲ್ಲಾ ಮತ್ತು ರಾಜ್ಯ ಮೇಲ್ವಿಚಾರಣೆ ಜಾಗೃತಿ ಸಮಿತಿಗಳು ಕಾಲಕ್ರಮಕ್ಕೆ ಸಭೆ ಸೇರುವುದು ಮತ್ತು ಪುನರಾವಲೋಕನ ಸಭೆ ನಡೆಸುವುದನ್ನೂ ಒಳಗೊಂಡಂತೆ ಮಾಡಬೇಕಿದ್ದರೆ.

iii ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರ, ಆಯಾ ಪ್ರಕರಣಕ್ಕೆ ತಕ್ಕಂತೆ, ಅಥವಾ ಯಾವುದೇ ಸಾರ್ವಜನಿಕ ಪ್ರಾಧಿಕಾರ ಕಲಂ (4)ರ ಅಡಿಯಲ್ಲಿ ಯಾವುದೇ ಸಾರ್ವಜನಿಕ ಅಧಿಕಾರಿಯ ವಿರುದ್ಧ ಪ್ರಾಸಿಕ್ಯೂಷನ್ ಪ್ರಾರಂಭಿಸಬೇಕಿದ್ದರೆ ಅಂತಹ ಪ್ರಾಸಿಕ್ಯೂಷನನ್ನು ರಾಷ್ಟ್ರೀಯ ಪ್ರಾಧಿಕಾರವು ಸಮರ್ಥಿಸಿದರೆ.

iv. ಈ ಕಾಯ್ದೆಯಲ್ಲಿ ವಿಚಾರವೊಂದನ್ನು ನಿರ್ಧಿಷ್ಟವಾಗಿ ವಿವರಿಸದೇ ಇದ್ದರೂ ಸಹ ರಾಷ್ಟ್ರೀಯ ಪ್ರಾಧಿಕಾರದ ಅಭಿಪ್ರಾಯದಲ್ಲಿ ಅಂತಹ ವಿಚಾರದ ನೆರವೇರಿಕೆಯು ಈ ಕಾಯ್ದೆಯ ಉದ್ದೇಶದಲ್ಲಿ ಅಗತ್ಯ ಎಂದಾದರೆ, ಪ್ರಾಧಿಕಾರವು ಕೇಂದ್ರ ಸರ್ಕಾರಕ್ಕೆ ಅಥವಾ ರಾಜ್ಯ ಸರ್ಕಾರಕ್ಕೆ, ಆಯಾ ಪ್ರಕರಣಕ್ಕೆ ತಕ್ಕಂತೆ, ಅಥವಾ ಇನ್ಯಾವುದೇ ಸಾರ್ವಜನಿಕ ಪ್ರಾಧಿಕಾರಕ್ಕೆ ತನ್ನ ಸಲಹೆಯನ್ನು ನೀಡಬಹುದು.

v. ರಾಷ್ಟ್ರೀಯ ಪ್ರಾಧಿಕಾರದ ನಿರ್ಧಾರ ಮತ್ತು ಸಲಹೆಯನ್ನು ಕೇಂದ್ರ ಸರ್ಕಾರಕ್ಕೆ ಅಥವಾ ರಾಜ್ಯ ಸರ್ಕಾರಕ್ಕೆ, ಆಯಾ ಪ್ರಕರಣಕ್ಕೆ ತಕ್ಕಂತೆ, ಎಲ್ಲಿ ಕ್ರಮವನ್ನು ತೆಗೆದುಕೊಳ್ಳಬೇಕಿದೆಯೋ ಅದನ್ನು ಸರ್ಕಾರಕ್ಕೆ ತಿಳಿಸಬೇಕು ಅಥವಾ ಇನ್ನಾವುದೇ ಸಂಬಂಧಿತ ಸಾರ್ವಜನಿಕ ಪ್ರಾಧಿಕಾರಕ್ಕೆ ಕೇಂದ್ರ ಸರ್ಕಾರ ಮತ್ತು/ಅಥವಾ ರಾಜ್ಯ ಸರ್ಕಾರಕ್ಕೆ ಮಾಹಿತಿಯೊಂದಿಗೆ.

vi. ರಾಷ್ಟ್ರೀಯ ಪ್ರಾಧಿಕಾರದ ನಿರ್ಧಾರವು ಆಯಾ ಪ್ರಕರಣಕ್ಕೆ ತಕ್ಕಂತೆ, ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರ ಅಥವಾ ಇನ್ನಾವುದೇ ಸಾರ್ವಜನಿಕ ಪ್ರಾಧಿಕಾರ ಅಥವಾ ಸಾರ್ವಜನಿಕ ಸೇವಕನ ಬಾಧ್ಯತೆಯಾಗುತ್ತದೆ.

vii ರಾಷ್ಟ್ರೀಯ ಪ್ರಾಧಿಕಾರದ ನಿರ್ಧಾರವನ್ನು ಸ್ವೀಕರಿಸಿದ ನಂತರ ಆಯಾ ಪ್ರಕರಣಕ್ಕೆ ತಕ್ಕಂತೆ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರವು ನಿರ್ಧಾರದಲ್ಲಿ ತಿಳಿಸಿದ ಕ್ರಮಗಳನ್ನು ಅನುಷ್ಠಾನಗೊಳಿಸಬೇಕು ಅಥವಾ ಆ ನಿರ್ಧಾರವು ಅಧೀನ ಪ್ರಾಧಿಕಾರ, ಅಂಗ ಅಥವಾ ಸಾರ್ವಜನಿಕ ಸೇವಕನಿಗೆ ಸಂಬಂಧಿಸಿದ್ದಾದರೆ ಅಂತಹ ಪ್ರಾಧಿಕಾರ, ಅಂಗ ಅಥವಾ ಸಾರ್ವಜನಿಕ ಅಧಿಕಾರಿ ಅದನ್ನು ಪ್ರಾಮಾಣಿಕವಾಗಿ ಮತ್ತು ಎಚ್ಚರಿಕೆಯಿಂದ ಅನುಷ್ಠಾನ ಮಾಡುವುದನ್ನು ಖಚಿತ ಪಡಿಸಿಕೊಳ್ಳಬೇಕು. ಕೈಗೊಂಡ ಕ್ರಮ ಅಥವಾ ಪ್ರಸ್ತಾವಿತ ಕ್ರಮಗಳನ್ನು ಪ್ರಾಮಾಣಿಕವಾಗಿ ಪ್ರಾಧಿಕಾರಕ್ಕೆ ವರದಿ ಮಾಡತಕ್ಕದ್ದು.

viii ರಾಷ್ಟ್ರೀಯ ಪ್ರಾಧಿಕಾರದಿಂದ ಸಲಹೆಯು ದೊರೆತ ನಂತರ ಆಯಾ ಪ್ರಕರಣಕ್ಕೆ ತಕ್ಕಂತೆ, ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರವು ಅನುಷ್ಠಾನವನ್ನು ಪ್ರಾಮಾಣಿಕವಾಗಿ ಪರಿಗಣಿಸತಕ್ಕದ್ದು, ಒಂದೊಮ್ಮೆ ವ್ಯತ್ಯಾಸ ಅಥವಾ ಅನುಮಾನಗಳು ಇದ್ದರೆ ಅದನ್ನು ರಾಷ್ಟ್ರೀಯ ಪ್ರಾಧಿಕಾರದೊಂದಿಗೆ ಚರ್ಚಿಸತಕ್ಕದ್ದು ಮತ್ತು ಸರ್ಕಾರವು ಸಲಹೆಯನ್ನು ಪ್ರಾಮಾಣಿಕವಾಗಿ ಅನುಷ್ಠಾನ ಮಾಡತಕ್ಕದ್ದು ಮತ್ತು ಜರುಗಿಸಿದ ಕ್ರಮ ಮತ್ತು ಪ್ರಸ್ತಾಪಿಸಿದ ಕ್ರಮವನ್ನು ರಾಷ್ಟ್ರೀಯ ಪ್ರಾಧಿಕಾರಕ್ಕೆ ತಿಳಿಸತಕ್ಕದ್ದು.

xi ರಾಷ್ಟ್ರೀಯ ಪ್ರಾಧಿಕಾರವು ವಿಚಾರಣೆಯಲ್ಲಿ ಅಥವಾ ಪ್ರಕ್ರಿಯೆಗಳ ವಿಷಯದಲ್ಲಿ ಅನಗತ್ಯ ವಿಳಂಬ ಕಂಡರೆ, ತ್ವರಿತ ವಿಚಾರಣೆಗೆ ಪರಿಣಾಮ ಬೀರುತ್ತದೆಯಾದರೆ ಅಂತಹ ವಿಷಯವನ್ನು ಪರಿಗಣಿಸಲು ಕೂಡಲೇ ಉಚ್ಚ ನ್ಯಾಯಾಲಯದ ಗಮನಕ್ಕೆ ತರಬೇಕು ಹಾಗೂ ಯಾವ ಕ್ರಮ ಸರಿಯೆಂದು ಉನ್ನತ ನ್ಯಾಯಾಲಯವು ತಿಳಿಸುತ್ತದೆಯೋ ಅದು.

xii ಈ ಕಾಯ್ದೆಯ ಉದ್ದೇಶವನ್ನು ಪೂರೈಸಲು ಉನ್ನತ ನ್ಯಾಯಾಲಯದ ನಿರ್ದೇಶನಗಳು ಅಗತ್ಯ ಎಂದು ಪರಿಗಣಿಸಿದರೆ, ರಾಷ್ಟ್ರೀಯ ಪ್ರಾಧಿಕಾರವು ಸರ್ವೋಚ್ಚ ನ್ಯಾಯಾಲಯದಲ್ಲಿ ಅಥವಾ ಉನ್ನತ ನ್ಯಾಯಾಲಯದಲ್ಲಿ ಯಾವುದೇ ಮನವಿಯನ್ನು ಸಲ್ಲಿಸಬಹುದು, ಅಥವಾ ಯಾವುದೇ ನ್ಯಾಯಾಲಯದ ಮುಂದೆ ಖಟ್ಲೆ ಹಾಕುವುದು ಆಗತ್ಯವೆಂದು ಕಂಡು ಬಂದರೆ ಅಂತಹ ಖಟ್ಲೆಯನ್ನು ಹಾಕಬಹುದು.

xiii ರಾಷ್ಟ್ರೀಯ ಪ್ರಾಧಿಕಾರ ಪ್ರತಿ ವರ್ಷವೂ ತನ್ನ ನಿರ್ಧಾರ ಮತ್ತು ಸಲಹೆ ಮತ್ತು ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರ ಅಥವಾ ಯಾವುದೇ ಸಾರ್ವಜನಿಕ ಪ್ರಾಧಿಕಾರ ಜರುಗಿಸಿದ ಕ್ರಮಗಳ ಸಂಗ್ರಹಣೆಯನ್ನು ತನ್ನ ಟೀಕೆಟಿಪ್ಪಣಿಯೊಂದಿಗೆ ರಾಷ್ಟ್ರಪತಿಗಳಿಗೆ ಸಲ್ಲಿಸತಕ್ಕದ್ದು. ರಾಷ್ಟ್ರೀಯ ಪ್ರಾಧಿಕಾರವು ಈ ಸಂಗ್ರಹಣೆಯ ಭಾಗವಾಗಿ ಕಾಯ್ದೆಯ ಸಮರ್ಪಕ ಅನುಷ್ಠಾನದ ಮತ್ತು ಪರಿಣಾಮಕಾರಿ ನಿರ್ಬಂಧನೆಯಲ್ಲಿ ಅಡ್ಡ ನಿಂತಿರುವ ಯಾವುದೇ ಅಂಶಗಳ ಕುರಿತು ತನ್ನ ಸಾಮಾನ್ಯ ಟೀಕೆಟಿಪ್ಪಣಿ ಅಥವಾ ಅವಲೋಕನವನ್ನು ಸಹ ಸಲ್ಲಿಸಬಹುದು ಮತ್ತು

xiv. ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರ ಅಥವಾ ಇನ್ನಾವುದೇ ಪ್ರಾಧಿಕಾರ ದೌರ್ಜನ್ಯದ ಪ್ರಕರಣದಲ್ಲಿ ಜರುಗಿಸಬೇಕಾದ ಶಿಕ್ಷೆ ಮತ್ತು ತೃಪ್ತಿಕರ ಪುನರ್ವಸತಿ ಕ್ರಮಗಳು.

3] **ಸೆಕ್ಷನ್: ಅಧ್ಯಾಯ–II B ಕಲಂ 19**

**ಪ್ರಸ್ತಾವಿತ ಪದಗಳು: ರಾಜ್ಯ ಮೇಲ್ವಿಚಾರಣೆ ಮತ್ತು ಅನುಷ್ಠಾನ ಪ್ರಾಧಿಕಾರ** – ರಾಜ್ಯ ಸರ್ಕಾರವು ಈ ಕಾಯ್ದೆಯಲ್ಲಿ ತಿಳಿಸಿದ ರಾಜ್ಯ ಸರ್ಕಾರಗಳು ಮತ್ತು ಇತರೆ ನಿಯೋಗಗಳು ಕೈಗೊಳ್ಳುವ ಕ್ರಮಗಳನ್ನು ಸಂಯೋಜಿಸುವುದನ್ನು ಖಚಿತಪಡಿಸಿಕೊಳ್ಳಲು ಹಾಗೂ ಈ ಕಾಯ್ದೆಯ ನಿಬಂಧನೆಗಳನ್ನು ಅನುಷ್ಠಾನಗೊಳಿಸಲು ರಾಜ್ಯ ಮೇಲ್ವಿಚಾರಣೆ ಮತ್ತು ಅನುಷ್ಠಾನ ಪ್ರಾಧಿಕಾರ ಎನ್ನುವ ಹೆಸರಿನ ಒಂದು ಅಂಗವನ್ನು ಸ್ಥಾಪಿಸುವುದು (ಇನ್ನು ಮುಂದೆ ರಾಜ್ಯ ಪ್ರಾಧಿಕಾರ ಎಂದು ಕರೆಯಲಾಗುವುದು).

(1) **ಸದಸ್ಯರು:** ರಾಜ್ಯ ಪ್ರಾಧಿಕಾರದಲ್ಲಿ ಒಬ್ಬ ಅಧ್ಯಕ್ಷ, ಇಬ್ಬರು ಸದಸ್ಯರು ಮತ್ತು ಒಬ್ಬ ನೋಡಲ್ ಅಧಿಕಾರಿಯು ರಾಜ್ಯ ಪ್ರಾಧಿಕಾರದ ಸದಸ್ಯ ಕಾರ್ಯದರ್ಶಿಯಾಗಿಯೂ, ಜಿಲ್ಲಾ ನೋಡಲ್ ಅಧಿಕಾರಿಗಳೂ ಇರುತ್ತಾರೆ.

(2) **ಅರ್ಹತೆ:** – (i) ದಕ್ಷ, ಪ್ರಾಮಾಣಿಕತೆ, ಸಾಮರ್ಥ್ಯ ಮತ್ತು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನರ ನ್ಯಾಯಕ್ಕಾಗಿ ಅನೇಕ ವರ್ಷಗಳ ಸ್ವಾರ್ಥರಹಿತ ಸೇವೆಯನ್ನು ಮತ್ತು ಅವರ ವ್ಯಕ್ತಿತ್ವದಿಂದಲೇ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನರ ಆತ್ಮವಿಶ್ವಾಸವನ್ನು ಹೆಚ್ಚಿಸುವಂತಹ ಮತ್ತು ಸ್ವಾರ್ಥರಹಿತ ಸೇವೆಯ ದಾಖಲೆಯುಳ್ಳ, ಅಧ್ಯಕ್ಷನಾಗಿ ಅಥವಾ ಇತರೆ ಸದಸ್ಯನಾಗಿ ರಾಜ್ಯದ ಮತ್ತು ಸಾಮಾಜಿಕ ಸೇವೆಯೆಂದು ಯಾವುದೇ ಸಂಭಾವನೆಯನ್ನು ಪಡೆಯದೇ ಇರುವಂತಹ ಸಾಮಾಜಿಕ ಕಾರ್ಯಕರ್ತರನ್ನು ಪ್ರಾಧಿಕಾರದ ಅಧ್ಯಕ್ಷ, ಇತರೆ ಸದಸ್ಯರನ್ನಾಗಿ ನೇಮಕ ಮಾಡಬೇಕು.

(ii) ನೋಡಲ್ ಅಧಿಕಾರಿಯು ಸರ್ಕಾರದ ಹಿರಿಯ ಕಾರ್ಯದರ್ಶಿಯ ಸ್ಥಾನಕ್ಕಿಂತ ಕಡಿಮೆ ಇಲ್ಲದವರು, ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನರ ನ್ಯಾಯಕ್ಕಾಗಿ ಅನೇಕ ವರ್ಷಗಳ ಸ್ವಾರ್ಥರಹಿತ ಸೇವೆಯನ್ನು ಮತ್ತು ಅವರ ವ್ಯಕ್ತಿತ್ವದಿಂದಲೇ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನರ ಆತ್ಮವಿಶ್ವಾಸವನ್ನು ಹೆಚ್ಚಿಸುವಂತಹ ಮತ್ತು ಸ್ವಾರ್ಥರಹಿತ ಸೇವೆಯ ದಾಖಲೆ ಹೊಂದಿದವರಾಗಿರಬೇಕು.

(iii) ಜಿಲ್ಲಾ ನೋಡಲ್ ಅಧಿಕಾರಿಗಳು ಒಬ್ಬ ಜಿಲ್ಲಾ ಕಲೆಕ್ಟರ್ ಸ್ಥಾನಕ್ಕಿಂತ ಕಡಿಮೆಯವರಾಗಿರಬಾರದು, ಇವರು ಟ್ರಿಬುನಲ್‌ನ ಪದನಿಮಿತ್ತ ಸದಸ್ಯರಾಗಿರುತ್ತಾರೆ.

(iv) ಮೂವರಲ್ಲಿ ಕನಿಷ್ಠ ಮತ್ತೊಬ್ಬ ಸದಸ್ಯ ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದವರಾಗಿರಬೇಕು ಹಾಗೂ ಇತರೆ ಸದಸ್ಯರು ಯಾವುದೇ ಸಮುದಾಯಕ್ಕೆ ಸೇರಿದವರಾಗಿರಬಹುದು, ಅಥವಾ ಮೇಲೆ ತಿಳಿಸಿದ ಉಪಬಂಧ (i)ರಲ್ಲಿ ವಿವರಿಸಿದ ಅರ್ಹತೆ ಮತ್ತು ಗುಣಗಳನ್ನು ಹೊಂದಿದವರಾಗಿರಬೇಕು.

(v) ಸಂಸತ್ತಿನ ಯಾವುದೇ ಸದಸ್ಯರು ಅಥವಾ ಯಾವುದೇ ರಾಜ್ಯದ ಅಥವಾ ಕೇಂದ್ರಾಡಳಿತ ಪ್ರದೇಶದ ಶಾಸನಸಭೆ ಸದಸ್ಯರು ಮತ್ತು ಲಾಭತರುವ

ಹುದ್ದೆಯನ್ನು ಹೊಂದಿದ ವ್ಯಕ್ತಿ ಅಥವಾ ರಾಜಕೀಯ ಪಕ್ಷದೊಟ್ಟಿಗೆ ಸಂಬಂಧ ಇರುವ ವ್ಯಕ್ತಿ ಅಥವಾ ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡದ ಹಿತಾಸಕ್ತಿಗೆ ವಿರೋಧ ಇರುವ ವ್ಯಕ್ತಿಯು ಅಧ್ಯಕ್ಷ ಮತ್ತು ಇತರೆ ಸದಸ್ಯರಾಗಬಾರದು.

(vi) ರಾಜ್ಯ ಪ್ರಾಧಿಕಾರದ ಅಧ್ಯಕ್ಷ ಮತ್ತು ಇತರೆ ಸದಸ್ಯರನ್ನು ರಾಜ್ಯ ಸರ್ಕಾರವು ಮೇಲೆ ತಿಳಿಸಿದ ಉಪಬಂಧ (i)ರಲ್ಲಿ ತಿಳಿಸಿದಂತೆ ಇರುವ ಅರ್ಹತೆ ಮತ್ತು ಗುಣಗಳು ಇರುವಂತಹ ವ್ಯಕ್ತಿಗಳ ಪ್ಯಾನೆಲ್ ತಯಾರಿಸಿ ಅಂತಹ ಪ್ಯಾನೆಲ್‌ನಿಂದ ಆಯ್ಕೆ ಮಾಡತಕ್ಕದ್ದು. ಪ್ಯಾನೆಲ್‌ನಲ್ಲಿ ಹೆಸರುಗಳನ್ನು ಸೇರಿಸಲು ರಾಜ್ಯ ಸರ್ಕಾರಗಳು ದಲಿತ ಮತ್ತು ಮಾನವಹಕ್ಕುಗಳ ಸಂಸ್ಥೆಗಳ ಮತ್ತು ಸಮರ್ಥ ಹೆಸರುಗಳನ್ನು ಸೂಕ್ತವಾಗಿ ಪರಿಶೀಲಿಸಿ ಪರಿಗಣಿಸತಕ್ಕದ್ದು. ನೇಮಕ ಮಾಡುವ ಈ ಪ್ಯಾನೆಲ್ ವ್ಯವಸ್ಥೆಯು ಮುಂದುವರೆಯುತ್ತದೆ ಹಾಗೂ ಹೆಸರುಗಳನ್ನು ಸೇರಿಸುವ ಮತ್ತು ತೆಗೆದು ಹಾಕುವ ಕೆಲಸವನ್ನು ಕಾಲಕಾಲಕ್ಕೆ ಮಾಡಲಾಗುವುದು. ಪ್ಯಾನೆಲ್ ಮತ್ತು ಕಾಲಕಾಲಕ್ಕೆ ಮಾಡಿದ ಬದಲಾವಣೆಗಳನ್ನು ರಾಜ್ಯ ಸರ್ಕಾರದ ಅಂತರ್ಜಾಲ ಮತ್ತು ಇತರೆ ಮಾಧ್ಯಮಗಳ ಮೂಲಕ ಸಾರ್ವಜನಿಕ ವಲಯಕ್ಕೆ ನೀಡುವುದು ಮತ್ತು ಪ್ಯಾನೆಲ್ ಸದಸ್ಯರ ವಿರುದ್ಧ ಬರುವಂತಹ ಯಾವುದೇ ಸತ್ಯಾಂಶವನ್ನು ರಾಜ್ಯ ಸರ್ಕಾರವು ಸತ್ಯಾಂಶದ ಅರ್ಹತೆಯ ಆಧಾರದಲ್ಲಿ ನೇಮಕಾತಿಯಲ್ಲಿ ಪರಿಗಣಿಸತಕ್ಕದ್ದು.

(1). **ಅಧ್ಯಕ್ಷರ ಮತ್ತು ಇತರೆ ಸದಸ್ಯರ ನೇಮಕಾತಿ:–** (i)ಅಧ್ಯಕ್ಷರು ಮತ್ತು ಇತರೆ ಸದಸ್ಯರನ್ನು ರಾಜ್ಯಪಾಲರು ತಮ್ಮ ಅಧಿಕಾರದಲ್ಲಿ ಅವರ ಸಹಿ ಮತ್ತು ಅಂಕಿತದ ಮೂಲಕ ನೇಮಕ ಮಾಡುವುದು. ಇಂತಹ ಪ್ರತಿ ನೇಮಕಾತಿಯೂ ಸಹ ಈ ಉಪಬಂಧದಲ್ಲಿ ತಿಳಿಸಿರುವ ಕೆಳಕಂಡ ಸಮಿತಿಯ ಶಿಫಾರಸ್ಸನ್ನು ಪಡೆದು ನೇಮಕಾತಿ ಮಾಡುವುದು–

a. ಮುಖ್ಯ ಮಂತ್ರಿಗಳು–ಅಧ್ಯಕ್ಷರು

b. ಶಾಸನಸಭೆಯ ಸಭಾಪತಿಗಳು–ಸದಸ್ಯರು

c. ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಮತ್ತು ಬುಡಕಟ್ಟು ಜನಾಂಗದ ಕಲ್ಯಾಣ ಮಂತ್ರಾಲಯದ ಉಸ್ತುವಾರಿ ಮಂತ್ರಿಗಳು, ರಾಜ್ಯ ಸರ್ಕಾರ–ಸದಸ್ಯರುಗಳು

d. ಶಾಸನಸಭೆಯ ವಿರೋಧ ಪಕ್ಷದ ನಾಯಕರು–ಸದಸ್ಯರು

e. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರ ವಿಶ್ವಾಸ ಗಳಿಸಿರುವ ನಾಗರಿಕ ಸಂಸ್ಥೆಗಳ ಸಮರ್ಥ ಸದಸ್ಯ–ಸದಸ್ಯರು

(i) ರಾಜ್ಯ ಪ್ರಾಧಿಕಾರದ ಅಧ್ಯಕ್ಷರ ಮತ್ತು ಇತರೆ ಸದಸ್ಯರ ನೇಮಕವು ಸಮಿತಿಯ ಹುದ್ದೆಯು ಖಾಲಿ ಇದ್ದ ಮಾತ್ರಕ್ಕೆ ಅನೂರ್ಜಿತಗೊಳ್ಳುವುದಿಲ್ಲ.

(2). **ಅಧಿಕಾರದ ಅವಧಿ ಮತ್ತು ಸೇವೆಗಳ ಷರತ್ತುಗಳು–** (i). ರಾಜ್ಯ ಪ್ರಾಧಿಕಾರದ ಸದಸ್ಯರ ಅಧಿಕಾರಾವಧಿಯು ಅಧಿಕಾರ ವಹಿಸಿಕೊಂಡ ದಿನದಿಂದ ಮೂರು ವರ್ಷಗಳಾಗಿರುತ್ತದೆ.

ಒಂದು ವೇಳೆ ಎಲ್ಲರೂ ಬೇರೆ ಬೇರೆ ದಿನಗಳಂದು ಅಧಿಕಾರ ವಹಿಸಿಕೊಂಡರೆ ಎಲ್ಲಾ ಮೂರು ಸದಸ್ಯರ ಅಧಿಕಾರಾವಧಿಯನ್ನು ಅಧ್ಯಕ್ಷರು ಅಧಿಕಾರ ವಹಿಸಿಕೊಂಡ ದಿನಾಂಕದಿಂದ ಗಣನೆ ಮಾಡಲಾಗುವುದು,

ಒಂದು ವೇಳೆ ಈ ಮೂರು ಸದಸ್ಯರಲ್ಲಿ ಯಾವುದಾದರೊಬ್ಬ ಸದಸ್ಯರ ಹುದ್ದೆಯು ಮೂರು ವರ್ಷಗಳಿಗೆ ಮೊದಲು ಯಾವುದಾದರೂ ಕಾರಣಗಳಿಗೆ ಖಾಲಿ ಆದರೆ, ಆ ಸ್ಥಾನಕ್ಕೆ ನೇಮಕಗೊಳ್ಳುವ ಸದಸ್ಯರ ಅಥವಾ ಅಧ್ಯಕ್ಷರ ಅಧಿಕಾರ ಅವಧಿಯು ಮೂರು ವರ್ಷಗಳಲ್ಲಿ ಉಳಿದ ಅವಧಿಗೆ ಮಾತ್ರ ಇರತಕ್ಕದ್ದು.

(ii) ಪ್ರಾಧಿಕಾರದ ಕೆಲಸಕ್ಕೆ ಸಂಬಂಧಿಸಿದ ಪ್ರಯಾಣಕ್ಕೆ ಅಥವಾ ಪ್ರಯಾಣದ ವೆಚ್ಚಕ್ಕೆ ಅವರು ಅರ್ಹರಾಗಿರುತ್ತಾರೆ.

(iii) ಪ್ರಾಧಿಕಾರದ ಅಧ್ಯಕ್ಷರ ಮತ್ತು ಇತರೆ ಸದಸ್ಯರ ಪ್ರಯಾಣ ಮತ್ತು ಪ್ರವಾಸವನ್ನು ದೇಶದ ಎಲ್ಲೆಡೆ ರಾಜ್ಯ ಸರ್ಕಾರದ ನೇರ ವೆಚ್ಚದಲ್ಲಿ ಪ್ರಯಾಣ ಭತ್ಯೆ ಮತ್ತು ಪ್ರಯಾಣ ಭತ್ಯೆಯ ಬಿಲ್ ಅಗತ್ಯತೆಯನ್ನು ನಿವಾರಿಸಿ ಎಲ್ಲಾ ರೀತಿಯ ವ್ಯವಸ್ಥೆಗಳನ್ನು ಮಾಡತಕ್ಕದ್ದು.

(iv) ಪ್ರಾಧಿಕಾರದ ಅಧ್ಯಕ್ಷರು ಅಥವಾ ಇನ್ನಾವುದೇ ಸದಸ್ಯರು ಪ್ರವಾಸ ಮಾಡುವ ಸಂದರ್ಭದಲ್ಲಿ ಉಳಿದುಕೊಳ್ಳಲು, ಅತಿಥ್ಯ ಮತ್ತು ಇತರೆ ಕಾರ್ಯಾಚರಣೆಯ ಸೌಲಭ್ಯಗಳನ್ನು ಅವರ ಸ್ಥಾನಕ್ಕೆ ಅನುಗುಣವಾಗಿ, ಯಾವುದೇ ವೆಚ್ಚವಿಲ್ಲದೆ ಪುಕ್ಕಟೆಯಾಗಿ ಅಥವಾ ರಾಜ್ಯ ಸರ್ಕಾರ/ಕೇಂದ್ರಾಡಳಿತ ಪ್ರದೇಶಗಳು ಖರ್ಚನ್ನು ಹೊರಿಸಬೇಕೆಂದು ಭಾವಿಸಿದರೆ ನೇರವಾಗಿ ರಾಜ್ಯ ಸರ್ಕಾರದ ಮೇಲೆ ಹೊರಿಸುವ ಮೂಲಕ ರಾಜ್ಯ ಸರ್ಕಾರ/ಕೇಂದ್ರಾಡಳಿತ ಪ್ರದೇಶದ ಆಡಳಿತವು ರಾಜ್ಯ ಅತಿಥಿ ಗೃಹಗಳಲ್ಲಿ ಸೂಕ್ತ ವ್ಯವಸ್ಥೆಗಳನ್ನು ಮಾಡತಕ್ಕದ್ದು. ಮತ್ತು ಅವರು ಯಾವುದೇ ಖಾಸಗಿ ಹೋಟೆಲುಗಳಲ್ಲಿ ಉಳಿದುಕೊಂಡು ಅತಿಥ್ಯ ಸ್ವೀಕರಿಸಬಾರದು.

(3). **ರಾಜಿನಾಮೆ ಮತ್ತು ತೆರವು–** (i) ರಾಜ್ಯ ಪ್ರಾಧಿಕಾರದ ಅಧ್ಯಕ್ಷರು ಮತ್ತು ಇತರೆ ಪ್ರತಿಯೊಬ್ಬ ಸದಸ್ಯರು ತಮ್ಮ ಹುದ್ದೆಗೆ ರಾಜಿನಾಮೆಯನ್ನು ತಾವು ಸಹಿ ಹಾಕಿದ ಸೂಚನೆಯ ಮೂಲಕ ರಾಜ್ಯಪಾಲರಿಗೆ ಸಲ್ಲಿಸಬಹುದು.

(ii) (a) ರಾಜ್ಯ ಪ್ರಾಧಿಕಾರದ ಅಧ್ಯಕ್ಷರು ಅಥವಾ ಇತರೆ ಸದಸ್ಯರನ್ನು ದುರ್ನಡತೆ ಅಥವಾ ಈ ಕಾಯ್ದೆಯ ಅಡಿಯಲ್ಲಿ ಬರುವ ತಮ್ಮ ಕಾರ್ಯ ಸಾಧನೆಯಲ್ಲಿ ಕೊರತೆಯ ಆಧಾರದಲ್ಲಿ ರಾಜ್ಯಪಾಲರು ಆದೇಶದ ಮೂಲಕ ಅಧಿಕಾರದಿಂದ ವಜಾಗೊಳಿಸಬಹುದು.

(b) ರಾಜ್ಯ ಪ್ರಾಧಿಕಾರದ ಅಧ್ಯಕ್ಷರು ಅಥವಾ ಇನ್ನಾವುದೇ ಸದಸ್ಯರ ಕುರಿತು ಈ ಉಪನಿಯಮದ ಅಡಿಯಲ್ಲಿ ಸರ್ವೋಚ್ಚ ನ್ಯಾಯಾಲಯಕ್ಕೆ ಉಲ್ಲೇಖ ನೀಡಿದ್ದರೆ, ಅಂತಹ ಉಲ್ಲೇಖದ ಮೇಲೆ ಸರ್ವೋಚ್ಚ ನ್ಯಾಯಾಲಯದ ವರದಿಯನ್ನು ಆಧರಿಸಿ ರಾಷ್ಟ್ರಪತಿಗಳು ಆದೇಶ ನೀಡುವವರೆಗೂ ರಾಜ್ಯಪಾಲರು ಅವರನ್ನು ಅಮಾನತ್ತಿನಲ್ಲಿ ಇಡಬಹುದು.

(c) ಉಪಬಂಧ (a)ಯಲ್ಲಿ ತಿಳಿಸಿರುವ ಎಲ್ಲವನ್ನೂ ಬದಿಗಿಟ್ಟು ರಾಜ್ಯ ಪ್ರಾಧಿಕಾರದ ಅಧ್ಯಕ್ಷರನ್ನು ಅಥವಾ ಇನ್ನಾವುದೇ ಸದಸ್ಯರನ್ನು ಈ ಕೆಳಕಂಡ ಕಾರಣಗಳಿಗಾಗಿ ಅಧಿಕಾರದಿಂದ ತೆರವುಗೊಳಿಸಬಹುದು.

(1) ದೀವಾಳಿ ಎಂದು ತೀರ್ಪು ಇತ್ತರೆ; ಅಥವಾ

(2) ತನ್ನ ಅಧಿಕಾರಾವಧಿಯಲ್ಲಿ ಕಛೇರಿಯ ಕರ್ತವ್ಯಗಳಿಂದ ಹೊರಗೆ ಯಾವುದೇ ರೀತಿಯ ವೇತನದ ಉದ್ಯೋಗದಲ್ಲಿ ಭಾಗಿಯಾಗಿದ್ದರೆ; ಅಥವಾ

3) ಯಾವುದೇ ಅಪರಾಧವು ಸಾಬೀತುಗೊಂಡು ಸೆರೆಮನೆಯ ಶಿಕ್ಷೆ ವಿಧಿಸಲ್ಪಟ್ಟಿದ್ದರೆ ಮತ್ತು ಅಂತಹ ಶಿಕ್ಷೆಯು ನೈತಿಕ ಭ್ರಷ್ಟತೆ ಎಂದು ರಾಜ್ಯಪಾಲರು ಅಭಿಪ್ರಾಯಪಟ್ಟರೆ; ಅಥವಾ

(4) ರಾಜ್ಯಪಾಲರ ಅಭಿಪ್ರಾಯದಲ್ಲಿ, ಬುದ್ಧಿ ಅಥವಾ ದೇಹ ಸ್ಥಿಮಿತದಲ್ಲಿ ಇಲ್ಲವೆಂಬ ಕಾರಣಕ್ಕೆ ಅಥವಾ ಆ ವ್ಯಕ್ತಿಯನ್ನು ಅಧಿಕಾರದಲ್ಲಿ ಮುಂದುವರಿಸುವುದು ಪರಿಶಿಷ್ಟ ಜಾತಿಯವರ ಹಿತಾಸಕ್ತಿಗೆ ಧಕ್ಕೆ ಬರುವಂತೆ ಅಧ್ಯಕ್ಷರ ಸ್ಥಾನಕ್ಕೆ ನಂದನೆ ಮಾಡಿದ್ದರೆ, ಅಥವಾ ಈ ಕಾಯ್ದೆಯ ಕಾರ್ಯಗಳನ್ನು ಪರಿಣಾಮಕಾರಿಯಾಗಿ ನೆರವೇರಿಸದೇ ಇದ್ದರೆ ಅಥವಾ ನಿರ್ಲಕ್ಷತನ ತೋರುವ ಮೂಲಕ ಅಧಿಕಾರದಲ್ಲಿ ಮುಂದುವರಿಯಲು ಯೋಗ್ಯತೆಯಿಲ್ಲ ಎಂದು ಕಂಡು ಬಂದರೆ.

ಆದರೆ ಈ ಉಪನಿಯಮದ ಅಡಿಯಲ್ಲಿ ಅಧ್ಯಕ್ಷರು ಅಥವಾ ಇನ್ನಾವುದೇ ಸದಸ್ಯರನ್ನು ಅಧಿಕಾರದಿಂದ ತೆರವುಗೊಳಿಸುವ ಮುನ್ನ ಅವರ ಬಿನ್ನಹಗಳನ್ನು ಕೇಳಲು ಸಕಾರಣದ ಅವಕಾಶ ನೀಡುವವರೆಗೂ ಅಧಿಕಾರದಿಂದ ತೆರವುಗೊಳಿಸಬಾರದು.

ರಾಷ್ಟ್ರೀಯ ಪ್ರಾಧಿಕಾರದ ಅಧ್ಯಕ್ಷರು ಅಥವಾ ಇನ್ನಾವುದೇ ಸದಸ್ಯರು ಅಥವಾ ಭಾರತ ಸರ್ಕಾರದ ಪರವಾಗಿ ಅಥವಾ ರಾಜ್ಯ ಸರ್ಕಾರದ ಪರವಾಗಿ ಯಾವುದೇ ರೀತಿಯಲ್ಲಿ ಯಾವುದೇ ಕರಾರುಗಳಲ್ಲಿ ಅಥವಾ ಒಪ್ಪಂದಗಳಲ್ಲಿ ಅಥವಾ ಲಾಭ ತರುವಂತಹ ಯಾವುದೇ ಕಂಪನಗಳ ಇತರೆ ಸದಸ್ಯರ ಜೊತೆಯಲ್ಲಿ ಭಾಗವಹಿಸಿದರೆ, ಹಿತಾಸಕ್ತಿ ಹೊಂದಿದ್ದರೆ ನಿಬಂಧನೆ(a) ಉದ್ದೇಶಕ್ಕಾಗಿ ಆತನನ್ನು ದುರ್ನಡತೆಯ ತಪ್ಪಿತಸ್ಥ ಎಂದು ಪರಿಗಣಿಸುವುದು.

**ಸೆಕ್ಷನ್: ಅಧ್ಯಾಯ II B ಕಲಂ 20**

**ಪ್ರಸ್ತಾವಿತ ಪದಗಳು: ರಾಜ್ಯ ಪ್ರಾಧಿಕಾರದ ಕಾರ್ಯಗಳು ಮತ್ತು ಅಧಿಕಾರಗಳು**– ರಾಜ್ಯ ಪ್ರಾಧಿಕಾರವು ಈ ಕಾಯ್ದೆಯ ಕಲಂ 18ರಲ್ಲಿ ವಿವರಿಸಲಾಗಿರುವ ರಾಷ್ಟ್ರೀಯ ಪ್ರಾಧಿಕಾರದ ಕಾರ್ಯಗಳು ಅಥವಾ ಅಧಿಕಾರಗಳಲ್ಲಿ ಎಲ್ಲವನ್ನೂ ಅಥವಾ ಯಾವುದೇ ಒಂದು ಕಾರ್ಯವನ್ನು ಸಂಬಂಧಪಟ್ಟ ವಿಚಾರದಲ್ಲಿ ನೆರವೇರಿಸತಕ್ಕದ್ದು

## 8. ಶಿಕ್ಷೆಯನ್ನು ಹೆಚ್ಚಿಸಲು ಪ್ರಸ್ತಾವಿಸಿದ ತಿದ್ದುಪಡಿಗಳು

1] **ಸೆಕ್ಷನ್**: ಕಲಂ 3 (1)

**ಕಾಯ್ದೆಯಲ್ಲಿದ್ದಂತೆ ಪದಗಳು:** *ಆರು ತಿಂಗಳಿಗೆ ಕಡಿಮೆಯಿಲ್ಲದ ಸೆರೆವಾಸ ಶಿಕ್ಷೆ ಆದರೆ ಐದು ವರ್ಷಗಳವರೆಗೂ ವಿಸ್ತರಿಸಬಹುದಾದ ಮತ್ತು ದಂಡದ ಶಿಕ್ಷೆಯನ್ನು ವಿಧಿಸಲಾಗುವುದು*

**ತಿದ್ದುಪಡಿಯಾದ ನಂತರದ ಪದಗಳು:** ಎರಡು ವರ್ಷಗಳಿಗೂ ಕಡಿಮೆಯಿಲ್ಲದ ಆದರೆ ಏಳು ವರ್ಷಗಳವರೆಗೂ ವಿಸ್ತರಿಸಬಹುದಾದ ಜೈಲುಶಿಕ್ಷೆ ಹಾಗೂ ದಂಡನೆಯನ್ನು ವಿಧಿಸಲಾಗುವುದು ಹಾಗೂ (iv) ಮತ್ತು (v) ಉಪಬಂಧಗಳಲ್ಲಿ ಅಪರಾಧ ಎಸಗಿದ್ದರೆ, ಅವರಿಂದ ಅಪರಾಧದಲ್ಲಿ ಶಾಮೀಲಾಗಿರುವಷ್ಟು ಭೂಮಿಯನ್ನು ಮುಟ್ಟುಗೋಲು ಹಾಕಿ, ದೌರ್ಜನ್ಯಕ್ಕೆ ಬಲಿಯಾದವರಿಗೆ ಸಿಗುವ ನಷ್ಟಪರಿಹಾರ, ಪರಿಹಾರ ಮತ್ತು ಪುನರ್ವಸತಿ, ಈ ಕಾಯ್ದೆಯಲ್ಲಿ ನೀಡುವ ಹಣಕ್ಕೆ ಹೆಚ್ಚುವರಿಯಾಗಿ ಈ ಭೂಮಿಯನ್ನು ಹಂಚುವುದು;

## 9. ಹೊಸ ಪದಗಳನ್ನು ಸೇರಿಸಲು ಪ್ರಸ್ತಾವನೆ

1] **ಸೆಕ್ಷನ್**: ಅಧ್ಯಾಯ–II, Sec. 3(2)(v)

**ಕಾಯ್ದೆಯಲ್ಲಿದ್ದಂತೆ ಪದಗಳು:** *ಐ.ಪಿ.ಸಿಯ (1860 ಸೆಕ್ಷನ್ 45) ಹತ್ತು ವರ್ಷಗಳ ಅಥವಾ ಹೆಚ್ಚಿನ ಜೈಲು ಶಿಕ್ಷೆ ವಿಧಿಸತಕ್ಕ ಯಾವುದೇ ಅಪರಾಧವನ್ನು ಒಬ್ಬ ವ್ಯಕ್ತಿ ಅಥವಾ ಆಸ್ತಿಯ ಮೇಲೆ ಅಂತಹ ವ್ಯಕ್ತಿ ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದ ಸದಸ್ಯ ಎನ್ನುವ ಆಧಾರದಲ್ಲಿ ಮಾಡಿ ಅಥವಾ ಅಂತಹ ಆಸ್ತಿಯು ಅಂತಹ ವ್ಯಕ್ತಿಗೆ ಸೇರಿದ್ದರೆ, ಜೀವಾವಧಿ ಶಿಕ್ಷೆ ಮತ್ತು ದಂಡವನ್ನು ವಿಧಿಸತಕ್ಕದ್ದು;*

**ತಿದ್ದುಪಡಿಯಾದ ನಂತರದ ಪದಗಳು:** ಐ.ಪಿ.ಸಿಯ (1860 ಸೆಕ್ಷನ್ 45) ಹತ್ತು ವರ್ಷಗಳ ಅಥವಾ ಹೆಚ್ಚಿನ ಜೈಲು ಶಿಕ್ಷೆ ವಿಧಿಸತಕ್ಕ ಯಾವುದೇ ಅಪರಾಧವನ್ನು ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದ ಸದಸ್ಯನ ಮೇಲೆ ಅಂತಹ ವ್ಯಕ್ತಿ ಎನ್ನುವ ಆಧಾರದಲ್ಲಿ ಮಾಡಿ ಅಥವಾ ಅಂತಹ ಆಸ್ತಿಯು ಅಂತಹ ವ್ಯಕ್ತಿಗೆ ಸೇರಿದ್ದರೆ, ಜೀವಾವಧಿ ಶಿಕ್ಷೆ ಮತ್ತು ದಂಡವನ್ನು ವಿಧಿಸತಕ್ಕದ್ದು ಹಾಗೂ ಅವನಿಗೆ ಸೇರಿದ ಎಲ್ಲಾ ಆಸ್ತಿಯನ್ನು ಮುಟ್ಟುಗೋಲು ಹಾಕಿಕೊಂಡು ಆ ಆಸ್ತಿಯನ್ನು ಬಲಿಯಾದ ವ್ಯಕ್ತಿ/ಗಳಿಗೆ ಈ ಕಾಯ್ದೆಯ ಅಡಿಯಲ್ಲಿ ದೊರೆಯುವ ಪುನರ್ವಸತಿ, ಪರಿಹಾರ ಮೊತ್ತ ಮತ್ತು ನಷ್ಟಪರಿಹಾರಯ ಮೊತ್ತದ ಜೊತೆಗೆ ಸೇರಿಸಿ ವಿತರಿಸುವುದು;

2] **ಸೆಕ್ಷನ್**: ಅಧ್ಯಾಯ–II, ಕಲಂ. 3(2)(vii)

**ಕಾಯ್ದೆಯಲ್ಲಿದ್ದಂತೆ ಪದಗಳು:** *ಒಬ್ಬ ಸಾರ್ವಜನಿಕ ಸೇವಕನಾಗಿ, ಈ ಕಲಂ ಅಡಿಯಲ್ಲಿ ಯಾವುದೇ ಅಪರಾಧ ಮಾಡಿದರೆ, ಒಂದು ವರ್ಷದ ಅವಧಿಗಿಂತಲೂ ಕಡಿಮೆ ಅಲ್ಲದ ಜೈಲು ಶಿಕ್ಷೆ ಮತ್ತು ಅಂತಹ ಅಪರಾಧಕ್ಕೆ ವಿಧಿಸಲು ನೀಡಿರುವ ಶಿಕ್ಷೆಯನ್ನು ವಿಧಿಸತಕ್ಕದ್ದು.*

**ತಿದ್ದುಪಡಿಯಾದ ನಂತರದ ಪದಗಳು:** ಒಬ್ಬ ಸಾರ್ವಜನಿಕ ಸೇವಕನಾಗಿ, ಈ ಕಲಂ ಅಡಿಯಲ್ಲಿ ಯಾವುದೇ ಅಪರಾಧ ಮಾಡಿದರೆ, ಪ್ರಥಮ ಮಾಹಿತಿ ವರದಿ ದಾಖಲದ ಮರುಕ್ಷಣವೇ ಅಮಾನತ್ತುಗೊಳಿಸಬೇಕು ಮತ್ತು ಅಂತಹ ಅಮಾನತ್ತು ವಿಚಾರಣೆ ಮುಗಿಯುವವರೆಗೂ ಜಾರಿಯಲ್ಲಿರಬೇಕು ಹಾಗೂ ವಿಚಾರಣೆ ಮುಗಿಯುವವರೆಗೂ ಯಾವುದೇ ಬಡತಿ, ಬಹುಮಾನ, ಪ್ರತಿಫಲ ನೀಡಬಾರದು ಹಾಗೂ ಮೂರು ವರ್ಷಗಳಿಗೂ ಕಡಿಮೆ ಅಲ್ಲದ ಜೈಲು ಶಿಕ್ಷೆ ಆದರೆ ಆ ಅಪರಾಧಕ್ಕೆ ವಿಧಿಸಲು ಒದಗಿಸಿರುವ ಅತ್ಯಂತ ಹೆಚ್ಚಿನ ಶಿಕ್ಷೆಯನ್ನು ತಿಳಿಸಲಾಗಿರುವಂತೆ ವಿಸ್ತರಿಸಬಹುದಾದ ಶಿಕ್ಷೆಯನ್ನು ವಿಧಿಸತಕ್ಕದ್ದು;

3] **ಸೆಕ್ಷನ್**: ಅಧ್ಯಾಯ–II, ಕಲಂ8 (c)

**ಕಾಯ್ದೆಯಲ್ಲಿದ್ದಂತೆ ಪದಗಳು:** *ಈ ಉಪಬಂಧವನ್ನು ಕಲಂ 8ರ ಅಡಿಯಲ್ಲಿ ಹೊಸ ಉಪಬಂಧವನ್ನಾಗಿ ಸೇರಿಸಲು ಪ್ರಸ್ತಾಪಿಸಲಾಗಿದೆ.*

**ತಿದ್ದುಪಡಿಯಾದ ನಂತರದ ಪದಗಳು:** ನಿರ್ದಿಷ್ಟವಾದ ಒಂದು ಕೃತ್ಯ ಮಾಡಿದರೆ, ಅದು ಸಾಮಾನ್ಯ ಸಂದರ್ಭದಲ್ಲಿ ಈ

ಕಾಯ್ದೆಯ ಅಡಿಯಲ್ಲಿ ಅಪರಾಧ ಆಗುತ್ತದೆ ಎಂದು ಸಾಬೀತಾದರೆ, ಅದನ್ನು ಇಂತಹ ಅಪರಾಧಕ್ಕೆ ಎಡೆ ಮಾಡುತ್ತದೆ ಎಂಬ ಉದ್ದೇಶದ ಅಥವಾ ಅರಿವು ಇದ್ದು ಮಾಡಿದ ಕೃತ್ಯ ಎಂದು ಪರಿಗಣಿಸತಕ್ಕದ್ದು, ಈ ಕಾಯ್ದೆಯಲ್ಲಿ ಬರುವ ಯಾವುದೇ ಅಪರಾಧವನ್ನು ಸಾಬೀತು ಮಾಡುವ ಅಗತ್ಯವಿರುವುದಿಲ್ಲ.

4] **ಸೆಕ್ಷನ್:** ಅಧ್ಯಾಯ–IIIಕಲಂ 10(1)

**ಕಾಯ್ದೆಯಲ್ಲಿದ್ದಂತೆ ಪದಗಳು:** *ಒಂದು ದೂರಿನಂದ ಅಥವಾ ಪೋಲೀಸ್ ವರದಿಯಿಂದ ಒಬ್ಬ ವ್ಯಕ್ತಿಯು ಈ ಕಾಯ್ದೆಯ ಅಧ್ಯಾಯ II ರಲ್ಲಿ ತಿಳಿಸಿದ ಯಾವುದೇ 'ಪರಿಶಿಷ್ಟ ಪ್ರದೇಶ' ಅಥವಾ 'ಬುಡಕಟ್ಟು ಜನಾಂಗದ ಪ್ರದೇಶ',ದಲ್ಲಿ ಅಪರಾಧ ಎಸಗಬಹುದು ಎಂದು ವಿಶೇಷ ನ್ಯಾಯಾಲಯಕ್ಕೆ ತೃಪ್ತಿಯಾದಲ್ಲಿ ಸಂವಿಧಾನದ 244ರಲ್ಲಿ ತಿಳಿಸಿದಂತೆ ಬರವಣಿಗೆಯ ಒಂದು ಆದೇಶದ ಮೂಲಕ, ಅಂತಹ ವ್ಯಕ್ತಿಗೆ ಅಪರಾಧವನ್ನು ದೂರ ತೆಗೆದು ಹಾಕಬೇಕು ಎಂದು ನಿರ್ದೇಶಿಸಬಹುದು. ಅಂತಹ ಪ್ರದೇಶದ ವ್ಯಾಪ್ತಿಯಿಂದ ಹೊರಗೆ, ಅಂತಹ ಮಾರ್ಗದ ಮೂಲಕ, ಮತ್ತು ಆದೇಶದಲ್ಲಿ ತಿಳಿಸಿದ ಅಂತಹ ಸಮಯದ ಒಳಗಾಗಿ, ಮತ್ತು ಆ ಪ್ರದೇಶಕ್ಕೆ ಮರಳಿ ಬರಬಾರದೆಂದು, ಅಂತಹ ಸಮಯ ಎರಡು ವರ್ಷಗಳಿಗೆ ಮೀರದಂತೆ, ಆದೇಶದಲ್ಲಿ ಸೂಚಿಸಿದಂತೆ ನಿರ್ದೇಶನ ನೀಡಬಹುದು.*

**ತಿದ್ದುಪಡಿಯಾದ ನಂತರದ ಪದಗಳು:** ಒಂದು ದೂರಿನಂದ ಅಥವಾ ಪೋಲೀಸ್ ವರದಿಯಿಂದ ಒಬ್ಬ ವ್ಯಕ್ತಿಯು ಈ ಕಾಯ್ದೆಯ ಅಧ್ಯಾಯ II ರಲ್ಲಿ ಒಳಪಡಿಸಿದ ಯಾವುದೇ 'ಪರಿಶಿಷ್ಟ ಪ್ರದೇಶ' ಅಥವಾ 'ಬುಡಕಟ್ಟು ಜನಾಂಗದ ಪ್ರದೇಶ'ದಲ್ಲಿ ಅಥವಾ ಅಧಿಸೂಚನೆಯಲ್ಲಿ ಗುರುತಿಸಲಾದ ಯಾವುದೇ ಜಿಲ್ಲೆಯ ಯಾವುದೇ ಪ್ರದೇಶದಲ್ಲಿ, ಅಪರಾಧ ಎಸಗಬಹುದು ಎಂದು ವಿಶೇಷ ನ್ಯಾಯಾಲಯಕ್ಕೆ ತೃಪ್ತಿಯಾದಲ್ಲಿ ಸಂವಿಧಾನದ 244ರಲ್ಲಿ ತಿಳಿಸಿದಂತೆ ಬರವಣಿಗೆಯ ಒಂದು ಆದೇಶದ ಮೂಲಕ, ಅಂತಹ ವ್ಯಕ್ತಿಗೆ ಅಪರಾಧವನ್ನು ದೂರ ತೆಗೆದು ಹಾಕಬೇಕು ಎಂದು ನಿರ್ದೇಶಿಸಬಹುದು. ಅಂತಹ ಪ್ರದೇಶದ ವ್ಯಾಪ್ತಿಯಿಂದ ಹೊರಗೆ, ಅಂತಹ ಮಾರ್ಗದ ಮೂಲಕ, ಮತ್ತು ಆದೇಶದಲ್ಲಿ ತಿಳಿಸಿದ ಅಂತಹ ಸಮಯದ ಒಳಗಾಗಿ, ಮತ್ತು ಆ ಪ್ರದೇಶಕ್ಕೆ ಮರಳಿ ಬರಬಾರದೆಂದು, ಅಂತಹ ಸಮಯ ಎರಡು ವರ್ಷಗಳಿಗೆ ಮೀರದಂತೆ, ಆದೇಶದಲ್ಲಿ ಸೂಚಿಸಿದಂತೆ ನಿರ್ದೇಶನ ನೀಡಬಹುದು.

5] **ಸೆಕ್ಷನ್:** ಅಧ್ಯಾಯ–V ಕಲಂ 21 (3)

**ಕಾಯ್ದೆಯಲ್ಲಿದ್ದಂತೆ ಪದಗಳು:** *ಕೇಂದ್ರ ಸರ್ಕಾರವು ಅಗತ್ಯಕ್ಕೆ ತಕ್ಕಂತೆ ರಾಜ್ಯ ಸರ್ಕಾರಗಳು ಕಲಂ (1)ರ ಉಪಬಂಧದಲ್ಲಿ ತಿಳಿಸಿದ ಕ್ರಮಗಳನ್ನು ಸಂಯೋಜಿಸಲು ಕ್ರಮ ಕೈಗೊಳ್ಳಬೇಕು.*

**ತಿದ್ದುಪಡಿಯಾದ ನಂತರದ ಪದಗಳು:** ಕೇಂದ್ರ ಸರ್ಕಾರವು ಅಗತ್ಯಕ್ಕೆ ತಕ್ಕಂತೆ ರಾಜ್ಯ ಸರ್ಕಾರಗಳು ಕಲಂ (1)ರ ಉಪಬಂಧದಲ್ಲಿ ತಿಳಿಸಿದ ಕ್ರಮಗಳನ್ನು ಸಂಯೋಜಿಸಲು ಕ್ರಮ ಕೈಗೊಳ್ಳಬೇಕು. (1) ಮತ್ತು ಈ ಕಾಯ್ದೆಯನ್ನು ಎಲ್ಲಾ ರೀತಿಯಿಂದಲೂ ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಯಾವುದೇ ರಾಜ್ಯ ಸರ್ಕಾರಗಳಿಗೆ ಸಂವಿಧಾನದ ಅನುಚ್ಛೇದ 339(2) ಮತ್ತು ಅನುಚ್ಛೇದ 256 ಬಳಸಿ ನಿರ್ದೇಶನ ನೀಡಬಹುದು

6] **ಸೆಕ್ಷನ್:** ಅಧ್ಯಾಯ–V ಕಲಂ 21 (5)

**ಕಾಯ್ದೆಯಲ್ಲಿದ್ದಂತೆ ಪದಗಳು:** *ಈ ಉಪಬಂಧವನ್ನು ಹೊಸ ಉಪಬಂಧವನ್ನಾಗಿ ಕಲಂ 21ರ ಅಡಿಯಲ್ಲಿ ಸೇರಿಸಲು ಪ್ರಸ್ತಾಪಿಸಲಾಗಿದೆ.*

**ತಿದ್ದುಪಡಿಯಾದ ನಂತರದ ಪದಗಳು:**

(i) ಉನ್ನತ ನ್ಯಾಯಾಲಯದ ಅಥವಾ ವಿಶೇಷ ನ್ಯಾಯಾಲಯದ ಯಾವುದೇ ತೀರ್ಪು ಅಥವಾ ಆದೇಶದ ವಿರುದ್ಧ ಯಾವುದೇ ಸಂದರ್ಭದಲ್ಲಿಯಾದರೂ ಮಧ್ಯಂತರ ಅರ್ಜಿಯನ್ನೂ ಒಳಗೊಂಡಂತೆ ಯಾವುದೇ ಮನವಿ ಅಥವಾ ವಿಶೇಷ ಮನವಿ ಅಥವಾ ಇತರೆ ಯಾವುದೇ ಮನವಿಯನ್ನು ಸರ್ವೋಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿದರೆ, ತಕ್ಷಣವೇ ಪ್ರತ್ಯೇಕವಾಗಿ ಆ ಮನವಿಯನ್ನು ಆಲಿಸಿ ತೀರ್ಮಾನ ತೆಗೆದುಕೊಳ್ಳುವಂತೆ ಸರ್ವೋಚ್ಚ ನ್ಯಾಯಾಲಯವನ್ನು ಸೂಕ್ತ ರೀತಿಯಲ್ಲಿ ಕೇಂದ್ರ ಸರ್ಕಾರವು ಕೋರಬೇಕು.

(ii) ವಿಶೇಷ ನ್ಯಾಯಾಲಯದ ಯಾವುದೇ ತೀರ್ಪು ಅಥವಾ ಆದೇಶದ ವಿರುದ್ಧ ಯಾವುದೇ ಸಂದರ್ಭದಲ್ಲಿಯಾದರೂ ಮಧ್ಯಂತರ ಅರ್ಜಿಯನ್ನೂ ಒಳಗೊಂಡಂತೆ ಯಾವುದೇ ಮನವಿ ಅಥವಾ ವಿಶೇಷ ಮನವಿ ಅಥವಾ ಇತರೆ ಯಾವುದೇ ಮನವಿಯನ್ನು ಉನ್ನತ ನ್ಯಾಯಾಲಯದಲ್ಲಿ ಸಲ್ಲಿಸಿದರೆ, ತಕ್ಷಣವೇ ಪ್ರತ್ಯೇಕವಾಗಿ ಆ ಮನವಿಯನ್ನು ಆಲಿಸಿ ತೀರ್ಮಾನ ತೆಗೆದುಕೊಳ್ಳುವಂತೆ ಉನ್ನತ ನ್ಯಾಯಾಲಯವನ್ನು ಸೂಕ್ತ ರೀತಿಯಲ್ಲಿ ರಾಜ್ಯ ಸರ್ಕಾರವು ಕೋರಬೇಕು.

## 10. ಇತರೆ ಕಾನೂನುಗಳು ಮತ್ತು ಸಂವಿಧಾನದಲ್ಲಿ ಪೂರಕವಾಗುವ ಪ್ರಸ್ತಾಪಿತ ತಿದ್ದುಪಡಿಗಳು

1. **ಸಂವಿಧಾನದ, ಏಳನೇ ಪರಿಶಿಷ್ಟ, III ಪಟ್ಟಿಯಲ್ಲಿ–ಅನುಮೋದಿತ ಪಟ್ಟಿಯಲ್ಲಿ ಈ ಕೆಳಕಂಡವುಗಳನ್ನು ಸೇರಿಸಬೇಕು:**

   'ಪರಿಶಿಷ್ಟ ಜಾತಿಗಳ ಮತ್ತು ಪರಿಶಿಷ್ಟ ಪಂಗಡದವರ ರಕ್ಷಣೆ, ಕಲ್ಯಾಣ, ಅಭಿವೃದ್ಧಿ, ಪ್ರಗತಿ ಮತ್ತು ಸಬಲೀಕರಣ'

2. **ಜನರನ್ನು ಪ್ರತಿನಿಧಿಸುವ, ಕಾಯ್ದೆ, 1951ರಲ್ಲಿ ಕಲಂ 8ರ ಉಪಬಂಧ (1)ರಲ್ಲಿ ತಲೆಬರಹ "ಕೆಲವು ಅಪರಾಧಗಳಲ್ಲಿ ಶಿಕ್ಷೆಯಾಗಿದ್ದರೆ ಅನರ್ಹ", ಈ ಕೆಳಕಂಡ ಹೊಸ ಪರಿಚ್ಛೇದಗಳನ್ನು ಸೇರಿಸಬೇಕು–**

   (೦) ಪರಿಶಿಷ್ಟ ಜಾತಿಗಳ ಮತ್ತು ಪರಿಶಿಷ್ಟ ಪಂಗಡದವರ (ದೌರ್ಜನ್ಯ ತಡೆ) ಕಾಯ್ದೆ 1989 (1989ರ 33ನೇ ಕಾಯ್ದೆ)

3. **ಕ್ರಿಮಿನಲ್ ದಂಡ ಸಂಹಿತೆ (ತಿದ್ದುಪಡಿ) ಕಾಯ್ದೆ 2008 (2009ರ 5ನೇ ಕಾಯ್ದೆ)ರಲ್ಲಿ ಹೊಸ ಕಲಂಗಳನ್ನು ಸೇರಿಸಬೇಕು: ಪರಿಶಿಷ್ಟ ಜಾತಿಗಳ ಮತ್ತು ಪರಿಶಿಷ್ಟ ಪಂಗಡಗಳ (ದೌರ್ಜನ್ಯ ತಡೆ) ಕಾಯ್ದೆ 1989 ಕಲಂ 41ಎ, 41ಬಿ, 41ಸಿ ಮತ್ತು 41ಡಿ ಗಳಿಗೆ ಒಳಪಡುವುದಿಲ್ಲ, ಹಾಗೆಯೇ ಇದೇ ತಿದ್ದುಪಡಿ ಕಾಯ್ದೆಯಲ್ಲಿ ಸೇರಿಸಲಾಗಿರುವ 372ರ ನಿಬಂಧನೆಗಳಲ್ಲಿ ಬಲಿಯಾದ ವ್ಯಕ್ತಿಗೆ ಮನವಿ ಸಲ್ಲಿಸುವ ಹಕ್ಕು ಇರುತ್ತದೆ ಎನ್ನುವುದು ಪರಿಶಿಷ್ಟ ಜಾತಿಗಳ ಮತ್ತು ಪರಿಶಿಷ್ಟ ಪಂಗಡಗಳ (ದೌರ್ಜನ್ಯ ತಡೆ) ಕಾಯ್ದೆ 1989ಕ್ಕೆ ಅನ್ವಯಿಸುವ ತಿದ್ದುಪಡಿ ಜಾರಿಯಲ್ಲಿರುತ್ತದೆ.**

## Why this National Campaign?

- *Scheduled Castes (SCs) and Scheduled Tribes (STs) are the worst affected regarding all forms of atrocities covered under the SC/ST (PA) Act because, inter alia, they are minorities; because they are excluded from full enjoyment of national and state level resources and power; and because the SCs in particular are considered untouchables and hence denied social mobility.*

- *There is a clear trend of increasing atrocities against SCs and STs, with new forms of caste, class and gender discrimination and violence emerging over the years. This is compounded by the difficulties in accessing justice once atrocities take place, and inadequate implementation of protection mechanisms to stem the tide of atrocities.*

*These are weighty reasons to assess the status of implementation of the Act by national and state governments, to scrutinize the lacunae in the scope of the Act, and to suggest ways to make it a more effective mechanism for guaranteeing security of life to all SCs/STs and above-excluded minority communities.*

*Two decades of the Act and over 60 years of India's Independence provide an opportune time span to embark on this enterprise of demanding state accountability to the most excluded and neglected communities in the country.*

## What is the thrust of this National Campaign?

- **State accountability for inadequate implementation of the *SC/ST (PoA) Act.***
- **Adequate political will to ensure State implementation of the Act *in toto.***
- **Legislative amendments to the Act to expand and strengthen its scope and provisions, particularly regarding the rights of victims and witnesses.**
- **Greater gender focus in the Act.**
- **Exclusive judicial mechanisms to ensure speedy trials so as to fulfil the deterrence purpose of the Act.**
- **Inclusion in the Act of excluded marginalised communities: various tribal and ethnic groups in the country; SCs/STs belonging to religious minority communities especially Muslims and Christians; and SC/ST migrant workers.**

## Who has launched this National Campaign?

- On 25 June 2009, the National Campaign on Dalit Human Rights (NCDHR) initiated a consultation in New Delhi on the status of implementation of the *SC&ST (PoA) Act* through one of its core units, National Dalit Movement for Justice. Adivasi, Dalit and human rights organizations and movements, activists and experts from various states participating in the consultation formed themselves into the ***National Coalition for Strengthening the SC&ST Prevention of Atrocities Act.***

- The Coalition decided to prepare a position paper and draft Amendment Bill based on various recommendations given by the National and State Commissions, various civil society organisations and experts, apart from the guidelines issued by the Ministry of Social Justice and Empowerment and the Home Ministry for better enforcement of the Act.

- On 11 September 2009, marking 20 years since the Act received assent from the President of India, a National Convention was organised in New Delhi to review the implementation of the Act and the accompanying Rules, and deliberate on the amendments and strategies required to strengthen implementation.

- A National Campaign Programme is underway to disseminate information on the proposed Amendment Bill and mobilise support among Dalits, Adivasis, their solidarity partners and all those believing in equal security and empowerment for all Indian citizens. The Amendment Bill will finally be presented to the Government of India, with sustained lobbying and advocacy to ensure that it is placed before, and thereafter passed by, the Parliament.

*Coalition Advisor:* Shri P.S Krishnan – Rtd IAS

*Convener:* Dr. Sirivella Prasad, NCDHR-NDMJ

*Core Group:* Ossie Fernandez - HRF, Nandagopal - SAKSHI, Adv. Vrinda Grover - MARG, Rameshnathan - SASY, Narendra Kumar - IPAC, Prof. Krishna Dev Rao - IGNOU, Adv. P.L. Mimroth - CDR, N. Paul Divakar - NCDHR-DAAA, Ruth Manorama – NFDW, Henri Tiphagne – People's Watch, Babloo Loitongbam - HRA R. Ravikumar-NDF.

ಮನುಷ್ಯರ ಹಕ್ಕುಗಳು ಉಲ್ಲಂಘನೆಯಾದಾಗ, ನೊಂದ ವ್ಯಕ್ತಿಗೆ ಪರಿಹಾರ ದೊರೆತರೆ ಮಾತ್ರ ಹಕ್ಕುಗಳು ಸಾಕಾರಗೊಳ್ಳುತ್ತವೆ. ನೊಂದವರಿಗೆ ಕಾನೂನು ಪರಿಹಾರ ಸಿಗದಿದ್ದರೆ ಅಂತಹ ಹಕ್ಕುಗಳನ್ನು ನೀಡುವುದರಿಂದ ಯಾವ ಪ್ರಯೋಜನವೂ ಇಲ್ಲ.

ಡಾ. ಬಿ.ಆರ್. ಅಂಬೇಡ್ಕರ್

ಪರಿಶಿಷ್ಟರ ಮತ್ತು ಹಿರಿಯ ನಾಗರಿಕರ ಮೇಲೆ ದೌರ್ಜನ್ಯದ ವರದಿಗಳು ಪದೇ ಪದೇ ಬರುತ್ತಿವೆ. ಇದು ಕಳವಳಕಾರಿ ವಿಚಾರ. ಇದಕ್ಕಾಗಿ ದೌರ್ಜನ್ಯ ತಡೆ ಕಾಯ್ದೆಯನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸಬೇಕೆಂದು ತಿಳಿಸಿ ನಾನು ಇತ್ತೀಚೆಗೆ ಎಲ್ಲಾ ರಾಜ್ಯದ ಮುಖ್ಯಮಂತ್ರಿಗಳಿಗೆ ಬರೆದಿದ್ದೇನೆ. ಐ.ಪಿ.ಸಿ ಅಡಿಯಲ್ಲಿ ಆಗುವ ಅಪರಾಧಗಳಿಗೆ ಶಿಕ್ಷೆಯ ಪ್ರಮಾಣವನ್ನು ಹೋಲಿಸಿದರೆ ದೌರ್ಜನ್ಯ ಪ್ರಕರಣಗಳಲ್ಲಿ ಶಿಕ್ಷೆಯ ಪ್ರಮಾಣ 30%ಕ್ಕೂ ಕಡಿಮೆ ಎಂಬುದು ಅಘಾತಕಾರಿ ಬೆಳವಣಿಗೆ"

ಪ್ರಧಾನ ಮಂತ್ರಿ ಮನಮೋಹನ ಸಿಂಗ್,

ದೌರ್ಜನ್ಯಗಳು ಪ್ರಗತಿಯನ್ನು ಮಸುಕುಗೊಳಿಸುತ್ತವೆ. ಆರ್ಥಿಕ ಪ್ರಗತಿಗಿಂತಲೂ ದುರ್ಬಲರಿಗೆ ನ್ಯಾಯ ಒದಗಿಸುವುದು ನಮ್ಮೆಲ್ಲರ ಆದ್ಯತೆಯ ಕೆಲಸವಾಗಬೇಕು. ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿಯಲ್ಲಿ ಪರಿಶಿಷ್ಟರಿಗೆ ಸಮಾನತೆ ಸೃಜಿಸುವುದು ಹಾಗೂ ಅವರ ನಾಗರಿಕ, ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಹಕ್ಕುಗಳ ಚ್ಯುತಿಯದಾಗ ಮತ್ತು ದೌರ್ಜನ್ಯಗಳಾದಾಗ ಅವುಗಳನ್ನು ಅವರೇ ನಿಭಾಯಿಸುವಂತೆ ಮಾಡುವುದು ನಮ್ಮ ಧ್ಯೇಯವಾಗಬೇಕು. ಈವರೆಗೆ ದಬ್ಬಾಳಿಕೆಗೆ ಒಳಗಾಗಿದ್ದವರಿಗೆ ಮುಕ್ತ ಸಮಾಜ ಮತ್ತು ಎಲ್ಲರನ್ನೂ ಒಳಗೊಂಡ ಪ್ರಜಾಪ್ರಭುತ್ವ ಎಲ್ಲರಿಗೆ ಕಡ್ಡಾಯವಾಗಿ ದೊರಕುವಂತಹ ಮತ್ತು ನಾವೆಲ್ಲರೂ ಅದನ್ನು ಅನುಭವಿಸುವ ಅಭಿವೃದ್ಧಿಯ ಪಥ ನಮ್ಮದಾಗಬೇಕು"

ಪ್ರಧಾನ ಮಂತ್ರಿ ಮನಮೋಹನ ಸಿಂಗ್,

125/1, 15ನೇ ಕ್ರಾಸ್, 5ನೇ ಮೇನ್, ಆರ್.ಟಿ. ನಗರ, 2ನೇ ಬ್ಲಾಕ್,
ಬೆಂಗಳೂರು-560032 (ಮೊಬೈಲ್: 92421-39948/98455-87502)